ಓಂ

॥ ಶ್ರೀಗುರುಬಸವಲಿಂಗಾಯ ನಮಃ ॥

ಶ್ರೀ ಮಗ್ಗೆಯ ಮಾಯಿದೇವ ಪ್ರಭು

ವಿರಚಿತ

ಶಿವಾಧವ - ಶಿವಾವಲ್ಲಭ - ಮಹದೈಪುರೀಶ್ವರ

# ಶತಕತ್ರಯವು

ಪ್ರಕಾಶಕರು :

ಶ್ರೀ ನಿ. ಪ್ರ. ಸ್ವ. ಮಹಾಂತಸ್ವಾಮಿಗಳು,

ಗುರು ಮೃತ್ಯುಂಜಯ ಸ್ವಾಮಿಗಳು

ಶ್ರೀ ಮುರುಘಾಮಠ

ಮೃತ್ಯುಂಜಯನಗರ

ಧಾರವಾಡ



*



ಸಂಪಾದಕರು :

ಪಂಡಿತ ವೈ. ನಾಗೇಶಶಾಸ್ತ್ರಿಗಳು

ಬಳ್ಳಾರಿ

ಓಂ

॥ ಶ್ರೀಗುರುಬಸವಲಿಂಗಾಯ ನಮಃ ॥

ಶ್ರೀ ಮಗ್ಗೆಯ ಮಾಯಿದೇವ ಪ್ರಭು

ವಿರಚಿತ

ಶಿವಾಧವ - ಶಿವಾವಲ್ಲಭ - ಮಹದೈಪುರೀಶ್ವರ

# ಶತಕತ್ರಯವು

ಪ್ರಕಾಶಕರು :

ಶ್ರೀ. ನಿ. ಪ್ರ. ಸ್ವ. ಮಹಾಂತಸ್ವಾಮಿಗಳು,
ಗುರು ಮೃತ್ಯುಂಜಯ ಸ್ವಾಮಿಗಳು
ಶ್ರೀ ಮುರುಘಾಮಠ
ಮೃತ್ಯುಂಜಯನಗರ
ಧಾರವಾಡ



*

ಸಂಪಾದಕರು :

ಪಂಡಿತ ವೈ. ನಾಗೇಶಶಾಸ್ತ್ರಿಗಳು
ಬಳ್ಳಾರಿ

ಪ್ರಕಾಶಕರು :

ಶ್ರೀ. ನಿ. ಪ್ರ. ಸ್ವ. ಮಹಾಂತಸ್ವಾಮಿಗಳು ಗುರು ಮೃತ್ಯುಂಜಯ ಸ್ವಾಮಿಗಳು
ಶ್ರೀ ಮುರುಘಾಮಠ, ಮೃತ್ಯುಂಜಯನಗರ
ಮಠ ನಂ. ೭೬೬೮
ಧಾರವಾಡ



ಬೆಲೆ : ರೂ. ೪.೦೦





ಮುದ್ರಕರು :
ಬಿಳಗಿ ರಾಮಣ್ಣನವರು
ಲಿಂಗರಾಜ ಆರ್ಟ ಪ್ರೆಸ್
ಮನೆ ನಂ. ೨೨೦
ಮಾಳಮಡ್ಡಿ, ಧಾರವಾಡ

# ಅರ್ಪಣೆ

ಶಿವಶರಣರ ಸಾಮರಸ್ಯದ ಮಾರ್ಗದಲ್ಲಿ ನಡೆದು

ಬೆಳಗಿನೊಳಗಣ ಬೆಳಗು ಮಹಾಬೆಳಗನ್ನು ಕಂಡ

ಪರಮ ವೈರಾಗ್ಯಮೂರ್ತಿಗಳೂ

ಮಹಾಶಿವಯೋಗಿಗಳೂ

ಆದ

**ಅಥಣಿ ಗಚ್ಚಿನಮಠದ**

ಲಿಂಗೈಕ್ಯ

**ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ**

## ಶ್ರೀ ಮುರುಘೇಂದ್ರ ಮಹಾಶಿವಯೋಗಿಗಳವರ

**ದಿವ್ಯಪಾದಾರವಿಂದಗಳಲ್ಲಿ**

ಈ ಗ್ರಂಥವನ್ನು

ಭಕ್ತಿಪುರಸ್ಸರವಾಗಿ ಸಮರ್ಪಿಸಲಾಗಿದೆ.

# ಪ್ರಕಾಶಕರ ನುಡಿ

ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯ ೪೨ ನೆಯ ಪುಷ್ಪವಾಗಿ ಮಗ್ಗೆಯ ಮಾಯಿದೇವರು ರಚಿಸಿದ ಶತಕತ್ರಯವು ಇದೀಗ ಪ್ರಕಟವಾಗುತ್ತಿದೆ. ಈ ಮಾಲೆಯು ಶ್ರೀಮದಥಣಿ ಶಿವಯೋಗಿಗಳವರ ಆಶೀರ್ವಾದ ಬಲದಿಂದ ಇಂದಿನವರೆಗೆ ಅವ್ಯಾಹತವಾಗಿ ನಡೆಯುತ್ತ ಬಂದುದು ಸಂತಸದ ಸಂಗತಿಯೇ ಸರಿ. ಈ ಮಾಲೆಗೆ ಮಗಮಗಿಸುವ ಪುಷ್ಪಗಳನ್ನು ಜೋಡಿಸುತ್ತ ಸಾಹಿತ್ಯಸೌರಭವು ಎಲ್ಲೆಡೆಯಲ್ಲಿ ಪಸರಿಸುವಂತೆ ಹರಸಿದ ಶ್ರೇಯಸ್ಸು ನಿಜವಾಗಿ ನಮ್ಮ ಗುರುಗಳಾದ ಲಿಂಗೈಕ್ಯ ಶ್ರೀ ಮೃತ್ಯುಂಜಯ ಶಿವಯೋಗಿಗಳಿಗೆ ಸಲ್ಲಬೇಕಾದುದು; ಅವರ ಸಾಹಿತ್ಯಪ್ರೇಮ, ಧರ್ಮನಿಷ್ಠೆ, ಶಿವಾನುಭವಗಳೇ ಈ ಮಾಲೆ ಹುಟ್ಟಿ ಬೆಳಗುವದಕ್ಕೆ ಕಾರಣವಾಗಿದ್ದವೆನ್ನಬಹುದು. ಅಂತಹ ಮಹಾಮಹಿಮರು ತಮ್ಮ ಲಿಂಗಾನಂದದಲ್ಲಿಯೇ ಮಗ್ನರಾಗಿ, ಬೆಳಗಿನೊಳಗಣ ಮಹಾಬೆಳಗಾಗಿ ನಿಂತರು. ಅವರು ನಮ್ಮ ಸಕ್ಷದರ್ಶನಕ್ಕೆ ಇಲ್ಲೆನಿಸಿದರೂ ನಮ್ಮೆಲ್ಲರ ಹೃದಯವಲ್ಲಿ ಎಲೆಯ ಮರೆಯ ಹೂವಿನಂತೆ ಪ್ರಜ್ವಲಿಸುತ್ತಿದ್ದಾರೆ. ಅವರು ಹಮ್ಮಿದ ಕಾರ್ಯವನ್ನು ಮುನ್ನಡೆಸಿಕೊಂಡು ಹೋಗುವುದೇ ನಮ್ಮೆಲ್ಲರ ಕರ್ತವ್ಯವಾಗಿದೆ; ಅದೇ ಶ್ರೀ ಶಿವಯೋಗಿಗಳವರಿಗೆ ಮಹಾಸಂತೋಷವನ್ನು ತರಬಲ್ಲುದು. ಇದನ್ನು ಮನದಂದೇ ಮಾಲೆಗೆ ಹೊಸ ಹೂವನ್ನು ಪವಣಿಸುವ ಕಾರ್ಯಕ್ಕೆ ಕೈಹಾಕಿದ್ದೇವೆ. ಲಿಂಗೈಕ್ಯ ಶ್ರೀ ಗುರುಗಳವರ ಕೃಪಾಶೀರ್ವಾದಬಲದಿಂದ ಗ್ರಂಥಮಾಲೆ ಬೆಳೆಯದೇ ಇರದೆಂಬ ಭರವಸೆ ನಮಗೆ ಸಂಪೂರ್ಣವಿದೆ. ಶ್ರೀ ಮೃತ್ಯುಂಜಯ ಶಿವಯೋಗಿಗಳು ಸಾಹಿತ್ಯಶರಣರನ್ನೂ ಸರಸ್ವತಿಯ ಭಕ್ತರನ್ನೂ ಆಶೀರ್ವದಿಸದೆ ಇರರು.

. ಮಗ್ಗೆಯ ಮಾಯಿದೇವರು ಮಹಾ ಪಂಡಿತರು; ಉದ್ದಾಮಸಾಹಿತಿಗಳು; ಮೇಲಾಗಿ ಷಟ್‌ಸ್ಥಲ ಸಿದ್ಧಾಂತವನ್ನು ಖಚಿತಗೊಳಿಸಿದ ಶಿವಾನುಭವಿಗಳು. ಅವರು ಕನ್ನಡ ಸಾಹಿತ್ಯದಲ್ಲಿಯೇ ಒಂದು ವಿಶಿಷ್ಟಸ್ಥಾನ ಪಡೆದಿದ್ದಾರೆ. ಉಭಯ ಭಾಷಾವಿಶಾರದರಾದುದರಿಂದ ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಉದ್ದಾಮ ಗ್ರಂಥಗಳನ್ನು ಬರೆದು ಕನ್ನಡಿಗರಿಗೆ ಮಹದುಪಕಾರ ಮಾಡಿದ್ದಾರೆ. ಶತಕತ್ರಯವು ಅವರು ಬರೆದ ಗ್ರಂಥಗಳಲ್ಲಿಯೇ ಹೆಚ್ಚು ಪ್ರಸಿದ್ಧವಾಗಿದೆ; ವೈಶಿಷ್ಟ್ಯಪೂರ್ಣವಾಗಿದೆ. ಈ ಗ್ರಂಥದಲ್ಲಿ ಶಿವಾಧವಶತಕ, ಶಿವಾವಲ್ಲಭಶತಕ, ಮಹದೈಪುರೀಶ್ವರಶತಕಗಳು

ಅಡಕವಾಗಿರುವುದರಿಂದ, ಇದಕ್ಕೆ ಶತಕತ್ರಯವೆಂದು ಹೆಸರುಬಂದಿದೆ; ಈ ಮೂರೂ ಶತಕಗಳು ತಮ್ಮಷ್ಟಕ್ಕೆ ತಾವೇ ಸ್ವತಂತ್ರವೆನಿಸಿದರೂ ಈ ಮೂರರ ಮುಪ್ಪುರಿಯೇ ವೀರಶೈವದ ಶಿವಯೋಗಪ್ರದೀಪಿಕೆಯನ್ನು ಬೆಳಗಿಸಬಲ್ಲುದಾಗಿವೆ; ಈ ಶತಕಗಳನ್ನು ಒಟ್ಟಾರೆ ಓದಿದಾಗಲೇ ವೀರಶೈವದ ಖಚಿತ ನಿರ್ಣಯವಾಗಬಲ್ಲುದು ಅದನ್ನು ದೃಷ್ಟಿಯಲ್ಲಿಟ್ಟುಕೊಂಡೇ ಮಗ್ಗೆಯ ಮಾಯಿದೇವರು ಈ ಮೂರು ಶತಕಗಳನ್ನು ರಚಿಸಿದ್ದಾರೆಂಬುದನ್ನು ಮರೆಯಬಾರದು. ಇವುಗಳನ್ನು ಬಿಡಿ ಬಿಡಿಯಾಗಿ ಓದಿದರೆ, ಶಿವಾಧವಶತಕದಲ್ಲಿ ಭಕ್ತಿ, ಶಿವಾವಲ್ಲಭಶತಕದಲ್ಲಿ ಜ್ಞಾನ, ಮಹದೈಪುರೀಶ್ವರ ಶತಕದಲ್ಲಿ ವೈರಾಗ್ಯ ಮೂಡಿಬಂದುದನ್ನು ನಾವು ಸ್ಪಷ್ಟವಾಗಿ ಅರಿಯುತ್ತೇವೆ. ಮೂರನ್ನೂ ಇಡಿಯಾಗಿ ವಿವೇಚಿಸಿದಲ್ಲಿ ಭಕ್ತಿ ಜ್ಞಾನ ವೈರಾಗ್ಯವೇ ಒಡಲಾಗಿರುವ ಷಟ್‌ಸ್ಥಲಸಿದ್ಧಾಂತವು ಮೈಗೊಂಡಿರುವುದನ್ನು ತಿಳಿಯುತ್ತೇವೆ. ಷಟ್‌ಸ್ಥಲಾಚರಣೆಗೆ ಬೇಕಾದ ವಿಷಯವು ಶತಕತ್ರಯದಲ್ಲಿ ಅತಿ ಸುಲಭವಾಗಿ ಶಾಸ್ತ್ರೋಕ್ತವಾಗಿ ಬಂದಿರುವುದು ಗಮನಾರ್ಹವಾಗಿದೆ. ಆದುದರಿಂದಲೇ ಈ ಶತಕತ್ರಯಕ್ಕೆ ಅನುಬಂಧಚತುಷ್ಟಯವನ್ನು ಹೇಳುತ್ತ ಮರಿತೋಂಟದಾರ್ಯರು "ಇಲ್ಲಿ ಲಿಂಗಸ್ಥಲಾಂಗಸ್ಥಲಸಂಯೋಗವೇ ಸಂಬಂಧ; ಗುರುಲಿಂಗಜಂಗಮಪಾದೋದಕ ಪ್ರಸಾದ ಪಂಚಕಂಗಳನೇಕರೂಪವೆಂದು ಪ್ರತಿಪಾದಿಸುವುದೇ ವಿಷಯ; ಸ್ವರೂಪ ಸಾಕ್ಷಾತ್ಕಾರರೂಪವಾದ ಮೋಕ್ಷವೇ ಪ್ರಯೋಜನ; ಸರ್ವಾಚಾರಸಂಪನ್ನನಾಗಿ ಷಡರ್ಥಸಂಗ್ರಹಾಚರಣೆಯುಳ್ಳಾತನಾಗಿ ಮುಮುಕ್ಷುವಾದ ಭಕ್ತನೇ ಅಧಿಕಾರಿ" ಎಂದು ಬರೆದುದು ಈ ಕೃತಿಯ ಸಾರವನ್ನೇ ಎತ್ತಿತೋರಿಸುವುದಾಗಿದೆ. ಆದುದರಿಂದ ಈ ಗ್ರಂಥ ವೀರಶೈವ ಧರ್ಮದ ಆದರ್ಶ ಕೃತಿಯಾಗಿ ಇಂದಿನವರೆಗೂ ಮೆರೆಯುತ್ತ ಬಂದಿದೆ. ಇಂತಹ ವೈಶಿಷ್ಟ್ಯಪೂರ್ಣ ಗ್ರಂಥವನ್ನು ಸಾಹಿತ್ಯಶರಣರೂ ಭಕ್ತರೂ ಹೃತ್ಪೂರ್ವಕವಾಗಿ ಬರಮಾಡಿಕೊಳ್ಳುವರೆಂದು ಆಶಿಸುತ್ತೇವೆ.

ಶಿವಾನುಭಾವವು ಷಟ್‌ಸ್ಥಲಸಿದ್ಧಾಂತದ ದೇಹ, ಚೈತನ್ಯವಾಗಿದೆ. ಅನುಭಾವವೆಂದರೆ ಆತ್ಮನ ಸೂಕ್ಷ್ಮ ಅನುಭವ. ಲೌಕಿಕ ಅನುಭವ, ಆನಂದಾನುಭೂತಿ ಸಾಹಿತ್ಯನಿರ್ಮಿತಿಗೆ ಕಾರಣವಾಗುವಂತೆ ಶಿವಾನುಭಾವ, ಆತ್ಮಾನುಭೂತಿಗಳು ಉತ್ಕೃಷ್ಟವು ಸಾಹಿತ್ಯದ ನಿರ್ಮಿತಿಗೆ ಕಾರಣವಾಗುತ್ತವೆ. ಹೀಗೆ ಕವಿಯೋಗಿಯ ಹೃದಯದಿಂದ ಹೊರಹೊಮ್ಮಿದುದೇ ಅನುಭಾವಸಾಹಿತ್ಯವೆನಿಸಿಕೊಳ್ಳುವುದು. ಮಗ್ಗೆಯ ಮಾಯಿದೇವರು ಷಟ್‌ಸ್ಥಲತತ್ವಪ್ರತಿಪಾದನೆಗಾಗಿ ವೇದಾಗಮಾದಿ ಸಂಸ್ಕೃತ ಗ್ರಂಥಗಳನ್ನೂ ಶಿವಶರಣರ ಸೂಳ್ನುಡಿಗಳನ್ನೂ ಆಧಾರ ಮಾಡಿಕೊಂಡಿದ್ದರೂ ವಿಷಯ ವಿವೇಚನೆಯಲ್ಲಿ ಮುಖ್ಯವಾಗಿ ಅವರ ಸ್ವಾನುಭಾವವೇ ರೂಪುಗೊಂಡಿರುವುದನ್ನು ಅರಿಯುತ್ತೇವೆ. ಕವಿಯು ಶಿವಯೋಗಿಯಾಗಿರುವುದರಿಂದಲೇ ಹೀಗಾಗಲು

ಕಾರಣವಾಗಿದೆ. ಪ್ರಪಂಚದ ಅನುಭವವನ್ನು ತನ್ನ ಸ್ವಾನುಭಾವದ ಒರೆಗಲ್ಲಿಗೆ ತಿಕ್ಕಿ ತತ್ವದ ಹೊಳಪನ್ನು ತೋರಿಸಿಕೊಡುವ ಪ್ರಯತ್ನ ಈ ಶತಕತ್ರಯದಲ್ಲಿ ನಡೆಸುದನ್ನು ವಾಚಕರು ಅರಿಯಬಹುದಾಗಿದೆ. ಶಾಸ್ತ್ರಕಾವ್ಯವು ಕಾವ್ಯಶಾಸ್ತ್ರವಾಗ ಬಲ್ಲುವೆಂಬುದಕ್ಕೆ ಮಗ್ಗೆಯ ಮಾಯಿದೇವರು ರಚಿಸಿದ ಶತಕತ್ರಯವು ಉತ್ತಮ ನಿದರ್ಶನವಾಗಿದೆ.

ಈ ಕೃತಿಯನ್ನು ೫೦ ವರ್ಷಗಳ ಪೂರ್ವದಲ್ಲಿಯೇ "ಮೈಸೂರು ಸ್ಟಾರ" ಪತ್ರಿಕೆಯ ಸಂಪಾದಕರಾದ ಶ್ರೀ ವಾಯ್. ವಿರೂಪಾಕ್ಷಯ್ಯನವರು ಪ್ರಕಟಿಸಿ ಕನ್ನಡ ಸಾಹಿತ್ಯ ಸಂವರ್ಧನೆಗೆ ಮಹದುಪಕಾರ ಮಾಡಿದ್ದರು. ಅದರ ಪ್ರತಿಗಳು ಈಗ ದೊರೆಯದಿರುವುದರಿಂದ ಪ್ರಕಾಶನ ಕಾರ್ಯಕ್ಕೆ ನಮ್ಮ ಮಾಲೆ ಮುಂದೆ ಬಂದಿತು. ಅವರಿಗೆ ನಮ್ಮ ಮಾಲೆ ಚಿರಋಣಿಯಾಗಿದೆ. ಈ ಕೃತಿ ಪ್ರಕಾಶಹೊಂದಲೆಂದು ರಾಣೇಬೆನ್ನೂರಿನ 'ಶ್ರೀ ಬಸವೇಶ್ವರ ಶಿಕ್ಷಣ ಟ್ರಸ್ಟ ಫಂಡ' ಸಮಿತಿಯವರು ೧೫೦೦ ರೂಪಾಯಿಗಳನ್ನು ಸಹಾಯಧನವೆಂದು ಸಲ್ಲಿಸಿ ಶ್ರೀ ಶಿವಯೋಗಿಗಳ ಕೃಪೆಗೆ ಪಾತ್ರರಾಗಿದ್ದಾರೆ. ಸದ್ಭಕ್ತರ ನೆರವು ನಮ್ಮ ಮಾಲೆಗೆ ಮೊದಲಿನಿಂದಲೂ ಇದ್ದುದನ್ನು ನಾವು ಮರೆಯಲಾರೆವು.

ಇಂತಹ ಮಹತ್ವಪೂರ್ಣವಾದ ಕೃತಿಯನ್ನು ಸಂಪಾದಿಸುವುದಕ್ಕೂ ಒಂದು ಅರ್ಹತೆಬೇಕು. ಅಂತಹ ಯೋಗ್ಯತೆಯನ್ನು ಪಡೆದವರಲ್ಲಿ ಆಸ್ಥಾನವಿದ್ವಾನ್ ಸರ್ವದರ್ಶನತೀರ್ಥ ಕಳಾಪ್ರಪೂರ್ಣ ಶಿವಾನುಭಾವ ಕವಿಪುಂಗವರೆನಿಸಿಕೊಂಡ ಏಳು ಬೆಂಚಿಯ ಪಂಡಿತ ನಾಗೇಶಶಾಸ್ತ್ರಿಗಳು ಒಬ್ಬರಾಗಿದ್ದಾರೆ. ಅವರು ತಮ್ಮ ಆಳವಾದ ಅನುಭವ, ಘನವಾದ ಪಾಂಡಿತ್ಯಬಲದಿಂದ ಈ ಶತಕತ್ರಯವನ್ನು ಸಂಪಾದಿಸುವ ಹೊಣೆಹೊತ್ತು ಕಾರ್ಯನಿರ್ವಹಿಸಿ ಶ್ರೀ ಶಿವಯೋಗಿಗಳ ಕೃಪೆಗೆ ಪಾತ್ರರಾಗಿದ್ದಾರೆ. ಅವರ ಸಾಹಿತ್ಯಸೇವೆ ಮುಂದುವರಿಯುವಂತೆ ಶ್ರೀ ಶಿವಯೋಗೀಶ್ವರನು ಪ್ರೇರಣೆ ನೀಡಲೆಂದು ಪ್ರಾರ್ಥಿಸುತ್ತೇವೆ.

ಈ ಗ್ರಂಥವನ್ನು ಲಿಂಗರಾಜ ಆರ್ಟ ಪ್ರೆಸ್ಸಿನ ಒಡೆಯರಾದ ಬಿಳಗಿ ಬಂಧುಗಳು ಬಹು ಮನೋಹರವಾಗಿ ಮುದ್ದಾಗಿ ಮುದ್ರಿಸಿಕೊಟ್ಟಿದ್ದಾರೆ. ಅವರ ಭಕ್ತಿ ನಿರ್ಭರವಾದುದು. ಅವರಿಗೂ ಶ್ರೀ ಶಿವಯೋಗೀಶ್ವರನು ಶ್ರೇಯಸ್ಸನ್ನುಂಟು ಮಾಡಲೆಂದು ಹಾರೈಸುತ್ತೇವೆ.

ಶ್ರೀ ಮುರುಘಾಮಠ
ಮೃತ್ಯುಂಜಯನಗರ, ಧಾರವಾಡ
೧೪-೧೧-೧೯೬೪

ಪ್ರಕಾಶಕರು

# ಪ್ರಸ್ತಾವನ

ಶ್ರೀ ಮಾಯಿದೇವರ ಈ ಗ್ರಂಥದಲ್ಲಿ ಶಿವಾಧವ – ಶಿವಾವಲ್ಲಭ – ಮಹದೈಪುರೀಶ್ವರ ಎಂಬ ಅಂಕಿತದಿಂದ ಕೂಡಿದ ಮೂರು ಶತಕಗಳಿರುವುದರಿಂದ ಇದಕ್ಕೆ "ಶತಕತ್ರಯ" ವೆಂಬ ಹೆಸರು ಪ್ರಸಿದ್ಧವಾಗಿರುವುದು. ಈ ಶತಕತ್ರಯದಲ್ಲಿ ವೀರಶೈವರ ಷಟ್‌ಸ್ಥಲಗಳೂ, ಷಟ್‌ಸ್ಥಲಗಳಿಗೆ ಸಂಬಂಧಿಸಿದ ಭಕ್ತಿಜ್ಞಾನಕ್ರಿಯಾದಿಗಳೂ, ಲಿಂಗಾಂಗಸಾಮರಸ್ಯರೂಪವಾದ ಶಿವಯೋಗ ಇವೇ ಮೊದಲಾದ ವಿಷಯಗಳು ಉಕ್ತವಾಗಿರುವವು. ಆದರೆ ಶಿವಾಧವಶತಕಕ್ಕೆ ಭಕ್ತಿಶತಕವೆಂದೂ, ಶಿವಾವಲ್ಲಭಶತಕಕ್ಕೆ ಜ್ಞಾನಶತಕವೆಂದೂ, ಮಹದೈಪುರೀಶ್ವರಶತಕಕ್ಕೆ ವೈರಾಗ್ಯಶತಕವೆಂದೂ ಶತಕತ್ರಯದ ಟೀಕಾಕಾರರಾದ ತೋಂಟದ ಸಿದ್ಧಲಿಂಗದೇಶಿಕರು ತಮ್ಮ ಟೀಕೆಯಲ್ಲಿ ಕರೆದಿರುವರು. ಮತ್ತು ಸದ್ಧರ್ಮದೀಪಿಕೆಯ ಸಂಪಾದಕರಾದ ಶ್ರೀ ಚೆನ್ನಮಲ್ಲಿಕಾರ್ಜುನರು ಪ್ರಕಟಿಸಿರುವ ಸಂಸ್ಕೃತದ ಶತಕತ್ರಯದಲ್ಲಿಯೂ (ಇದು ಅನೇಕ ಸಂಸ್ಕೃತ ಗ್ರಂಥಗಳ ಶ್ಲೋಕಗಳನ್ನು ಸಂಗ್ರಹಿಸಿ ಬರೆದುದಾಗಿರುವುದು). ಭಕ್ತಿ, ಜ್ಞಾನ, ವೈರಾಗ್ಯವೆಂಬ ಹೆಸರುಗಳೇ ಕ್ರಮವಾಗಿ ಶತಕತ್ರಯದ ಮೂರು ಭಾಗಗಳಿಗೆ ಉಕ್ತವಾಗಿರುವವು. ಮೂರು ಶತಕಗಳ ಆದ್ಯಂತದಲ್ಲಿರುವ ಪದ್ಯಗಳಲ್ಲಿ ಭಕ್ತಿಶತಕವೆಂದೂ, ಜ್ಞಾನಶತಕವೆಂದೂ, ವೈರಾಗ್ಯಶತಕವೆಂದೂ ಉಲ್ಲೇಖವಿರುವುದಿಲ್ಲ. ಶತಕತ್ರಯದಲ್ಲಿ ಇತರ ವಿಷಯಗಳ ಪ್ರತಿಪಾದನೆ ಇದ್ದರೂ ೧ ನೆಯ ಶತಕದಲ್ಲಿ ಭಕ್ತಿಗೂ, ೨ ನೆಯ ಶತಕದಲ್ಲಿ ಜ್ಞಾನಕ್ಕೂ, ೩ ನೆಯ ಶತಕದಲ್ಲಿ ವೈರಾಗ್ಯಕ್ಕೂ ಪ್ರಾಧಾನ್ಯವಿರುವುದೆಂಬ ದೃಷ್ಟಿಯಿಂದ ಹೀಗೆ ಭಕ್ತಿ, ಜ್ಞಾನ, ವೈರಾಗ್ಯ ಶತಕಗಳೆಂದು ಹೆಸರಿಸಿರಬಹುದೆಂದು ಗ್ರಹಿಸಬಹುದಾಗಿದೆ.

ಮಾಯಿದೇವರು ಮೊದಲು ಶಿವಾನುಭವಸೂತ್ರ, ವಿಶೇಷಾರ್ಥಪ್ರಕಾಶಿಕೆಯೆಂಬ ಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸಿ, ಆ ಗ್ರಂಥಗಳ ಸಾರಾಂಶವೇ ಅಧಿಕವಾಗಿ ಇರುವಂತೆ ಕನ್ನಡದಲ್ಲಿ ಶತಕತ್ರಯವನ್ನು ರಚಿಸಿದಂತೆ ತೋರುತ್ತದೆ. ಶಿವಾನುಭವ

ಸೂತ್ರ ವಿಶೇಷಾರ್ಥಪ್ರಕಾಶಿಕೆಗಳ ಅನೇಕ ಶ್ಲೋಕಗಳ ಅಭಿಪ್ರಾಯವೇ ಶತಕತ್ರಯದ ಪದ್ಯಗಳಲ್ಲಿಯೂ ಬಂದಿರುವುದೆಂಬುದು ಆ ಗ್ರಂಥಗಳ ಪದ್ಯಾರ್ಥವನ್ನು ನೋಡಿದಾಗ ಗೊತ್ತಾಗುತ್ತಿರುವುದು.

## ಶತಕತ್ರಯದಲ್ಲಿ ಪ್ರತಿಪಾದಿಸಿರುವ ಮುಖ್ಯ ವಿಷಯಗಳು

ಶತಕತ್ರಯದಲ್ಲಿ ಮುಖ್ಯವಾಗಿ ಷಟ್‌ಸ್ಥಲಾಚರಣೆಗೆ ಸಂಬಂಧಿಸಿದ ವಿಷಯಗಳೇ ಹೆಚ್ಚಾಗಿರುವವು. ಆ ವಿಷಯಗಳ ವಿವರಣೆಯು ಕೆಳಗಿನಂತಿರುವುದು :

(೧) **ಭಕ್ತಿ** : ಮಾಯಿದೇವನು ಶಿವಾಷ್ಟಕಶತಕದ ೭ ನೆಯ ಪದ್ಯದಲ್ಲಿ "ಯೋಗೇನಪರಾ" ಎಂಬುಕ್ತಿಯಿಂದ ಭಕ್ತಿಯ ಮಹತ್ವವನ್ನು ತಿಳಿಸಿರುವನು. ಮತ್ತು ತನ್ನ ಶಿವಾನುಭವಸೂತ್ರದ ಪಂಚಮಾಧಿಕರಣದ ೭೦ ನೆಯ ಸೂತ್ರದಲ್ಲಿಯೂ "ಯೋಗೇನ ತು ಪರಾಭಕ್ತಿರಿತಿ ಭಕ್ತೇಸ್ತುವೈಭವಂ" ಎಂದು ಭಕ್ತಿಯನ್ನು ಯೋಗಕ್ಕಿಂತ ಮಿಗಿಲಾದುದೆಂದು ಹೇಳಿರುವನು. ಶತಕತ್ರಯದ ವ್ಯಾಖ್ಯಾನಕಾರನು ಯೋಗಶಬ್ದಕ್ಕೆ ಸಾಯುಜ್ಯಮುಕ್ತಿಯೆಂದರ್ಥಮಾಡಿರುವನು. ಈ ಸಾಯುಜ್ಯಮುಕ್ತಿಗಿಂತಲೂ ಭಕ್ತಿಯು ಅಧಿಕವಾದುದು. ಎಂದರೆ ಭಕ್ತಿಯು ಪಂಚಮಪುರುಷಾರ್ಥರೂಪವಾಗಿರುವುದೆಂಬುದೇ "ಯೋಗೇನಪರಾ" ಎಂಬ ವಾಕ್ಯದ ಅರ್ಥವಾಗಿರುವುದು. ಮಾಯಿದೇವನೂ ಶಿವಾನುಭವಸೂತ್ರದ ೮ ನೆಯ ಅಧಿಕರಣದ ೭೮ ನೆಯ "ಪಂಚಮಃ ಪುರುಷಾರ್ಥೋಽಹಿಭಕ್ತಿಃ ಶೈವೀಸನಾತನೀ" ಎಂಬ ಸೂತ್ರದಲ್ಲಿ ಶಿವಭಕ್ತಿಯನ್ನು ಪಂಚಮಪುರುಷಾರ್ಥವೆಂದೇ ಕರೆದಿರುವನು. ಹೀಗೆ ಪಂಚಮಪುರುಷಾರ್ಥವೆನಿಸಿಕೊಳ್ಳುವ ವೀರಶೈವರ ಭಕ್ತಿಯು ಯಾವುದು? ಅದರ ಸ್ವರೂಪವೇನು? ಎಂಬ ಪ್ರಶ್ನೆಗೆ ಉತ್ತರವು ಕೆಳಗಿನಂತಿರುವುದು :

ಷಟ್‌ಸ್ಥಲಸಿದ್ಧಾಂತದ ದೃಷ್ಟಿಯಿಂದ ಶಿವಶಕ್ತಿಯೇ ಭಕ್ತಿಯೆನಿಸುವುದು. ಶಿವನು ತನ್ನ ಶಕ್ತಿಯಿಂದ ಲಿಂಗ-ಅಂಗವೆಂದು ದ್ವಿವಿಧವಾದಂತೆ ಆ ಶಕ್ತಿಯೂ ದ್ವಿವಿಧವಾಗಿ, ಲಿಂಗದಲ್ಲಿದ್ದು ಕಲೆಯೆಂಬುದಾಗಿಯೂ, ಅಂಗನಲ್ಲಿದ್ದು ಭಕ್ತಿಯೆಂಬುದಾಗಿಯೂ ಕರೆಯಿಸಿಕೊಳ್ಳುವದು. ಇಲ್ಲಿ ಅಂಗನೆಂದರೆ ಶಿವದೀಕ್ಷೆಯಿಂದ ಮಲತ್ರಯರಹಿತನಾಗಿ ಶುದ್ಧನಾದ ಜೀವಾತ್ಮನು. ಹೀಗೆ ಶುದ್ಧನಾದ ಆತ್ಮನ ಶಕ್ತಿಯೇ ಭಕ್ತಿಯೆನಿಸುವುದು. ಈ ಭಕ್ತಿ-ಶಕ್ತಿಯು ಭಕ್ತಾದಿ ಷಡ್ವಿಧವಾದ ಅಂಗಗಳಲ್ಲಿ ಕ್ರಮವಾಗಿ ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ, ಸಮರಸವೆಂಬ ಷಟ್‌ಸ್ವರೂಪದಿಂದ ನೆಲಸಿರುವುದು. ಹೀಗೆ ಷಟ್‌ಸ್ವರೂಪದಿಂದಿರುವ

ಭಕ್ತಿಯು ಪಂಚಮಪುರುಷಾರ್ಥವೆನಿಸಿಕೊಳ್ಳುವುದು. ಹೇಗೆಂದರೆ — ಷಟ್‌ಸ್ಥಲ ದೃಷ್ಟಿಯಿಂದ ಮಲತ್ರಯಗಳಿಂದ ಬಂಧಿತನಾಗುವುದೇ ಬಂಧವೆನಿಸುವುದು. ಆ ತ್ರಿಮಲಗಳಿಂದ ಬಿಡುಗಡೆಯನ್ನು ಹೊಂದುವುದೇ ಮುಕ್ತಿಯೆನಿಸುವುದು. ಅಂಗನು ದೀಕ್ಷೆಯಿಂದ ತ್ರಿಮಲರಹಿತನಾದುದರಿಂದ ಮುಕ್ತನಾಗಿ (ಲಿಂಗಸ್ವರೂಪನಾಗಿ) ಯೇ ಇರುವನು. ಹೀಗೆ ಮುಕ್ತನಾದ ಶುದ್ಧಾತ್ಮನಲ್ಲಿಯೇ ಭಕ್ತಿ ಹುಟ್ಟುವುದಲ್ಲದೆ ಮಲತ್ರಯಬಂಧಿತನಾದ ಮಲಿನಾತ್ಮನಲ್ಲಿ ಭಕ್ತಿಯು ತಲೆದೋರದು. ಹೀಗೆ ಶುದ್ಧಾತ್ಮನಾದ ಅಂಗನಲ್ಲಿ ಹುಟ್ಟಿದ ಭಕ್ತಿಯೇ ಐಕ್ಯಸ್ಥಲದಲ್ಲಿ ಲಿಂಗಾಂಗಸಮರಸ ಸ್ವರೂಪದಿಂದ ಪರಿಣಮಿಸಿ, ನಿತ್ಯಾನಂದವನ್ನುಂಟುಮಾಡುವುದಾಗಿರುವುದು ಈ ವಿಚಾರದಿಂದ ನಾಲ್ಕನೆಯ ಪುರುಷಾರ್ಥವಾದ ಮುಕ್ತಿಗಿಂತಲೂ ಭಕ್ತಿಯೇ ಮಿಗಿಲಾಗಿ ಪಂಚಮಪುರುಷಾರ್ಥವೆನಿಸಿಕೊಳ್ಳುವುದೆಂಬುದು ಗೊತ್ತಾಗುವುದಲ್ಲವೆ ? ಷಟ್‌ಸ್ಥಲಮಾರ್ಗದಲ್ಲಿ ಗಮಿಸುವವನು ಮುಕ್ತನಾಗಿ ಭಕ್ತನಾಗಬೇಕು ಹೀಗೆ ಭಕ್ತನಾದವನಿಗೆ ಸಮರಸಭಕ್ತಿಯೇ ಅಪೇಕ್ಷಣೀಯವಲ್ಲದೆ, ಮುಕ್ತಿಯು ಅಪೇಕ್ಷಣೀಯವಲ್ಲ. ಷಟ್‌ಸ್ಥಲಮಾರ್ಗದಲ್ಲಿ ಗಮಿಸುವ ವೀರಶೈವರು ಮೋಕ್ಷವನ್ನು ಬಯಸದಿದ್ದರೂ ಸಹಜವಾಗಿಯೇ ಮುಕ್ತರಾಗಿರುವರೆಂಬುದನ್ನು ಮಾಯಿದೇವರು ಶಿವಾಧವಶತಕದ ೧೧ ನೆಯ ಪದ್ಯದ "ಬಯಸದೆ ಭೋಗಮೋಕ್ಷಪರರಪ್ಪುದು ಚಿತ್ರನಲಾ ಶಿವಾಧವಾ" ಎಂಬ ವಾಕ್ಯದಿಂದ ವಿವರಿಸಿರುವರು.

(೨) ಜ್ಞಾನ : ಲಿಂಗಾಂಗಸಾಮರಸ್ಯಕ್ಕೆ ಸಂಬಂಧಿಸಿದ ಜ್ಞಾನವೇ ಷಟ್‌ಸ್ಥಲ ಮಾರ್ಗಗಾಮಿಗಳಾದ ವೀರಶೈವರು ಪಡೆಯುವ ಮುಖ್ಯ ಜ್ಞಾನವಾಗಿರುವುದು. ಲಿಂಗಾಂಗಸಾಮರಸ್ಯ ಜ್ಞಾನವು — ಲಿಂಗ, ಅಂಗ, ಶಕ್ತಿ, ಭಕ್ತಿ, ಹಸ್ತ, ಮುಖ, ಪದಾರ್ಥ, ಪ್ರಸಾದ ಇವುಗಳ ವಿಚಾರವನ್ನೊಳಗೊಂಡಿರುವುದು. ಎಂದರೆ - ಲಿಂಗಾದಿಯಾದ ಅಷ್ಟವಿಧ ಸಕೀಲುಗಳ ವಿಚಾರದಿಂದ ಲಿಂಗಾಂಗ ಸಾಮರಸ್ಯ ಜ್ಞಾನವು ಸಿದ್ಧಿಸುವುದು. ಅವುಗಳ ವಿಚಾರವು ಹೀಗಿರುವುದು—

(೧) ಲಿಂಗ : ಅಂಗನಲ್ಲಿದ್ದು ಅಂಗನನ್ನು ತನ್ನಲ್ಲಿ ಅಡಗಿಸಿಕೊಳ್ಳುವ ವಸ್ತುವೇ ಲಿಂಗವು.

(೨) ಲಿಂಗಗತಶಕ್ತಿ : ಲಿಂಗಗತವಾದ ದೃಕ್ಕ್ರಿಯಾತ್ಮಕಶಕ್ತಿ (ಜ್ಞಾನ ಕ್ರಿಯಾಮಯಶಕ್ತಿ) ಯು ಜ್ಞಾನಕ್ರಿಯೆಗಳ ಮೂಲಕವಾಗಿ ಅಂಗನನ್ನು ಲಿಂಗದಲ್ಲಿ ಸಮರಸಗೊಳಿಸುವ ಪ್ರವೃತ್ತಿಯುಳ್ಳದಾಗಿರುವುದು.

(೩) ಅಂಗ : ಲಿಂಗಕ್ಕೆ ಅಂಗವಾಗಿ ಲಿಂಗದಲ್ಲಿ ಅಡಗುವ (ಲಿಂಗಸ್ವರೂಪ ಪಡೆಯುವ) ಆತ್ಮವಸ್ತುವೇ ಅಂಗವೆನಿಸುವುದು.

(೪) ಅಂಗಗತಭಕ್ತಿ : ಲಿಂಗಗತ ಶಕ್ತಿಯಂತೆ ಅಂಗಗತಶಕ್ತಿಯೂ ಜ್ಞಾನ ಕ್ರಿಯಾತ್ಮಕವಾಗಿಯೇ ಇರುವುದು. ಆದರೆ, ಅಂಗನ ಜ್ಞಾನಕ್ರಿಯೆಗಳು ಷಟ್‌ಸ್ಥಲ ಮಾರ್ಗದಲ್ಲಿ ಶ್ರದ್ಧಾದಿಭಕ್ತಿಮಯವಾಗಿ ಪರಿಣಮಿಸಿ ಕೊನೆಗೆ ಐಕ್ಯಸ್ಥಲದಲ್ಲಿ ಅಂಗನನ್ನು ಲಿಂಗವನ್ನಾಗಿ ಮಾಡುವ ಸಾಧನವಾಗುವವು. ಭಕ್ತಿಮಯವಾದ ಈ ಜ್ಞಾನಕ್ರಿಯಾಯುಕ್ತ ಶಕ್ತಿಯೇ ಅಂಗಗತ ಭಕ್ತಿಯೆನಿಸುವುದು. (ಅಂಗನ ಜ್ಞಾನಕ್ರಿಯೆಗಳು ಶ್ರದ್ಧಾದಿಭಕ್ತಿಯಿಂದ ಕೂಡದಿದ್ದರೆ ಅವು ನಿಷ್ಫಲಗಳಾಗುವವೆಂಬುದನ್ನು ಇಲ್ಲಿ ಗ್ರಹಿಸಬೇಕು.)

(೫) ಅಂಗನ ಹಸ್ತಗಳು ೬ : ಜಗತ್ತಿನಲ್ಲಿ ಪ್ರತಿಯೊಂದು ವಸ್ತುವಿನ ಸಾಧನೆಗೆ ಆ ವಸ್ತುವಿನ ಅಸ್ತಿತ್ವವೇ ಮನುಷ್ಯನಲ್ಲಿ ಉಂಟಾಗುವ ಮೊದಲನೆಯ ಸ್ಫುರಣವು. ಹೀಗೆ ಉಂಟಾದ ವಸ್ತುಸತ್ತೆಯೇ ಭಾವವೆನಿಸುವುದು. ಆ ವಸ್ತುಸತ್ತೆಯನ್ನು ಯಾವಾಗಲೂ ತಿಳಿಯತಕ್ಕದ್ದೇ ಜ್ಞಾನವು. ತಿಳಿದುದನ್ನು ಸರ್ವದಾ ಮನನ ಮಾಡತಕ್ಕದ್ದೇ ಮನಸ್ಸು, ಮನನ ವಿಷಯವನ್ನು 'ನನ್ನದು, ಎಂದು ಅಹಂಕರಿಸುವುದೇ ಅಹಂಕಾರ, ಅಹಂಕರಿಸಿದ ವಿಷಯದ ಗುಣದೋಷಗಳನ್ನು ನಿಶ್ಚಯಿಸುವುದೇ ಬುದ್ಧಿಯು, ನಿಶ್ಚಿತ ವಿಷಯದ ಸ್ಥಿರತೆಗೆ ಆಶ್ರಯವಾದುದೇ ಚಿತ್ತವು. ಈ ಭಾವಾದಿ ಷಟ್ಕವೇ ವಸ್ತುಸಾಧಕವು. ಈ ಭಾವಾದಿಗಳು ಕ್ರಮವಾಗಿ— ಸದ್ಭಾವ, ಸುಜ್ಞಾನ, ಸುಮನ, ನಿರಹಂಕಾರ, ಸುಬುದ್ಧಿ, ಸುಚಿತ್ತವಾಗಿ ಪರಿಣಮಿಸಿದಾಗ ಲಿಂಗಾರ್ಪಣ ಪದಾರ್ಥಗಳನ್ನು ಲಿಂಗಕ್ಕೆ ಅರ್ಪಿಸುವುದಕ್ಕೆ ತಕ್ಕ ಹಸ್ತಗಳಾಗುವವು ಇವೇ ಅಂಗನ ೬ ಹಸ್ತಗಳೆನಿಸುವವು.

(೬) ಲಿಂಗಮುಖ ೬ : ಅಂಗನ ವಿಷಯಗ್ರಾಹಕಗಳಾದ ಪಂಚಜ್ಞಾನೇಂದ್ರಿಯಗಳೂ ಮನಸ್ಸೂ ಕೂಡಿ ಆರಾಗುವವು. ಇವು ಪ್ರಸಾದ ಗ್ರಹಣಕ್ಕೆ ತಕ್ಕಂತೆ ಶುದ್ಧವಾದಾಗ ಲಿಂಗಮುಖಗಳೆನಿಸುವವು.

(೭) ಪದಾರ್ಥಗಳು ೬ : ಗಂಧ, ರಸ, ರೂಪ, ಸ್ಪರ್ಶ, ಶಬ್ದ, ಈ ಐದರಿಂದುಂಟಾಗುವ ತೃಪ್ತಿ, ಈ ಆರು ಅಂಗನ ಭೋಗ್ಯಪದಾರ್ಥಗಳು.

(೮) ಪ್ರಸಾದ ೬ : ಮೇಲಿನ ಆರು ಪದಾರ್ಥಗಳೇ ಕ್ರಮವಾಗಿ ಆಚಾರಾದಿಯಾದ ಆರು ಲಿಂಗಗಳಿಗೆ ನಾಶಿಕಾದಿ ಷಡಿಂದ್ರಿಯ ಮುಖದಿಂದ ಅಂಗನ ಸುಚಿತ್ತಾದಿಯಾದ ಆರು ಹಸ್ತಗಳಿಂದ ಅರ್ಪಿತವಾಗಿ, ಅಂಗನು ಭೋಗಿಸುವ ಷಡ್ವಿಧಲಿಂಗ ಪ್ರಸಾದಗಳೆನಿಸಿಕೊಳ್ಳುವವು.

ಹೀಗೆ ವಿವರಿಸಿದ ಅಷ್ಟವಿಧ ಸಕೀಲುಗಳ ವಿಚಾರದೊಡನೆ ಷಟ್ಸ್ಥಲಾಚರಣೆಯನ್ನು ಮಾಡುವುದರಿಂದ ಲಿಂಗಾಂಗಸಾಮರಸ್ಯಜ್ಞಾನವು ಸಿದ್ಧಿಸುವುದು. ಈ ಜ್ಞಾನವನ್ನು ಪಡೆಯುವುದೇ ಮುಖ್ಯವು. ಇಲ್ಲಿ ಜ್ಞಾನವೆಂದರೆ ಕ್ರಿಯಾರಹಿತವಾಗಿರುವುದಿಲ್ಲ. ಯಾವಾಗಲೂ ಕ್ರಿಯಾಸಹಿತವಾಗಿಯೇ ಇರುವುದು. ಕ್ರಿಯಾಜ್ಞಾನಗಳು ದೇಹ-ಪ್ರಾಣಗಳಂತಿರುವವು. ಒಂದನ್ನು ಬಿಟ್ಟೊಂದಿರುವುದಿಲ್ಲ. ಕ್ರಿಯಾಜ್ಞಾನಗಳ ಸಮುಸಮುಚ್ಚಯವೇ ವೀರಶೈವರಿಗೆ ಗ್ರಾಹ್ಯವೆಂಬುದನ್ನು ಮರೆಯಬಾರದು. ಮತ್ತು ಈ ಜ್ಞಾನಕ್ರಿಯೆಗಳು ಶ್ರದ್ಧಾದಿರೂಪವಾದ ಭಕ್ತಿಯಿಂದ ಹುಟ್ಟಿ ಭಕ್ತಿ-ಮಯಗಳಾಗಿ ಪರಿಣಮಿಸಬೇಕು. ಹೀಗೆ ಪರಿಣಮಿಸದಿದ್ದರೆ ಫಲಕಾರಿಗಳಾಗು-ವುದಿಲ್ಲ. ನಾವು ಲಿಂಗಜ್ಞಾನವುಳ್ಳವರಾಗಿ ಲಿಂಗಪೂಜಾದಿ ಕ್ರಿಯೆಗಳನ್ನೇನೋ ಮಾಡುತ್ತಿರುವೆವು. ( ತಿಳಿದಂತೆ ನಡೆಯುತ್ತಿರುವೆವು ) ಆದರೆ, ಆ ಲಿಂಗಜ್ಞಾನ ಕ್ರಿಯೆಗಳಲ್ಲಿ ಶ್ರದ್ಧೆಯಿಲ್ಲದಿರುವುದರಿಂದ ನಮಗೆ ಅವು ಫಲಪ್ರದಗಳಾಗಿ ಕಾಣುವುದಿಲ್ಲ ವೆಂಬುದನ್ನು ಗಮನಿಸಬೇಕು. ಈ ವಿಷಯದಲ್ಲಿ ಮಾಯಿದೇವರು, ಭಕ್ತಿಯೇ ಬೀಜವು, ಜ್ಞಾನವೇ(ಕ್ರಿಯಾಯುಕ್ತವಾದ ಜ್ಞಾನವೇ) ಅಂಕುರವು. ಶಿವಾನುಗ್ರಹವೇ ಫಲವು, ಎಂಬುದಾಗಿ ಶಿವಾನಲ್ಲಭಶತಕದಲ್ಲಿ ಹೇಳಿರುವ ೯೨ ನೆಯ ಪದ್ಯವು ಪ್ರಮಾಣವಾಗಿರುವುದು.

(೩) ಕ್ರಿಯೆ : ಷಟ್‌ಸ್ಥಲಮಾರ್ಗದ ಕ್ರಿಯೆಯು ಜ್ಞಾನಸಹಿತವಾಗಿಯೇ ಇರುವುದೆಂಬುದನ್ನು ಮರೆಯಬಾರದು. ಏಕೆಂದರೆ ಶಿವಶಕ್ತಿಯು ಜ್ಞಾನಕ್ರಿಯಾ-ತ್ಮಕವಾಗಿರುವುದಲ್ಲದೆ ಕೇವಲ ಜ್ಞಾನರೂಪವಾಗಿ ಅಥವಾ ಕ್ರಿಯಾರೂಪವಾಗಿ ಇರುವುದಿಲ್ಲ. ಜ್ಞಾನಕ್ರಿಯೆಗಳಿಗೆ ನಿತ್ಯಸಂಬಂಧವಿರುವುದು. ಕ್ರಿಯಾರಹಿತವಾದ ಜ್ಞಾನವು ಅನುಭವವಾಗಿ ಪರಿಣಮಿಸುವುದಿಲ್ಲ. ಜ್ಞಾನರಹಿತವಾದ ಕ್ರಿಯೆ. ಶುದ್ಧ ಕ್ರಿಯೆ (ಲಿಂಗಕ್ರಿಯೆ) ಎನಿಸುವುದಿಲ್ಲ. ಇದು ವೀರಶೈವರ ನಿರ್ಣಯ. ಈ ದೃಷ್ಟಿ-ಯಿಂದಲೇ ಚೆನ್ನಬಸವಣ್ಣನವರು "ಕ್ರಿಯೆಯೇ ಜ್ಞಾನ, ಆ ಜ್ಞಾನವೇ ಕ್ರಿಯೆ, ಜ್ಞಾನವೆಂದರೆ ತಿಳಿಯುವುದು; ಕ್ರಿಯೆಯೆಂದರೆ ತಿಳಿದಂತೆ ಮಾಡುವುದು" ಎಂದು ಹೇಳಿರುವರು. ಈ ಬಗೆಯಾದ ಜ್ಞಾನಸಹಿತವಾದ ಕ್ರಿಯೆಯನ್ನು ವೀರಶೈವರು ಶಿವಪ್ರಸಾದವು - ಎಂದರೆ ಶಿವಾನುಗ್ರಹದಿಂದ ಪ್ರಾಪ್ತವಾದುದೆಂದು ತಿಳಿಯಬೇಕು.

ಈ ಶಿವಪ್ರಸಾದ ಕ್ರಿಯೆಯಿಂದಲೇ ಶಿವಭಕ್ತಿಯು ಲಭಿಸುವುದು. ಶಿವಪ್ರಸಾದಕ್ಕೂ ಶಿವಭಕ್ತಿಗೂ ಬೀಜಾಂಕುರಗಳಿಗಿದ್ದಂತೆ ಪರಸ್ಪರವಾಗಿ ಜನ್ಯಜನಕ ಭಾವವಿರುವುದು. ಕ್ರಿಯೆ ಅಥವಾ ಕರ್ಮದಲ್ಲಿ-ಪಾಪಕರ್ಮ-ಪುಣ್ಯಕರ್ಮ-ಜ್ಞಾನಕರ್ಮ-ಪ್ರಸಾದಕರ್ಮವೆಂದು ೪ ಬಗೆಯಿದ್ದು, ಪಾಪಕರ್ಮದಿಂದ ನರಕವೂ ಪುಣ್ಯಕರ್ಮದಿಂದ ಸ್ವರ್ಗವೂ ಜ್ಞಾನ ಕರ್ಮದಿಂದ ಮೋಕ್ಷವೂ, ಪ್ರಸಾದಕರ್ಮದಿಂದ ಭಕ್ತಿಯೂ ಉಂಟಾಗುವುದೆಂಬ ವಿಚಾರವನ್ನು ಮಾಯಿದೇವರು ಶಿವಾನುಭವ ಸೂತ್ರದ ಅಷ್ಟಮಾಧಿಕರಣದ ೩೦-೩೧ ಸೂತ್ರಗಳಲ್ಲಿ ಪ್ರತಿಪಾದಿಸಿರುವರು. ಮತ್ತು ಶಿವಾಧವಶತಕದ ೭೮ ನೆಯ ಪದ್ಯ-ದಲ್ಲಿಯೂ ಚತುರ್ವಿಧಕರ್ಮದ ಸ್ವರೂಪವನ್ನು ನಿರೂಪಿಸಿರುವರು. ಭಕ್ತಿಯೇ ಫಲವಾಗಿರುವ ಈ ಪ್ರಸಾದಕರ್ಮದಲ್ಲಿ ಪಾಪಪುಣ್ಯಗಳ ಮತ್ತು ಬಂಧಮೋಕ್ಷಗಳ ಸಂಬಂಧವಿರುವುದಿಲ್ಲ; ಕೇವಲ ಭಕ್ತಿಯ ವೈಭವವಿರುವುದು. ಹೀಗೆ ಭಕ್ತಿ ವೈಭವ ವುಳ್ಳ ಕ್ರಿಯೆಯೇ ಷಟ್‌ಸ್ಥಲ ಮಾರ್ಗದ ಕ್ರಿಯೆಯಾಗಿರುವುದು. ಈ ಕ್ರಿಯೆಯು ಲಿಂಗಾರ್ಚನಾದಿರೂಪವಾಗಿಯೂ ಇರಬಹುದು. ಅಥವಾ ಲೌಕಿಕ ವರ್ತನೆಗೆ ಸಂಬಂಧಿಸಿದುದಾಗಿ - ಎಂದರೆ - ಕಾಯಕರೂಪವಾಗಿಯೂ ಇರಬಹುದು. ಯಾವ ರೂಪದಲ್ಲಿದ್ದರೂ ಅದೆಲ್ಲವೂ ಶಿವಕ್ರಿಯೆಯಾಗಿಯೇ ಪರಿಣಮಿಸುವುದು. ಈ ವಿಷಯುವನ್ನು ಮಾಯಿದೇವರು ಶಿವಾಧವಶತಕದಲ್ಲಿ– "ಲೌಕಿಕವೃತ್ತಿಯೇ ಮರಳಿ ಭಾಕ್ತಿಕ ವರ್ತನವಾಗಿ............ ಎಂದಿರುವ ೬೭ ನೆಯ ಪದ್ಯದಲ್ಲಿ ಸೊಗಸಾಗಿ ನಿರೂಪಿಸಿರುವರು ಈ ವಿಚಾರದಿಂದ - ವೀರಶೈವನು ನಾನು,ನನ್ನದೆಂಬ ಅಹಂಕಾರ ಮಮಕಾರಗಳನ್ನು ಬಿಟ್ಟು, ತ್ಯಾಗಾಂಗನಾಗಿ, ಸರ್ವವೂ ಶಿವನದು, ಶಿವನಿಗಾಗಿ ಮಾಡುವೆನು ಎಂಬ ದಾಸೋಹಂಭಾವ (ನಿರಹಂಭಾವ) ದಿಂದ ದುಡಿದು, ದುಡಿ-ದುದನ್ನು ಶಿವನಿಗರ್ಪಿಸಿ, ಅದನ್ನು ಪ್ರಸಾದಭಾವದಿಂದ ಭೋಗಿಸಿ, ಭೋಗಾಂಗ-ನೆನಿಸಿಕೊಳ್ಳಬೇಕು. ಮತ್ತು ಸರ್ವದಾ ಶಿವನೊಡನೆ ಕೂಡಿ (ಲಿಂಗಸಂಗಿಯಾಗಿ) ಶಿವನಿಗಾಗಿ ಶಿವಲೀಲೆಯಂತೆ ಕ್ರಿಯೆಯನ್ನಾಚರಿಸಿ, ಯೋಗಾಂಗನಾಗಬೇಕೆಂಬುದೇ ವೀರಶೈವ ಕ್ರಿಯೆಯ ಸ್ವರೂಪವೆಂಬುದನ್ನು ಅರಿತುಕೊಳ್ಳಬಹುದಾಗಿದೆ.

(೪) **ವೈರಾಗ್ಯ :** ಜೀವಿಯು ಸಂಸಾರವು ಹೇಯವೆಂದು ತಿಳಿದು, ಸಂಸಾರ ಭೋಗವನ್ನು ತ್ಯಜಿಸಿ, ಸನ್ಯಾಸವನ್ನು ಸ್ವೀಕರಿಸಿ, ದೇವರ ಧ್ಯಾನದಲ್ಲಿದ್ದು, ಯಾವುದೊಂದನ್ನೂ ಬೇಕೆಂದು ಬಯಸದೆ, ಮೋಕ್ಷವೊಂದನ್ನೇ ಬಯಸುವುದೇ ವೈರಾಗ್ಯವೆಂದು ವೈರಾಗ್ಯದ ಸ್ವರೂಪವನ್ನು ಪ್ರತಿಪಾದಿಸುವುದುಂಟು. ಈ ಬಗೆಯ ಪ್ರತಿಪಾದನೆಯು ಷಟ್‌ಸ್ಥಲಮಾರ್ಗದಲ್ಲಿಲ್ಲ. ಷಟ್‌ಸ್ಥಲಮಾರ್ಗದಲ್ಲಿರುವ ಶರಣ ನಿಗೆ ಸಂಸಾರವು ಹೇಯವಲ್ಲ ನಾನು ಸಂಸಾರಿ, ಇದೆಲ್ಲವೂ ನನ್ನದು, ಎಂಬ

ಅಹಂಕಾರ ಮಮಕಾರಗಳು ಹೇಯವಾಗಿರುವವು. ಸಂಸಾರವೇ ಹೇಯವಾಗಿರುವು ದಿಲ್ಲ. ನಾನು 'ಶಿವಾಂಶಿಕನು, ಇದೆಲ್ಲವೂ ಶಿವನದು' ಎಂಬ ಭಕ್ತಿಭಾವನೆಯಿಂದ ಕೂಡಿದ ಸಂಸಾರವು ಹೇಯವಲ್ಲ, ಉಪಾದೇಯವು. ಸಂಸಾರದ ವಿಷಯಾದಿ ಭೋಗವು ವಿಷಯರೂಪದಿಂದ ಹೇಯವು, ಪ್ರಸಾದರೂಪದಿಂದ ಶ್ರೇಯವು. ಜೀವಿಯು ಪಿಂಡ-ಜ್ಞಾನ-ಸ್ಥಲದಲ್ಲಿ ನಾನು ಶರೀರದಿಂದ ಭಿನ್ನನು ನನಗೆ ಶಿವನು ಪ್ರೇರಕನಿರುವನು ಎಂದು ತಿಳಿದಿರುವನು. ಆ ಜೀವಿಯು ಸಂಸಾರಹೇಯಸ್ಥಲವನ್ನು ಹೊಂದಿದಾಗ ನನಗೆ ಸಂಸಾರದಲ್ಲಿ ಅನುರಕ್ತಿಯಾಗಲಿ, ವಿರಕ್ತಿಯಾಗಲಿ ಉಂಟಾ ಗುವುದು ಶಿವಪ್ರೇರಣೆಯಿಂದ. ಶಿವನು ನನ್ನನ್ನು ಸಂಸಾರದಲ್ಲಿರಿಸಿದರೆ ನಾನು ಸಂಸಾರಿಯಾಗುವೆನು. ಈ ಸಂಸಾರವು ನನ್ನದೆಂದು ತಿಳಿದುಕೊಳ್ಳುವುದು ಹೇಯವು, ಇದು ಶಿವಪ್ರೇರಣೆಯಿಂದ ಪ್ರಾಪ್ತವಾಗಿ ಶಿವನದಾಗಿರುವುದು. ನಾನು ಸಂಸಾರದಲ್ಲಿದ್ದು, ಸಂಸಾರಭೋಗವನ್ನು ಲಿಂಗಭೋಗೋಪಭೋಗವನ್ನಾಗಿ ಮಾಡಿ ಕೊಳ್ಳುವೆನು. ಇಷ್ಟೇ ಅಲ್ಲ; ನನ್ನ ತನುಕರಣಾದಿಗಳನ್ನೂ ನನ್ನನ್ನೂ ಶಿವನಿಗರ್ಪಿಸಿ, ಶಿವಸಾಮರಸ್ಯವನ್ನು ಪಡೆಯುವೆನು ಎಂಬ ವಿವೇಕವನ್ನು ಪಡೆದು, ಅಹಂಕಾರ ಮಮ ಕಾರಗಳಿಗೊಳಪಟ್ಟ ಸಂಸಾರದಲ್ಲಿ ಹೇಯಬುದ್ಧಿಯುಳ್ಳವನಾಗುವನು. ಇದೇ ಸಂಸಾರಹೇಯಸ್ಥಲದ ಸಹಜವಾದ ಅರ್ಥವಿರುವುದು- ಹೀಗೆ ವಿವೇಕಶಾಲಿಯಾದ ಜೀವಿಯು ಗುರುಕಾರುಣ್ಯವನ್ನು ಪಡೆದು, ದೀಕ್ಷೆಯಿಂದ ಲಿಂಗಧಾರಣವನ್ನು ಹೊಂದಿ, ಲಿಂಗ-ಅಂಗ-ಸಂಯೋಗದ ಬೋಧೆಯನ್ನು ಶ್ರೀಗುರುಮುಖದಿಂದ ಪಡೆದು, ಷಟ್ ಸ್ಥಲಾಚರಣೆಯಲ್ಲಿ ತೊಡಗುವನು. ಇನ್ನು ಸಾಮಾಜಿಕ ದೃಷ್ಟಿಯಿಂದ ಹೇಳುವು ದಾದರೆ ವೀರಶೈವಸಮಾಜದಲ್ಲಿ ಸಹಜವೈರಾಗ್ಯಶೀಲರಾದ ಪ್ರಭುದೇವರು, ಅಕ್ಕಮಹಾ ದೇವಿ ಮೊದಲಾದವರು ಅವಿವಾಹಿತರಾಗಿ ವೈಯಕ್ತಿಕ ಜೀವನಮಾರ್ಗದಲ್ಲಿಯೂ ಇದ್ದುದುಂಟು. ಬಸವೇಶ್ವರ, ಮೋಳಿಗೆಮಾರಯ್ಯ ಮೊದಲಾದ ಬಹುಸಂಖ್ಯಾಕ ಶರಣರು ವಿವಾಹಿತರಾಗಿ - ಕುಟುಂಬಜೀವಿಗಳಾಗಿಯೇ ಇದ್ದರು. ಇವರೆಲ್ಲರೂ ಕೂಡಿಯೇ ಸಮಾಜದಲ್ಲಿ ಷಟ್‌ಸ್ಥಲಾಚರಣೆಯ ಪ್ರಗತಿಯನ್ನು ಸಾಧಿಸಿರುವರು. ವಿರಾಗವೂ, ಅನುರಾಗವೂ ಅವರವರ ಸ್ವಭಾವಕ್ಕನುಸರಿಸಿ ಇದ್ದವಲ್ಲದೆ, ಅವುಗಳಿಂದ ಷಟ್‌ಸ್ಥಲಾಚರಣೆಗೆ ಅನುಕೂಲವಾಗಲಿ, ಪ್ರತಿಕೂಲವಾಗಲಿ ಉಂಟಾಗುತ್ತಿರಲಿಲ್ಲ. ವಿವಾಹವು ಷಟ್‌ಸ್ಥಲಾಚರಣೆಗೆ ಪ್ರತಿಬಂಧಕವೆಂದೂ ಅವರು ತಿಳಿದಿರಲಿಲ್ಲ. ಈ ದೃಷ್ಟಿಯಿಂದಲೇ ವೈರಾಗ್ಯಚಕ್ರವರ್ತಿಗಳಾದ ತೋಂಟದ ಶ್ರೀ ಸಿದ್ಧಲಿಂಗ ಶಿವಯೋಗಿ ಗಳು "ಕಾಯವೆಂಬ ವಸಿತೆಗೆ ಆತ್ಮನೆಂಬ ಪುರುಷನು ನೋಡಾ ! ಈ ದೇಹದ ಆತ್ಮನ ಸಂಪರ್ಕದಿಂದ ಹುಟ್ಟಿದ ಸಕಲ ಕರಣೇಂದ್ರಿಯಗಳೇ ಮಕ್ಕಳು ನೋಡಾ ! ಇದೇ ಸಂಸಾರವೆಂಬುದನರಿಯದೆ, ನಾನು ಹೊನ್ನು-ಹೆಣ್ಣು-ಮಣ್ಣು ಬಿಟ್ಟ ವಿರಕ್ತನಾದೆ

ನೆಂಬ ಅಜ್ಞಾನಿಯು ಪರಿಯ ನೋಡಾ ! ಇದು ವಿರಕ್ತಿಯೇ ಅಲ್ಲ. ದೇಹೇಂದ್ರಿಯ, ಮನಃ, ಪ್ರಾಣಾದಿಗಳ ಮಹದಲ್ಲಿ ಒಡಗೂಡಿಸಿದಾತನೇ ಪರಮವಿರಕ್ತನು; ಆತಂಗೆ ನಮೋ ನಮೋ ಎಂದೆನು ಕಾಣಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ” ಎಂಬ ವಚನದಿಂದ ವಿವಾಹದಿಂದಲೇ ಸಂಸಾರಿಯಾಗುವನೆಂಬುದನ್ನು ನಿಷೇಧಿಸಿರುವರು.

ಈ ವಿಚಾರದಿಂದ ಸಂಸಾರಿಯಾಗದೆ ಸನ್ಯಾಸಿಯಾಗಿ, ಮೋಕ್ಷವು ಬೇಕು; ಭೋಗವು ಬೇಡವೆಂಬುದು ಶರಣಮಾರ್ಗದ ವೈರಾಗ್ಯವಲ್ಲವೆಂಬುದು ಗೊತ್ತಾಗುವುದು. ಇನ್ನು ಬೇಕು ಬೇಡವೆಂಬೆರಡನ್ನೂ ಬಿಟ್ಟು ನಿಸ್ಪೃಹನಾಗಿ ಸಹಜ ಸ್ಥಿತಿಯಲ್ಲಿರುವುದೇ ವೈರಾಗ್ಯವೆಂಬುದು ಶರಣರ ಅಭಿಪ್ರಾಯವಿರುವುದು. ಶರಣರು ಮೋಕ್ಷವನ್ನು ಬೇಕೆಂದು ಬಯಸುವುದಿಲ್ಲ; ಭೋಗವು, ಲಿಂಗಭೋಗೋಪಭೋಗವಾದುದರಿಂದ ಅದನ್ನು ಬೇಡವೆಂದೂ ಹೇಳುವುದಿಲ್ಲ. ಹೀಗೆ ಬಯಸದೆ ಬೇಡವೆಂದುಸುರದೆ, ಅವರು ಸಹಜವಾಗಿಯೇ ಭೋಗಮೋಕ್ಷಪರರಾಗಿರುವರೆಂಬುದನ್ನು ಶಿವಾಧವಶತಕದ ೧೧ ನೆಯ ಪದ್ಯದಲ್ಲಿ ಮಾಯಿದೇವರು ಚೆನ್ನಾಗಿ ಬೋಧಿಸಿರುವರು. ಮತ್ತು ಬೇಕು ಬೇಡೆಂಬುದನ್ನು ಬಿಟ್ಟ ವೈರಾಗ್ಯಶೀಲನಾದ ಶರಣನು – ಶಿವನೆ, ನಿನ್ನನ್ನೂ ಬೇಡದ ಹಾಗೆ ಮಾಡು ಎಂದು ಪ್ರಾರ್ಥಿಸುವನೆಂಬುದನ್ನು ಮಹದೈಪುರೀಶ್ವರಶತಕದ ೯೪ ನೆಯ ಪದ್ಯದಲ್ಲಿ ಸ್ಪಷ್ಟಪಡಿಸಿರುವನು.

(೫) **ಶರಣಮಾರ್ಗವು ದ್ವೈತಾದ್ವೈತವಿಲಕ್ಷಣವು :** ಮಾಯಿದೇವರ ಶಿವಾವಲ್ಲಭಶತಕದ ೫೦ ನೆಯ ಪದ್ಯದಲ್ಲಿ : ಶರಣನು ತಾನೇ ಶಿವಸ್ವರೂಪಿಯಾಗಿ, ತನಗಿಂತಲೂ ಭಿನ್ನವಾದುದಾವುದೊಂದನ್ನೂ ನೆನೆಯದಿರುವುದರಿಂದ ದ್ವೈತರಹಿತನಾಗಿರುವನು. ಮತ್ತು ತಾನೇ ಶಿವನೆಂಬ ಅಹಂಕಾರವಿಲ್ಲದವನಾಗಿ ನಿರಹಂ ( ದಾಸೋಹಂ ) ಭಾವದಿಂದಿರುವುದರಿಂದ ಅದ್ವೈತರಹಿತನಾಗಿರುವನು. ಆದುದರಿಂದ ಶರಣಮಾರ್ಗವು ದ್ವೈತಾದ್ವೈತವಿಲಕ್ಷಣವಾಗಿರುವುದೆಂಬಭಿಪ್ರಾಯವು ವ್ಯಕ್ತವಾಗಿರುವುದು. ಈ ವಿಷಯದ ವಿಚಾರವು ಹೀಗಿರುವುದು — ದ್ವೈತವಾದಿಗಳು ದೇವರಿಗೂ ಜೀವನಿಗೂ ಯಾವಾಗಲೂ ಎಂದರೆ ಮುಕ್ತಾವಸ್ಥೆಯಲ್ಲಿಯೂ ಭೇದವನ್ನು ಅಂಗೀಕರಿಸುವರು. ಮತ್ತು ಅವರು ದೇವರ ಸಾಕಾರರೂಪವನ್ನು ಒಪ್ಪುವರಲ್ಲದೆ ನಿರಾಕಾರವನ್ನು ಒಪ್ಪುವುದಿಲ್ಲ. ದ್ವೈತಿಗಳ ದಾಸೋಹಂಭಾವದಲ್ಲಿ ದೇವರಿಗೂ ಜೀವನಿಗೂ ಯಾವಾಗಲೂ ಭೇದಭಾವವಿರುವುದು.

ಅದ್ವೈತವಾದಿಗಳು — ಬ್ರಹ್ಮಾತಿರಿಕ್ತವಾದುದು ಯಾವುದೂ ಇರುವುದಿಲ್ಲ. ಬ್ರಹ್ಮಾತಿರಿಕ್ತವಾಗಿ ತೋರುವ ಜೀವಜಗತ್ತುಗಳು ಮಿಥ್ಯಾರೂಪವಾಗಿರುವವೆಂದು

ಹೇಳುವರು. ಮತ್ತು ಬ್ರಹ್ಮನು ನಿರಾಕಾರನಾಗಿರುವನು. ಆತನ ಸಾಕಾರರೂಪವು ಸತ್ಯವಲ್ಲ ಮಿಥ್ಯವೆಂದು ವಾದಿಸುವರು. ಅದ್ವೈತ ವಾದದಲ್ಲಿ ಜ್ಞಾನವೊಂದೇ ಮುಕ್ತಿಗೆ ಮುಖ್ಯಸಾಧನವೆಂದು ಉಕ್ತವಾಗಿರುವುದು.

ಶರಣಮಾರ್ಗದಲ್ಲಿ — ಶಿವಜೀವರಿಗೆ ಯಾವಾಗಲೂ ಭೇದವನ್ನಂಗೀಕರಿಸುವುದಿಲ್ಲ. ಮತ್ತು ಶಿವನ ಸಾಕಾರ ನಿರಾಕಾರ ಸ್ವರೂಪಗಳೆರಡೂ ಅಂಗೀಕರಿಸಲ್ಪಟ್ಟಿವೆ. ಶರಣನು ದಾಸೋಹಂಭಾವದಲ್ಲಿದ್ದರೂ ತಾನು ಯಾವಾಗಲೂ ಶಿವನಿಗಿಂತ ಭಿನ್ನನೆಂದು ತಿಳಿದು ದಾಸನಾಗಿರುವುದಿಲ್ಲ. ತನ್ನಲ್ಲಿಯೂ ಶಿವಸ್ವರೂಪವಿರುವುದರಿಂದ ತಾನು ಶಿವನಿಂದ ಭಿನ್ನನಲ್ಲವೆಂದೇ ಭಾವಿಸಿರುವನು. ಈ ಕಾರಣದಿಂದ ಶರಣಮಾರ್ಗವು ದ್ವೈತವಿಲಕ್ಷಣವಾಗಿರುವುದು.

ಇನ್ನು ಶರಣರು, ಅದ್ವೈತಿಗಳು ಹೇಳುವ ಬ್ರಹ್ಮಾತಿರಿಕ್ತವಾದ ಜೀವಜಗತ್ತುಗಳು ಮಿಥ್ಯವೆಂಬ ವಾದವನ್ನು ಒಪ್ಪುವುದಿಲ್ಲ. ಮತ್ತು ಬ್ರಹ್ಮಸ್ವರೂಪನಾದ ಶಿವನ ಸಾಕಾರವನ್ನು ಮಿಥ್ಯವೆಂದು ಹೇಳುವುದಿಲ್ಲ. ಇನ್ನು ಮುಕ್ತಿಗೆ ಜ್ಞಾನವೊಂದೇ ಮುಖ್ಯ ಸಾಧನವಲ್ಲ; ಜ್ಞಾನಕ್ರಿಯೆಗಳೆರಡೂ ಮುಖ್ಯ ಸಾಧನವಾಗಿರುವವೆಂದು ಒಪ್ಪುವರು. ಆದುದರಿಂದ ಶರಣ ಮಾರ್ಗವು ಅದ್ವೈತವಿಲಕ್ಷಣವಾಗಿಯೂ ಇರುವುದು. ಇಷ್ಟೇ ಅಲ್ಲ; ಈ ಮಾರ್ಗದಲ್ಲಿ ದ್ವೈತಾದ್ವೈತ ವಿಲಕ್ಷಣವಾದ ವಿಚಾರಗಳು ಇನ್ನೂ ಇರುವವು. ಲೇಖನ ವಿಸ್ತಾರ ಭಯದಿಂದ ಅವುಗಳನ್ನು ಇಷ್ಟಕ್ಕೇ ಬಿಡಲಾಗಿದೆ. ಆದರೆ, ಮೇಲಿನ ವಿವರಣೆಯು, ಭೇದವು ನಿತ್ಯವೆಂದು ವಾದಿಸುವ ದ್ವೈತಸಿದ್ಧಾಂತಿಗಳಿಗೂ, ಜೀವಜಗತ್ತುಗಳು ಮಿಥ್ಯವೆಂದು ವಾದಿಸುವ ಶಂಕರಾದ್ವೈತದ ವೇದಾಂತಿಗಳಿಗೂ ಸಂಬಂಧಿಸಿರುವುದೆಂದು ಗ್ರಹಿಸಬೇಕು. ಷಟ್‌ಸ್ಥಲ ಸಿದ್ಧಾಂತದಲ್ಲಿ ಭೇದವನ್ನು ಹೇಳುವ ದ್ವೈತವಿರುವುದು, ಆದರೆ ಆ ಭೇದವು ನಿತ್ಯವಲ್ಲ. ಅಭೇದದಲ್ಲಡಗುವ ಭೇದವಾಗಿರುವುದು. ಶಿವನು ಲಿಂಗಾಂಗಗಳಾಗಿ ಭೇದವನ್ನು ಹೊಂದುವನು. ಕೊನೆಯಲ್ಲಿ (ಐಕ್ಯಸ್ಥಲದಲ್ಲಿ) ಅಂಗನನ್ನು ಲಿಂಗರೂಪನನ್ನಾಗಿ ಮಾಡಿ, ತಾನು ಮೊದಲಿನಂತೆ ಅಭೇದರೂಪದಿಂದಿರುವನು. ಇನ್ನು ಅಭೇದವಾದದ ಅದ್ವೈತವೂ ಇರುವುದು, ಅದು ಶಂಕರಾದ್ವೈತವಲ್ಲ, ಶಿವಾದ್ವೈತವು. ಈ ಶಿವಾದ್ವೈತವು ಷಟ್‌ಸ್ಥಲಸಿದ್ಧಾಂತದಲ್ಲಿ ಬರುವ ಸ್ಥಲಶಕ್ತಿಯಿಂದ ಕೂಡಿರುವುದರಿಂದ ಶಕ್ತಿವಿಶಿಷ್ಟಾದ್ವೈತವೂ ಆಗಿರುವುದು. ಈ ಅದ್ವೈತವು ಶಂಕರಾದ್ವೈತದಂತೆ ಜೀವಜಗತ್ತುಗಳನ್ನು ಮಿಥ್ಯವೆಂದು ಹೇಳದೆ ಸತ್ಯವೆಂದು ಹೇಳುತ್ತಿರುವುದು. ಆದುದರಿಂದ ಶರಣಮಾರ್ಗದಲ್ಲಿಯೂ ದ್ವೈತಾದ್ವೈತಗಳಿರುವವು. ಅವು ಮೇಲೆ ವಿವರಿಸಿದ ದ್ವೈತಾದ್ವೈತಗಳಲ್ಲವೆಂಬುದನ್ನು ಷಟ್‌ಸ್ಥಲ

ತತ್ವಜ್ಞರು ಒಪ್ಪುವರು. ಈ ದೃಷ್ಟಿಯಿಂದಲೇ ಮಾಯಿದೇವರು ಶಿವಾನುಭವ ಸೂತ್ರದ ಪ್ರತಿಯೊಂದಧಿಕರಣಾಂತದ ಸೂತ್ರದಲ್ಲಿ ಷಟ್‌ಸ್ಥಲಸಿದ್ಧಾಂತವನ್ನು ಶಿವಾ-ದ್ವೈತವೆಂದು ಕರೆದಿರುವರು.

(೬) **ಶಿವಯೋಗ :** ಷಟ್‌ಸ್ಥಲಾಚರಣೆಗೆ ಸಂಬಂಧಿಸಿದ ಶಿವಯೋಗ ವೆಂಬುದು ಲಿಂಗಾಂಗಯೋಗವೇ ಆಗಿರುವುದು. ಶಿವಯೋಃ = ಶಿವಸ್ವರೂಪ ಲಿಂಗಾಂಗಯೋಃ-ಯೋಗಃ-ಶಿವಯೋಗಃ- (ಶಿವಸ್ವರೂಪವುಳ್ಳ ಲಿಂಗಾಂಗಗಳ ಯೋಗವೇ ಶಿವಯೋಗವು) - ಎಂದು ಶಿವಯೋಗದರ್ಥವಿರುವುದು. ಮತ್ತು ಯೋಗಶಬ್ದವು ಲಿಂಗಾಂಗಗಳ ಸಾಮರಸ್ಯವಾಚಕವಾಗಿರುವುದು. ಲಿಂಗಾಂಗ ಸಾಮರಸ್ಯವನ್ನು ಪಡೆಯುವುದೇ ಶಿವಯೋಗದ ಮುಖ್ಯೋದ್ದೇಶವಾಗಿರುವುದು.

ಈ ಶಿವಯೋಗದ ಸ್ವರೂಪವು ಶ್ರೀ ಚೆನ್ನಸದಾಶಿವ ಶಿವಯೋಗಿಗಳ ಶಿವಯೋಗ ಪ್ರದೀಪಿಕೆಯಲ್ಲಿ ಉಕ್ತವಾಗಿರುವುದು ಹೀಗೆ : ಶಿವಯೋಗವು ಶಿವಜ್ಞಾನ-ಶಿವಭಕ್ತಿ-ಶಿವಧ್ಯಾನ-ಶಿವವ್ರತ-ಶಿವಾರ್ಚನವೆಂದು ಪಂಚಪ್ರಕಾರವಾಗಿರುವುದು. ಈ ಪಂಚ ಪ್ರಕಾರದಲ್ಲಿ ಶಿವಾರ್ಚನೆಯೇ ಮುಖ್ಯವು. ಶಿವಾರ್ಚನೆಯು ಶಿವಜ್ಞಾನಾದಿ ಚತು ರ್ವಿಧದಿಂದ ಕೂಡಿಕೊಂಡಿರಬೇಕು. ಇದೇ ಶಿವಯೋಗವೆನಿಸುವುದೆಂದು ಹೇಳಿ-ಮತ್ತು—

ಶಿವಯೋಗಃ ಸಾಧಕಾನಾಂ ಸಾಧ್ಯಸ್ತತ್ಸಾಧನಂ ಹಟಃ
ತಸ್ಮಾದಾದೌ ಪ್ರಯೋಕ್ತವ್ಯಂ ಹಟಯೋಗಮಿದಂ ಶೃಣು

ಎಂದರೆ ಮುಕ್ತಿಯನ್ನು ಸಾಧಿಸುವವರಿಗೆ ಶಿವಯೋಗವೇ ಸಾಧಿಸತಕ್ಕುದಾಗಿದೆ. ಆ ಶಿವಯೋಗಕ್ಕೆ ಹಟಯೋಗವು ಸಾಧನವು-ಎಂದು ಹೇಳಿ, ಹಟಯೋಗದ ಅಂಗ ಗಳಾದ ಯಮನಿಯಮಾದ್ಯಷ್ಟಾಂಗಗಳನ್ನು ವಿವರಿಸಿ, ಈ ಅಷ್ಟಾಂಗಗಳಿಂದ ಶಿವನನ್ನು ಪೂಜಿಸಬೇಕೆಂದು ಅಷ್ಟಾಂಗಗಳನ್ನು ಶಿವಪೂಜಾಂಗಗಳನ್ನಾಗಿ ಮಾರ್ಪಡಿಸ ಲಾಗಿದೆ. ಮತ್ತು ಯಮನಿಯಮಗಳು ಭಕ್ತನಿಗೂ, ಆಸನವು ಮಹೇಶ್ವರನಿಗೂ, ಪ್ರಾಣಾಯಾಮವು ಪ್ರಾಣಲಿಂಗಿಗೂ, ಪ್ರತ್ಯಾಹಾರವು ಪ್ರಸಾದಿಗೂ, ಧ್ಯಾನಧಾರಣ ಗಳು ಶರಣನಿಗೂ, ಸಮಾಧಿಯು ಐಕ್ಯನಿಗೂ ಸಂಬಂಧಿಸಿರುವವೆಂದು ಷಟ್‌ಸ್ಥಲ ಗಳಲ್ಲಿ ಅಷ್ಟಾಂಗಗಳನ್ನು ಜೋಡಿಸಲಾಗಿದೆ.

ಆದರೆ ಮಾಯಿದೇವರು ಲಿಂಗಾಂಗಯೋಗರೂಪವಾದ ಶಿವಯೋಗಕ್ಕೆ ಧ್ಯಾನ, ಧಾರಣ, ಸಮಾಧಿ - ಈ ಮೂರನ್ನು ಮಾತ್ರ ಒಪ್ಪಿ, ಮೊದಲಿನ ಯಮಾದಿ

ಗಳಾದ ಐದಂಗಗಳನ್ನು ಕೈಬಿಟ್ಟಿರುವರು. ಏಕೆಂದರೆ ಯಮನಿಯಮಗಳು ಸದ್ಗುಣ ಸಂಪತ್ತಿಗೆ ಸೇರಿದವುಗಳು. ಆ ಗುಣಸಂಪತ್ತಿಯು ಪಂಚಾಚಾರಗಳ ಮೂಲಕವಾಗಿ ಸಮನಿಸುವುದರಿಂದ ಯಮನಿಯಮಾಂಗಗಳೆರಡನ್ನು ಬಿಟ್ಟಿರುವರು. ದೇಹಕ್ಕೆ ಸ್ಥಿರತೆಯನ್ನೊದಗಿಸುವ ಆಸನವೂ, ವಾಯುವಿನ ಸ್ಥಿರತೆಯನ್ನೊದಗಿಸುವ ಪ್ರಾಣಾಯಾಮವೂ ಇಷ್ಟಲಿಂಗಕ್ಕೆ ಸಂಬಂಧಿಸಿದ ದೃಷ್ಟಿಯೋಗದಿಂದಲೇ ಸಂಭವಿಸುವುದರಿಂದ ಆ ಆಸನ ಪ್ರಾಣಾಯಾಮಗಳನ್ನು ಬಿಟ್ಟಿರುವರು. ಇಂದ್ರಿಯಗಳನ್ನು ವಿಷಯಗಳಿಂದ ಹಿಂದಿರುಗಿಸುವ ಪ್ರತ್ಯಾಹಾರವು ಪ್ರಸಾದಿಸ್ಥಲದಲ್ಲಿ ಬೇಕಾಗದಿರುವುದರಿಂದ ಎಂದರೆ ಇಂದ್ರಿಯಗಳು, ವಿಷಯಗಳನ್ನು ವಿಷಯರೂಪದಿಂದ ಗ್ರಹಿಸದೆ ಪ್ರಸಾದ ರೂಪದಿಂದ ಗ್ರಹಿಸಿದರೆ, ಆ ವಿಷಯಗಳನ್ನು ಇಂದ್ರಿಯಗಳಿಂದ ಹಿಂದಿರುಗಿಸುವುದು ಅನವಶ್ಯಕವೆಂಬ ಕಾರಣದಿಂದ ಪ್ರತ್ಯಾಹಾರವನ್ನು ಬಿಟ್ಟಿರುವರು. ಹೀಗೆ ಶಿವಯೋಗದಲ್ಲಿ ಮೊದಲಿನ ಐದಂಗಗಳನ್ನು ಬಿಟ್ಟಿರುವರು. ಮಾಯಿದೇವರ ಶಿವಯೋಗಾಂಗಗಳಾದ ಧಾರಣ-ಧ್ಯಾನ-ಸಮಾಧಿಯೆಂಬ ಯೋಗಗಳಲ್ಲಿ ಇಷ್ಟಲಿಂಗವನ್ನು ಪೂಜಿಸುತ್ತ ಯಾವಾಗಲೂ ಅದನ್ನು ಅಂಗದ ಮೇಲೆ ಧರಿಸುವುದೇ ಧಾರಣಯೋಗವು, ಆ ಇಷ್ಟಲಿಂಗದ ಧ್ಯಾನವೇ ಧ್ಯಾನಯೋಗವೆನಿಸುವುದು. ಆ ಧ್ಯಾನದ ಅರಿವಿನಲ್ಲಿ ಮನವನ್ನು ಲಯಗೊಳಿಸುವುದೇ ಸಮಾಧಿಯೋಗವಾಗುವುದು. ಎಂದರೆ - ಇಷ್ಟಲಿಂಗದ ಪೂಜೆಯೇ ಧಾರಣವು. ಪ್ರಾಣಲಿಂಗದ ಧ್ಯಾನವೇ ಧ್ಯಾನಯೋಗವು. ಭಾವಲಿಂಗದಲ್ಲಿ ಮನೋಲಯವಾಗಿ ತೃಪ್ತನಾಗುವುದೇ ಸಮಾಧಿಯು. ಹೀಗೆ ಈ ಮೂರು ಯೋಗಗಳ ವಿಚಾರವು ಶಿವಾಧವಶತಕದ ೫೦ ರಿಂದ ೫೫ ರ ವರೆಗಿರುವ ಪದ್ಯಗಳಲ್ಲಿ ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿರುವುದು. ಮತ್ತು ಇಷ್ಟ ಪ್ರಾಣ-ಭಾವಲಿಂಗಗಳು ಕ್ರಮವಾಗಿ ದೃಷ್ಟಿ-ಮನೋ-ಭಾವ ಇವುಗಳಿಂದ ಗ್ರಹಿಸತಕ್ಕವಾಗಿರುವವು. ಧಾರಣಯೋಗಕ್ಕೆ ಸಂಬಂಧಿಸಿದ ಇಷ್ಟಲಿಂಗದಲ್ಲಿ ರೆಪ್ಪೆ ಹಾಕದಂತೆ ದೃಷ್ಟಿಯನ್ನು ನಿಕ್ಷೇಪಿಸಿ, ತಲ್ಲಿಂಗ ನಿರೀಕ್ಷಣೆಯನ್ನು ಮಾಡುತ್ತ ಧ್ಯಾನಿಸುವ ಅಭ್ಯಾಸವನ್ನು ಮಾಡಿದರೆ, ದೃಷ್ಟಿಯಂತೆ ಮನೋಭಾವಗಳೂ ನಿಶ್ಚಲಗಳಾಗಿ, ಅವು ಮೂರೂ ಸುಲಭವಾಗಿ ಇಷ್ಟ-ಪ್ರಾಣ-ಭಾವಲಿಂಗಗಳನ್ನು ಗ್ರಹಿಸಿ, ಲಿಂಗಮಯವಾಗಿ ಪರಿಣಮಿಸುವವು. ಈ ವಿಷಯವು ಮಹಪ್ಪೈಪುರೀಶ್ವರಶತಕದ ಲಿಂಗದೊಳಿಟ್ಟ ದೃಷ್ಟಿಯೆಂಬ ೫೨ ನೆಯ ಪದ್ಯದಲ್ಲಿ ಸೊಗಸಾಗಿ ನಿರೂಪಿತವಾಗಿರುವುದು. ಚಾಮರಸನ ಪ್ರಭುಲಿಂಗಲೀಲೆಯ ಸಾಧಕಾಂಗಗತಿಯ ೫೧ ನೆಯದಾದ—

ಹೇಳುವೊಡೆ ಮನವೆಂಬ ಹಕ್ಕಿಗೆ
ಕಾಲುಗಳೆರೈ ತೊಳಲುತಿಹ ಕ
ಣ್ಣಾಲಿಗಳು ಓಟವದಕ ಪಕ್ಕಗಳೀಡೆ ಪಿಂಗಳದ

ಗಾಳಿಯಾಗಿಹುದಂತು ಕಾರಣ
ವಾಲಿಯೇ ಸಾಧನಕೆ ಸಾಧನ
ಮೂಲವನು ನಿಲಿಸುವನೆ ಭಕ್ತನು ಬಸವ ಕೇಳೆಂದ ॥

ಎಂಬ ಪದ್ಯದಲ್ಲಿ ಮನವೆಂಬುದು ಪಕ್ಷಿಯು, ಚಲಿಸುವ ಎರಡು ದೃಷ್ಟಿಗಳೇ ಆ ಪಕ್ಷಿಯ ಕಾಲುಗಳು; ಮೂಗಿನ ಎಡಬಲ ಭಾಗದ ರಂಧ್ರಗಳಲ್ಲಿ ಶ್ವಾಸೋಚ್ಛ್ವಾಸ ರೂಪವಾಗಿ ಚರಿಸುವ ಗಾಳಿಯೇ ಆ ಪಕ್ಷಿಯ ರೆಕ್ಕೆಗಳು. ಕಾಲುಗಳನ್ನು ಹಿಡಿದರೆ (ದೃಷ್ಟಿಯನ್ನು ನಿಲ್ಲಿಸಿದರೆ) ರೆಕ್ಕೆಯಾಡದೆ (ಉಸಿರು ಚಲಿಸದಿದ್ದು) ಮನವೆಂಬ ಪಕ್ಷಿಯು ವಶವಾಗುವುದು" ಎಂಬರ್ಥವನ್ನು ನಿರೂಪಿಸಿರುವುದೂ ಈ ದೃಷ್ಟಿಯೋಗದ ಪರವಾಗಿಯೇ ಇರುವುದು. ಈ ವಿಚಾರದಿಂದ ಲಿಂಗಾಂಗಯೋಗರೂಪವಾದ ಶಿವಯೋಗದಲ್ಲಿ ಇಷ್ಟಲಿಂಗದ ಮತ್ತು ಇಷ್ಟಲಿಂಗದಲ್ಲಿ ದೃಷ್ಟಿಯನ್ನು ನಿಲ್ಲಿಸುವುದರ ಅವಶ್ಯಕತೆ ಬಹುಮುಖ್ಯವೆಂಬುದನ್ನು ಲಕ್ಷ್ಯದಲ್ಲಿಡಬೇಕು.*

(೭) **ಶತಕತ್ರಯದ ಪ್ರಮಾಣ ಗ್ರಂಥ ವಿಚಾರ :** ವೀರಶೈವತತ್ತ್ವ ಪ್ರತಿಪಾದನೆಗೆ ವೇದಾಗಮಾದಿ ಸಂಸ್ಕೃತ ಗ್ರಂಥಗಳೇ ಪ್ರಮಾಣವೆಂದು ಕೆಲವರು ವಾದಿಸುವರು. ಮತ್ತೆ ಕೆಲವರು ಶರಣರ ವಚನವಾಙ್ಮಯವೇ ಮುಖ್ಯ ಪ್ರಮಾಣ ವೆಂದು ಹೇಳುತ್ತಿರುವರು. ಮಾಯಿದೇವರು ಮಾತ್ರ ವೇದಾಗಮಾದಿಗಳೂ ಬಸವಾದಿಪ್ರಮಥರ ವಚನಗಳೂ ತಮ್ಮ ಗ್ರಂಥಕ್ಕೆ ಪ್ರಮಾಣವೆಂದು ಶಿವಾನುಭವಶತಕದ ೪೧-೪೨ ನೆಯ ಪದ್ಯಗಳಲ್ಲಿ ಹೇಳಿರುವರು. ಹೀಗೆ ಹೇಳುವುದೇ ವೀರಶೈವ ತತ್ತ್ವಜ್ಞರಿಗೆ ಸಮ್ಮತವೆನಿಸುವುದಲ್ಲವೆ ?

(೮) **ಶತಕತ್ರಯದ ಷಟ್‌ಸ್ಥಲಮಾರ್ಗದ ವಿಚಾರ :** ಮಾಯಿ-ದೇವರು ತಾವು ಹೇಳುವ ಷಟ್‌ಸ್ಥಲಮಾರ್ಗಾಚರಣೆಯು ಬಸವಾದಿಪುರಾತನರು ಆಚರಿಸಿದ ಆಚರಣೆಯೇ ಆಗಿರುವುದೆಂದು ತೋರಿಸುವುದಕ್ಕಾಗಿ ಶಿವಾನುಭವಶತಕದ ೬ನೆಯ ಪದ್ಯದಲ್ಲಿ ಬಸವಪುರಾತನರು ಆಚರಿಸಿದ ಷಟ್‌ಸ್ಥಲಮಾರ್ಗವಿಡಿದು ನಡೆಯುವ ಮಹಾನುಭಾವರನ್ನು ನೆನೆವುದೇ ಘನಮುಕ್ತಿಪದವೆಂದು ತಮ್ಮ ಭಕ್ತಿಭಾವವನ್ನು ಪ್ರಕಟಿಸಿರುವರು. ನಿಜವಾಗಿಯೂ ಷಟ್‌ಸ್ಥಲಾಚರಣೆಯು ಬಸವಾದಿಪ್ರಮಥರ ಕಾಲದಲ್ಲಿ ಪ್ರಗತಿಯನ್ನು ಹೊಂದಿದ್ದಿತೆಂಬುದು ವಚನವಾಙ್ಮಯದಲ್ಲಿರುವ ಸ್ಥಲ

* ಶಿವಯೋಗದ ಹೆಚ್ಚಿನ ವಿಚಾರವನ್ನು ತಿಳಿಯಲಪೇಕ್ಷಿಸುವವರು ಅ. ಭಾ. ಶಿವಾನುಭವ ಸಂಸ್ಥೆಯಿಂದ ಪ್ರಕಟವಾದ 'ಶಿವಯೋಗ'ವೆಂಬ ಗ್ರಂಥವನ್ನು ಓದಿಕೊಳ್ಳಬಹುದು.

ಸಿದ್ಧಾಂತದ ವಿಚಾರದಿಂದ ಗೊತ್ತಾಗುತ್ತಿರುವುದು. ಷಟ್‌ಸ್ಥಲತತ್ತ್ವ ವಿಮರ್ಶೆಯಲ್ಲಿ ಶಿವಶರಣರ ಕಾಲವು ವಿಚಾರಕ್ರಾಂತಿಯ ಯುಗವಾಗಿ ಪರಿಣಮಿಸಿರುವುದು. ಷಟ್‌ಸ್ಥಲಸಿದ್ಧಾಂತವು ವೇದಾಗಮಾದಿಗಳಲ್ಲಿ ಅಂಕುರಿಸಿ, ಪಲ್ಲವಿಸಿ, ಪುಷ್ಪಿತವಾಗಿದ್ದರೂ ಆ ಸಿದ್ಧಾಂತದ ಮಧುರ ಫಲವು ವಚನವಾಙ್ಮಯದಲ್ಲಿಯೇ ಫಲಿತವಾಗಿರುವುದೆಂಬುದು ಸ್ಥಲತತ್ತ್ವಜ್ಞರಿಗೆ ಒಪ್ಪಿಗೆಯಾಗಿರುವುದು ಮಾಯಿದೇವರಿಗೂ ಈ ಬಗೆಯ ಒಪ್ಪಿಗೆಯಿದ್ದಿತೆಂಬದು ನಿಸ್ಸಂದೇಹ.

(೯) **ಇತರ ವಿಷಯಗಳು :** ಷಟ್‌ಸ್ಥಲಕ್ಕೆ ಸಂಬಂಧಿಸಿದ ಭಕ್ತಿ, ಜ್ಞಾನ, ಕ್ರಿಯೆ, ವೈರಾಗ್ಯ, ದ್ವೈತಾದ್ವೈತ, ಶಿವಯೋಗ – ಇವುಗಳ ವಿಚಾರವಲ್ಲದೆ, ಲಿಂಗಧಾರಣಮಹತ್ತ್ವ, ಲಿಂಗವು ಯಾವಾಗಲೂ ಅಂಗದ ಮೇಲಿರುವುದರ ಪ್ರಯೋಜನ, ಲಿಂಗಧಾರಣದಿಂದಾಗುವ ಸದಾಶುಚಿತ್ವ, ಲಿಂಗಪೂಜಾಸಾಮಗ್ರಿಗಳನ್ನು ಪಡೆವುದರಲ್ಲಿರುವ ದೃಷ್ಟಿಭೇದ, ಲಿಂಗಾಂಗಸಂಯೋಗಪರವಾದ 'ತತ್ತ್ವಮಸಿ' ಎಂಬ ವಾಕ್ಯದ ವಿಚಾರ, ದಾನದ ವಿಚಾರ, ಯಾಚನೆಯ ವಿಚಾರ, ತೀರ್ಥಕ್ಷೇತ್ರಗಳ ವಿಚಾರ ಇವೇ ಮೊದಲಾದ ಮಹತ್ವದ ವಿಷಯಗಳು ಶತಕತ್ರಯದಲ್ಲಿ ಪ್ರತಿಪಾದಿಸಲ್ಪಟ್ಟಿರುವವು. ಇವುಗಳಲ್ಲಿ ತೀರ್ಥಕ್ಷೇತ್ರ ಮೊದಲಾದ ಕೆಲವು ವಿಷಯಗಳ ವಿಚಾರವು ಭಾವಾರ್ಥಬೋಧಿನಿಯಲ್ಲಿ ಚರ್ಚಿಸಲ್ಪಟ್ಟಿರುವುದು. ಹೀಗೆ ಶತಕತ್ರಯವು ಷಟ್‌ಸ್ಥಲಾಚರಣೆಗೆ ಸಂಬಂಧಿಸಿದ ಅನೇಕ ವಿಷಯಗಳನ್ನೊಳಗೊಂಡು ವೀರಶೈವಧರ್ಮದ ಆದರ್ಶಗ್ರಂಥವೆನಿಸಿರುವುದು.

## ಗ್ರಂಥ ಕರ್ತೃಗಳು

ಶತಕತ್ರಯದ ಕರ್ತೃಗಳಾದ ಮೊಗ್ಗೆಯ ಮಾಯಿದೇವರಿಗೆ ಮಲಪ್ರಹಾರೀ ನದಿಯ ತೀರದಲ್ಲಿರುವ ಐಪುರ ಕ್ಷೇತ್ರವು ( ಐವಳ್ಳಿ ) ಜನ್ಮಸ್ಥಾನವಾಗಿದ್ದಿತು. ಅವರ ವಂಶಾದಿ ವಿಷಯವು ಶಿವಾನುಭವಸೂತ್ರದ ಪ್ರಥಮಾಧಿಕರಣದಲ್ಲಿ ವಿಸ್ತಾರವಾಗಿ ನಿರೂಪಿತವಾಗಿರುವುದು. ವಿರೂಪಾಕ್ಷ ಪಂಡಿತನ (೧೫೮೪) ಚೆನ್ನಬಸವಪುರಾಣದಲ್ಲಿರುವ :

ಎಲೆ ರಾಮ ಕೇಳಿನ್ನು ಸಕಲಾಗಮಂಗಳಿಗೆ
ನೆಲೆಯೆನಿಸಿ ಪ್ರೌಢನಿಂ ಪೂಜೆಯಂಕೊಂಡು ಷಟ್
ಸ್ಥಲಮಾರ್ಗಮಂ ಸಕಲ ಶಿವಭಕ್ತಸಂತತಿಗೆ ಕರತಲಾಮಲಕವಾಗಿ

ತಿಳಿವೊಲನುಭವಸೂತ್ರವಾದಿ ಶಾಸ್ತ್ರಂಗಳಂ
ಗೆಲವಿನಿಂಪೇಳ್ದು ನಿಜಶಿವಸಮಾಧಿಯಿಂಲಿ ವಿಗೆ
ನಲವಿನಿಂದಲ್ಲಿ ಮೊಗ್ಗೆಯ ಮಾಯಿದೇವಪ್ರಭುವರನಿರದೆಮುಕ್ತನಹನು

ಎಂಬ ಪದ್ಯದಿಂದ ಮೊಗ್ಗೆಯ ಮಾಯಿದೇವರು ವಿಜಯನಗರದ ರಾಜನಾದ ಪ್ರೌಢರಾಯನ ಕಾಲದಲ್ಲಿದ್ದಂತೆ ತಿಳಿದಿರುವುದರಿಂದ ಇವರ ಕಾಲವು ಸುಮಾರು ಕ್ರಿ. ಶ. ೧೪೩೦ ಆಗಬಹುದೆಂದು ಕರ್ನಾಟಕ ಕವಿಚರಿತ್ರಕಾರರು ಬರೆದಿರುವರು.

ಶಾಂತಲಿಂಗದೇಶಿಕನ (೧೬೭೨) ಭೈರವೇಶ್ವರಕಾವ್ಯದ ಕಥಾಸೂತ್ರ ರತ್ನಾಕರ ದಿಂದಲೂ, ಸಿದ್ಧನಂಜೇಶನ (೧೬೫೦) ಪಾಲ್ಕುರಿಕೆ ಸೋಮೇಶ್ವರಪುರಾಣದಿಂದಲೂ ಮೊಗ್ಗೆಯ ಮಾಯಿದೇವರು ವೀರಶೈವರಿಗೆ ನರಕವಿಲ್ಲೆಂದು ವಿದ್ಯಾನಗರದಲ್ಲಿ ನೆಳಲಿಲ್ಲದ ಜಯಸ್ತಂಭವನ್ನು ನಿಲ್ಲಿಸಿದರೆಂದು ತಿಳಿದು ಬರುವುದರಿಂದ ಅವರು ವೀರಶೈವ ನಿಜಾಚರಣದಿಂದುಂಟಾದ ಮಹಿಮೆಯನ್ನು ಚೆನ್ನಾಗಿ ಸಂಪಾದಿಸಿದ್ದರೆಂದು ವ್ಯಕ್ತವಾಗುವುದು. ಅವರಿಗೆ ಇದ್ದ “ಕುಮತವಿಭೇದೀ ಷಟ್‌ಸ್ಥಲ ಬ್ರಹ್ಮವಾದಿ” ಎಂಬ ಬಿರುದೇ ಅವರ ಅದ್ವಿತೀಯ ಪಾಂಡಿತ್ಯಕ್ಕೆ ನಿದರ್ಶನವಾಗಿರುವುದು. ಅವರು ಸಂಸ್ಕೃತದಲ್ಲಿ ವಿಶೇಷಾರ್ಥಪ್ರಕಾಶಿಕೆಯೆಂಬ ಉತ್ತರ ಭಾಗದಿಂದ ಕೂಡಿದ ಶಿವಾನು-ಭವಸೂತ್ರವೆಂಬ ಷಟ್‌ಸ್ಥಲ ಗ್ರಂಥವನ್ನು ಬರೆದಿರುವರು. ಕನ್ನಡದಲ್ಲಿ ಪ್ರಭುಗೀತೆ, ಏಕೋತ್ತರಷಟ್‌ಸ್ಥಲಷಟ್ಪದಿ, ಷಟ್‌ಸ್ಥಲಗದ್ಯ, ಮೊಗ್ಗೆಯ ಮಾಯಿದೇವರ ವಚನ, ಶತಕತ್ರಯವೆಂಬ ಗ್ರಂಥಗಳನ್ನು ಬರೆದಿರುವರು. (ಗ್ರಂಥ ಕರ್ತೃಗಳ ವಿಷಯವು ವಿಶೇಷಾರ್ಥಪ್ರಕಾಶಿಕೆಯ ಪ್ರಸ್ತಾವನೆಯಿಂದ ಉದ್ಧೃತವಾಗಿದೆ).

## ಶತಕತ್ರಯ ಟೀಕಾಕಾರರು

ಶತಕತ್ರಯಕ್ಕೆ ಟೀಕೆಯನ್ನು ಬರೆದವರು ತೋಂಟದ ಸಿದ್ಧಲಿಂಗದೇವರು. ಇವರಿಗೆ ತೋಂಟದಾರ್ಯ, ತೋಂಟದ ಸಿದ್ಧಲಿಂಗದೇಶಿಕ, ತೋಂಟದ ಸಿದ್ಧಲಿಂಗ ಶಿವಯೋಗೀಂದ್ರ ಎಂಬ ಹೆಸರುಗಳೂ ರೂಢವಾಗಿದ್ದಂತೆ ಇವರು ರಚಿಸಿರುವ ಗ್ರಂಥ ಗಳಿಂದ ತಿಳಿದು ಬರುತ್ತದೆ.

**ಗ್ರಂಥಗಳು :** ತೋಂಟದ ಸಿದ್ಧಲಿಂಗದೇವರು ಕವಿಗಳೂ ಇರುವರು. ಇವರು ಶ್ರೀ ಸಿದ್ಧೇಶ್ವರಪುರಾಣ, ಚಿದಾನಂದಸಿಂಧು ಇವುಗಳನ್ನು ರಚಿಸಿದ ಮೇಲೆ ಪಾಲ್ಕುರಿಕೆ ಸೋಮೇಶ್ವರ ಪುರಾಣವನ್ನು ರಚಿಸಿರುವರು. ಈ ವಿಷಯವು ಸೋಮೇಶ್ವರ ಪುರಾಣದ ೧ ನೆಯ ಸಂಧಿಯ ೧೩ ನೆಯ ಪದ್ಯದಿಂದ ಗೊತ್ತಾಗು-

ತ್ತದೆ. ಇವರು ಸಿದ್ಧಲಿಂಗೇಶ್ವರಶತಕ, ಕರ್ಣಾಟಕ ಶಬ್ದಮಂಜರಿ ಮೊದಲಾದ ಕೆಲವು ಸಣ್ಣ ಗ್ರಂಥಗಳನ್ನೂ ರಚಿಸಿರುವರು. ಶತಕತ್ರಯಕ್ಕೆ ಟೀಕೆಯನ್ನು ಬರೆವಂತೆ ಮನೋವಿಜಯ, ಪಂಚಪ್ರಕಾರ ಗದ್ಯ ಮೊದಲಾದ ಗ್ರಂಥಗಳಿಗೆ ಕನ್ನಡ ಟೀಕೆಯನ್ನೂ ಬರೆದಿರುವರು.

ಕಾಲ : ಬಿಜ್ಜವರವೆಂಬ ಪಟ್ಟಣಕ್ಕೆ ತೋಂಟದ ಸಿದ್ಧಲಿಂಗರಾಜನೆಂಬುವನು ಅರಸನಾಗಿದ್ದನು. ಅವನಿಗೆ ಚೆನ್ನನಂಜೇಶನೆಂಬುವರು ಗುರುಗಳು. ಅವರ ಶಿಷ್ಯರೂ ನಂದೀಪುರದ ಅಧಿಪತಿಗಳೂ ಆದ ಪರ್ವತೇಶ ಸ್ವಾಮಿಗಳಿಂದ ಈ ತೋಂಟದಾರ್ಯರಿಗೆ ಶಿವದೀಕ್ಷಾ ಸಂಸ್ಕಾರವಾಗಿದ್ದಿತು. ಆ ಮೇಲೆ ಶ್ರೀ ಸ್ವತಂತ್ರ ಸಿದ್ಧಲಿಂಗಯತಿಯ ಪಟ್ಟಶಿಷ್ಯರಾದ ಶ್ರೀ ಬೋಳಬಸವೇಶ್ವರ ಸ್ವಾಮಿಗಳ ಅನಂತರದಲ್ಲಿ ಪಟ್ಟಕ್ಕೆ ಬಂದ ಶ್ರೀ ಗೂಳೂರ ಸಿದ್ಧವೀರೇಶ್ವರ ಸ್ವಾಮಿಗಳಿಂದ ವಿರಕ್ತಾಶ್ರಮವನ್ನು ( ಜಂಗಮ ಸಂಸ್ಕಾರವನ್ನು ) ಇವರು ಪಡೆದರು. ಈ ವಿಷಯವು ಇವರ ಗ್ರಂಥಗಳಿಂದಲೇ ತಿಳಿದು ಬರುವುದರಿಂದ ಇವರ ಕಾಲವು ಸುಮಾರು (೧೫೬೦) ಆಗಬಹುದು. ಇದನ್ನೇ ಕನ್ನಡಕವಿ ಚರಿತ್ರಕಾರರೂ ಹೇಳಿರುವರು. ಶ್ರೀ ತೋಂಟದ ಸಿದ್ಧಲಿಂಗಯತಿಗಳ ಕಾಲವು ಸುಮಾರು ೧೪೭೦. ಆದರೆ ಅವರ ತರುವಾಯ ಬೋಳಬಸವಸ್ವಾಮಿಗಳಿಗೂ ಗೂಳೂರ ಸಿದ್ಧವೀರೇಶಸ್ವಾಮಿಗಳಿಗೂ ಸುಮಾರು ೯೦ ವರ್ಷಗಳಾದರೂ ಗತಿಸಿರಬಹುದೆಂದು ಭಾವಿಸಿ, ಗೂಳೂರ ಸಿದ್ಧವೀರಸ್ವಾಮಿಗಳ ಶಿಷ್ಯರಾದ ತೋಂಟದಾರ್ಯರ ಕಾಲವು ೧೫೬೦ ಆಗಬಹುದೆಂದು ನಿರ್ಧರಿಸಲಾಗಿದೆ. ಕೆಲವರು ಸುಮಾರು ೧೫೫೦ ಎಂದೂ, ಕೆಲವರು ೧೬ ನೆಯ ಶತಮಾನವೆಂದೂ ಹೇಳುವರು. ಇದರಲ್ಲಿ ೧೫೫೦ ರಿಂದ ೧೫೬೦ ರ ಕಾಲವೇ ಸಮುಚಿತವೆಂದು ಭಾವಿಸಲಾಗಿದೆ.

## ಈ ಟೀಕಾಕಾರರ ವಿಷಯದಲ್ಲಾಗಿರುವ ತೊಡಕು

ಈ ಟೀಕಾಕಾರನಾದ ತೋಂಟದಾರ್ಯನಿಗೆ ಮರಿತೋಂಟದಾರ್ಯನೆಂದು ಹೆಸರು. ಈತನು ಮೇಲೆ ಹೇಳಿದ ಗ್ರಂಥಗಳಲ್ಲದೆ ಸಂಸ್ಕೃತದಲ್ಲಿ ವೀರಶೈವಾನಂದ ಚಂದ್ರಿಕೆ, ವೀರಶೈವ ಪ್ರದೀಪಿಕೆ, ಕೈವಲ್ಯಸಾರ, ಷಟ್‌ಸ್ಥಲದೀಪಿಕೆ, ಸರ್ವಾಗಮ ಸಾರಸಂಗ್ರಹ ಮೊದಲಾದ ಗ್ರಂಥಗಳನ್ನು ರಚಿಸಿರುವನೆಂತಲೂ, ಮತ್ತು ಈತನೇ ವೀರಶೈವಸಿದ್ಧಾಂತಶಿಖಾಮಣಿಗೆ ತತ್ತ್ವಪ್ರದೀಪಿಕೆಯೆಂಬ ಸಂಸ್ಕೃತವ್ಯಾಖ್ಯಾನವನ್ನು ಬರೆದಿರುವನೆಂತಲೂ ಸಾಮಾನ್ಯವಾಗಿ ಅನೇಕರ ಗ್ರಹಿಕೆಯಾಗಿರುವುದು.

ಈ ಗ್ರಹಿಕೆಗೆ ಮೊದಲನೆಯ ಕಾರಣವೆಂದರೆ ೧೮೯೫-೨-೧ ರಲ್ಲಿ ಮೈಸೂರು ನೈ. ವೀರಸಂಗಪ್ಪನವರ ಶಂಕರವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿತವಾದ ಸಿದ್ಧೇಶ್ವರಪುರಾಣವು. ಈ ಪುರಾಣದ ಮುಖಪತ್ರದಲ್ಲಿ - ಶ್ರೀಮದೇಕೋತ್ತರ ಶತಸ್ಥಲ ಪ್ರತಿಪಾದಕ ವೀರಶೈವಸಿದ್ಧಾಂತಕ್ಷೀರಪಾರಾವಾರಪಾರೀಣರಾದ ಮರಿ ತೋಂಟದಾರ್ಯರಿಂದ ರಚಿಸಲ್ಪಟ್ಟ ಶ್ರೀ ಸಿದ್ಧೇಶ್ವರ ಪುರಾಣವು. ಎಂದು ಮುದ್ರಿಸಲ್ಪಟ್ಟಿರುವುದು. ಮತ್ತು ಈ ಪುರಾಣದ ಪೀಠಿಕೆಯಲ್ಲಿ ಮರಿತೋಂಟದಾರ್ಯರು ಕನ್ನಡದಲ್ಲಿ ಸಿದ್ಧೇಶ್ವರ ಪುರಾಣಾದಿ ಗ್ರಂಥಗಳನ್ನಲ್ಲದೆ, ಸಂಸ್ಕೃತದಲ್ಲಿ ವೀರಶೈವಾನಂದಚಂದ್ರಿಕೆಯೇ ಮೊದಲಾದ ಗ್ರಂಥಗಳನ್ನೂ ಬರೆದಿರುವರೆಂದು ಉಕ್ತವಾಗಿದೆ. ಈ ಪುರಾಣವನ್ನು ತಿದ್ದಿದವರು ಲಿಂಗೈಕ್ಯರಾದ ಪಿ. ಆರ್. ಕರಿಬಸವಶಾಸ್ತ್ರಿಗಳು. ಇವರು ಅನೇಕ ವೀರಶೈವಗ್ರಂಥ ಪ್ರಕಟನೆಗಳನ್ನು ಮಾಡಿ, ಪ್ರಮಾಣ ಪಂಡಿತರೆಂದು ಪ್ರಸಿದ್ಧಿಯನ್ನು ಪಡೆದವರು. ಇವರಿಂದ ಸರಿಪಡಿಸಿ ಮುದ್ರಿತವಾದ ಸಿದ್ಧೇಶ್ವರ ಪುರಾಣದ ಮುಖಪತ್ರದಲ್ಲಿ ಮರಿತೋಂಟದಾರ್ಯರಿಂದ ಈ ಪುರಾಣವು ರಚಿತವಾದು ದೆಂದಿರುವುದರಿಂದ ಅನೇಕರು ಸಿದ್ಧೇಶ್ವರಪುರಾಣ ಮೊದಲಾದ ಕನ್ನಡ ಗ್ರಂಥಗಳನ್ನೂ ಶತಕತ್ರಯಾದಿಗಳ ಟೀಕೆಯನ್ನೂ ಬರೆದವರು ಮರಿತೋಂಟದಾರ್ಯರೆಂದೇ ಕರೆ ಯುವ ವಾಡಿಕೆಯಾಗಿರುವಂತೆ ತೋರುತ್ತದೆ

ಮರಿತೋಂಟದಾರ್ಯರು - ಶ್ರೀ ಮೂರುಸಾವಿರಮಠದ ಗ್ರಂಥಮಾಲೆಯ ೮ ನೆಯ ಪುಷ್ಪವಾದ ಮರಿತೋಂಟದಾರ್ಯರ ವೀರಶೈವಾನಂದಚಂದ್ರಿಕೆಯ ಭೂಮಿಕೆಯಲ್ಲಿ ಪಂಡಿತ ಸೋಮಶೇಖರ ಶಾಸ್ತ್ರಿಗಳು ಹೀಗೆ ಹೇಳಿರುವರು - ಮರಿ ತೋಂಟದಾರ್ಯರು, ಶ್ರೀ ಸಿದ್ಧೇಶ್ವರ ಶಿವಯೋಗಿಗಳ ಶಿಷ್ಯಪರಂಪರೆಯಲ್ಲಿ ಪ್ರಸಿದ್ಧ ರಾದ ಕೌದಿ ಮಹಾಂತಸ್ವಾಮಿಗಳಿಂದ ಅನುಗ್ರಹೀತರಾಗಿ ಅವರ ಅಪ್ಪಣೆಯಂತೆ ವೀರಶೈವಾನಂದಚಂದ್ರಿಕೆಯನ್ನು ಬರೆದಿರುವರು. ಮರಿತೋಂಟದಾರ್ಯರು ಕೆಳದಿ ಬೂದಿ ಬಸವಪ್ಪನಾಯಕನ ಕಾಲದಲ್ಲಿ ಆತನ ಪಂಡಿತಸಭೆಯಲ್ಲಿದ್ದವರು. ಮತ್ತು ಇವರ ಜೀವಿತದ ಬಹುಭಾಗವು ಕೆಳದಿಯ ರಾಜಧಾನಿಯಲ್ಲಿಯೇ ಗತಿಸಿರುವುದು. ಮರಿತೋಂಟದಾರ್ಯರು ರಾಜಾಸ್ಥಾನದಲ್ಲಿದ್ದ ಮೌನಪ್ಪ ಪಂಡಿತರೇ ಮೊದಲಾದ ವಿದ್ವಾಂಸರ ಸಹಾಯದಿಂದ ವೀರಶೈವಾನಂದಚಂದ್ರಿಕೆಯನ್ನು ರಚಿಸಿದರು. ಇದು ಬೂದಿ ಬಸವಪ್ಪನಾಯಕನಿಗೆ ಬೋಧಿಸುವ ಗ್ರಂಥವಾಗಿದೆ. ಈ ಗ್ರಂಥ ಸಮಾಪ್ತಿ ಯಾದುದು ಶಾಲಿವಾಹನ ಶಕ ೧೬೬೬ ನೆಯ ವರ್ಷದ (ಕ್ರಿ ಶ. ೧೭೪೪) ರುಧಿರೋ ದ್ಗಾರಿ ಸಂ. ಮಾರ್ಗಶಿರ ಶು ೫ ಗುರುವಾರ. ಆದ್ದರಿಂದ ಮರಿತೋಂಟದಾರ್ಯರು ಕ್ರಿಸ್ತಶಕದ ೧೮ ನೆಯ ಶತಮಾನದ ಮಧ್ಯಭಾಗದಲ್ಲಿದ್ದರು. ಎಂದು ಹೇಳಿರುವರು.

ಹೀಗೆ ಹೇಳಿದ ವಿಷಯಕ್ಕೆ ಪ್ರಮಾಣವಾಗಿ ಭೂಮಿಕೆಯಲ್ಲಿ ಪಂಡಿತ ಸೋಮಶೇಖರ ಶಾಸ್ತ್ರಿಗಳು ವೀರಶೈವಾನಂದಚಂದ್ರಿಕೆಯ ಕ್ರಿಯಾಕಾಂಡದಲ್ಲಿರುವ ಕೆಲವು ಶ್ಲೋಕಗಳನ್ನು ಮತ್ತು ಕೆಳದಿ ನೃಪವಿಜಯದ ಕೆಲವು ಪದ್ಯಗಳನ್ನು ಉದಾಹರಿಸಿರುವರು.

ಇನ್ನು ಪಂಡಿತ ಬಸವಪ್ಪ ವೀರಪ್ಪ ಕೋಟಿ ಇವರಿಂದ ಶೋಧಿಸಿ ಬರೆಯಿಸಲ್ಪಟ್ಟ "ನಿರಂಜನ ಜಂಗಮ ವಂಶದರ್ಪಣ"ದಲ್ಲಿ - ಶ್ರೀ ಕೌದಿ ಮಹಾಂತಸ್ವಾಮಿಗಳು, ಮೂಲಪುರುಷರಾದ ತೋಂಟದ ಸಿದ್ಧಲಿಂಗ ಸ್ವಾಮಿಗಳಿಂದ ೮ ನೆಯ ನಿರಂಜನ ಪಟ್ಟಾಧಿಕಾರಿಗಳೆಂದು ಬರೆಯಲ್ಪಟ್ಟಿದೆ. ಮತ್ತು ಆ ಗ್ರಂಥದಲ್ಲಿ ಮರಿತೋಂಟದಾರ್ಯರಿಗೆ ಕೌದಿ ಮಹಾಂತಸ್ವಾಮಿಗಳ ಮುಂದಿನ ಪಟ್ಟಾಧಿಕಾರಿಗಳಾದ ಶ್ರೀ ಅರ್ಧನಾರೀಶ್ವರ ಸ್ವಾಮಿಗಳು ಷಟ್‌ಸ್ಥಲೋಪದೇಶವನ್ನು ಮಾಡಿ, ವೀರಶೈವಾನಂದಚಂದ್ರಿಕೆಯನ್ನು ಬರೆಯಲು ಅಪ್ಪಣೆ ಮಾಡಿದಂತೆ ಉಕ್ತವಾಗಿದೆ.

ವೀರಶೈವಾನಂದ ಚಂದ್ರಿಕೆಯ ಭೂಮಿಕೆ, ಮತ್ತು ನಿರಂಜನಜಂಗಮವಂಶ-ದರ್ಪಣ, ಇವುಗಳೆರಡರಲ್ಲಿರುವ ವಿಷಯವನ್ನು ಶೋಧಿಸಿ ನೋಡಲಾಗಿ ತಿಳಿದು ಬರುವುದೇನಂದರೆ— ಮರಿತೋಂಟದಾರ್ಯರು, ಕೌದಿ ಮಹಾಂತಸ್ವಾಮಿಗಳಿಂದ ಇಲ್ಲವೆ ಅರ್ಧನಾರೀಶ್ವರ ಸ್ವಾಮಿಗಳಿಂದ ಅನುಗೃಹೀತರಾಗಿ, ಅವರ ಅಪ್ಪಣೆಯಂತೆ ವೀರಶೈವಾನಂದ ಚಂದ್ರಿಕೆಯನ್ನು ಬರೆದು ಕ್ರಿ ಶ. ೧೭೪೪ ರಲ್ಲಿ ಮುಗಿಸಿರುವರು. ಈ ಕಾಲವು ವೀರಶೈವಾನಂದ ಚಂದ್ರಿಕೆಯಲ್ಲಿಯೇ ಉಕ್ತವಾಗಿದೆ. ಆದ್ದರಿಂದ ಮರಿತೋಂಟದಾರ್ಯರು ೧೮ನೆಯ ಶತಮಾನದಲ್ಲಿದ್ದರೆಂಬುದು ನಿರ್ವಿವಾದವು. ಈ ವಿಚಾರದಿಂದ ವಿರಕ್ತ ತೋಂಟದಾರ್ಯರಿಗಿಂತಲೂ ಮರಿತೋಂಟದಾರ್ಯರು ಬೇರೆಯವರೆಂಬುದು ಸ್ಫುಟವಾಗುವುದು. ಮತ್ತು ಕನ್ನಡ ಕವಿಚರಿತ್ರಕಾರರು ವಿರಕ್ತ ತೋಂಟದಾರ್ಯನ ಗ್ರಂಥಗಳನ್ನು ಹೇಳುವಾಗ ವೀರಶೈವಾನಂದ ಚಂದ್ರಿಕಾದಿ ಸಂಸ್ಕೃತ ಗ್ರಂಥಗಳ ಉಲ್ಲೇಖವನ್ನು ಮಾಡಿಲ್ಲ. ಇದರಂತೆ ಎನ್.ಆರ್. ಕರಿಬಸವ ಶಾಸ್ತ್ರಿಗಳು ಪಾಲ್ಕುರಿಕೆ ಸೋಮೇಶ್ವರ ಪುರಾಣದ ಪೀಠಿಕೆಯಲ್ಲಾಗಲಿ, ಕನ್ನಡ ಟೀಕಾಸಹಿತವಾದ ಶತಕತ್ರಯದಲ್ಲಾಗಲಿ ಕವಿಯ ಹೆಸರನ್ನು ಮರಿತೋಂಟ-ದಾರ್ಯನೆಂದು ಹೇಳದೆ, ತೋಂಟದ ಸಿದ್ಧಲಿಂಗ ಶಿವಯೋಗಿಯೆಂದೇ ಹೇಳಿರುವರು. ಮತ್ತು ಆತನ ಸಿದ್ಧೇಶ್ವರ ಪುರಾಣಾದಿ ಕನ್ನಡ ಗ್ರಂಥಗಳನ್ನು ಮಾತ್ರ ಹೇಳಿ, ಸಂಸ್ಕೃತ ಗ್ರಂಥಗಳನ್ನು ಬರೆದಿರುವನೆಂಬುದನ್ನು ಹೇಳಿಲ್ಲ. ಆದುದರಿಂದ ೧೬ನೆಯ ಶತಮಾನದಲ್ಲಿದ್ದು, ಶ್ರೀ ಸಿದ್ಧಲಿಂಗ ಯತಿಗಳ ಶಿಷ್ಯರಾದ, ಬೋಳಬಸವಸ್ವಾಮಿಗಳ ಶಿಷ್ಯರಾದ ಗೂಳೂರು ಸಿದ್ಧವೀರಸ್ವಾಮಿಗಳಿಂದ ಅನುಗೃಹೀತರಾದ ವಿರಕ್ತ ತೋಂಟದಾರ್ಯರೇ ಶತಕತ್ರಯ ಟೀಕೆಯನ್ನು ಬರೆದವರು. ೧೮ ನೆಯ ಶತಮಾನದಲ್ಲಿದ್ದ

ಶ್ರೀ ಸಿದ್ಧಲಿಂಗ ಯತಿಗಳಿಂದ ೮ ನೆಯ ಪಟ್ಟಾಧಿಕಾರಿಗಳಾದ ಕೌದಿ ಮಹಾಂತ ಸ್ವಾಮಿಗಳಿಂದ ಅಥವಾ ಶ್ರೀ ಅರ್ಧನಾರೀಶ್ವರ ಸ್ವಾಮಿಗಳಿಂದ ಅನುಗೃಹೀತರಾಗಿ, ವೀರಶೈವಾನಂದಚಂದ್ರಿಕೆ, ವೀರಶೈವಪ್ರದೀಪಿಕೆ, ಸಿದ್ಧಾಂತಶಿಖಾಮಣಿಯ ತತ್ತ್ವಪ್ರದೀಪಿಕೆಯೆಂಬ ಸಂಸ್ಕೃತ ವ್ಯಾಖ್ಯೆ – ಇವೇ ಮೊದಲಾದ ಸಂಸ್ಕೃತ ಗ್ರಂಥಗಳನ್ನು ಬರೆದವರು ಮರಿತೋಂಟದಾರ್ಯರು. ಇವರು ವಿರಕ್ತ ತೋಂಟದಾರ್ಯರಿಗಿಂತಲೂ ಬೇರೆಯವರೆಂಬುದು ವಿದಿತವಾದುದು. ಇದರ ಹೆಚ್ಚಿನ ವಿಚಾರವನ್ನು ಸಂಶೋಧಕರ ಕಡೆಗೆ ಬಿಡಲಾಗಿದೆ. ( ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ತೋಂಟದಾರ್ಯ ಮಹಾಸಂಸ್ಥಾನಮಠ, ಗದಗ ಇಲ್ಲಿಂದ ಪ್ರಕಟವಾದ ಶ್ರೀ ಸಿದ್ಧೇಶ್ವರ ಪುರಾಣದಲ್ಲಿ ನಾನು ಬರೆದಿರುವ ಪ್ರಸ್ತಾವನೆಯಿಂದ ಶ್ರೀ ಮರಿತೋಂಟದಾರ್ಯರ ವಿಷಯವು ಉದ್ಧೃತವಾಗಿರುವುದು ).

## ಭಾವಾರ್ಥ ಬೋಧಿನಿ

ಶ್ರೀ ಮ. ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು, ಶ್ರೀಮುರುಘಾಮಠ ಮೃತ್ಯುಂಜಯ ನಗರ, ಧಾರವಾಡ ಇವರ ಮಂಗಳಾಶೀರ್ವಾದಪೂರ್ವಕವಾದ ಅಪ್ಪಣೆಯಂತೆ ಶ್ರೀ ಮಾಯಿದೇವರ ಶಿವಾನುಭವಸೂತ್ರ ವಿಶೇಷಾರ್ಥಪ್ರಕಾಶಿಕೆಗಳಿಗೆ ಬರೆದಂತೆ ಟೀಕಾಸಹಿತವಾದ ಶತಕತ್ರಯಕ್ಕೂ ಭಾವಾರ್ಥಬೋಧಿನಿಯೆಂಬ ವ್ಯಾಖ್ಯೆಯನ್ನು ಬರೆಯಲಾಗಿದೆ. ಈ ವ್ಯಾಖ್ಯೆಯಲ್ಲಿರುವ ಗುಣದೋಷ ವಿಮರ್ಶನವು ವೀರಶೈವ ತತ್ತ್ವಜ್ಞರದಾಗಿರುವುದೆಂದು ನಂಬಿರುವೆನು. ಮತ್ತು ೧೯೫೫ ನೆಯ ವರ್ಷದಲ್ಲಿ ಶ್ರೀ ತೋಂಟದ ಸಿದ್ಧಲಿಂಗದೇಶಿಕರ ಕರ್ನಾಟಕ ಟೀಕೆಯೊಡನೆಯೂ ನವೀನ ಟಿಪ್ಪಣಿಯೊಡನೆಯೂ ಪ್ರಕಟಿಸಲ್ಪಟ್ಟ ಶತಕತ್ರಯವು ನನ್ನ ವ್ಯಾಖ್ಯೆಗೆ ಮುಖ್ಯ ಸಹಾಯಕವಾಗಿದ್ದುದರಿಂದ ಆ ಶತಕತ್ರಯದ ಪ್ರಕಟನ ಮಾಡಿದ ಮೈಸೂರಿನ ಶ್ರೀ ಮೈ. ವಿರೂಪಾಕ್ಷಯ್ಯನವರಿಗೆ ನನ್ನ ಕೃತಜ್ಞತೆಯ ವಂದನೆಗಳನ್ನು ಅರ್ಪಿಸುವೆ.

ಬಳ್ಳಾರಿ

ಮೈ. ನಾಗೇಶಶಾಸ್ತ್ರಿ



# ಪರಿವಿಡಿ



ಶ್ರೀ. ನಿ. ಜ. ಮುರುಘರಾಜೇಂದ್ರ, ಪ್ರಸಾದನಿಲಯ,
ಅಖಿಲ ಭಾರತ ಶಿವಾನುಭವ ಸಂಸ್ಥೆ ಹಾಗೂ
ಬಾಲಲೀಲಾ ಗ್ರಂಥಮಾಲೆ
ಇವುಗಳ ಸ್ಥಾಪಕರಾದ

ಶ್ರೀ ಶ್ರೀ ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು

ಓಂ

ಶ್ರೀಗುರುಬಸವಲಿಂಗಾಯನಮಃ

## ಶ್ರೀ ಮೊಗ್ಗೆಯ ಮಾಯಿದೇವರ

## ಸಟೀಕ ಶತಕತ್ರಯದಲ್ಲಿ

# ಶಿವಾಧವಶತಕಂ

### ಉತ್ಪಲಮಾಲಾವೃತ್ತಂ

೧ ಶ್ರೀಗುರುವೇ ಮಹಾಗುರುವೆ ಶಾಂತಿಕಳಾಗುರುವೇ ಶಿವಾತ್ಮವಿ-
ದ್ಯಾಗುರುವೇ ಪುರಾಗುರುವೆ ವಿಶ್ವಜಗದ್ಗುರುವೇ ವಿಶುದ್ಧದೀ-
ಕ್ಷಾಗುರುವೇ ಸುಧೀಗುರುವೆ ಭಕ್ತಿಯಶೋಗುರುವೇ ಪ್ರಸಾದತೇ-
ಜೋಗುರುವೇ ಕೃಪಾಗುರುವೆ ಮದ್ಗುರುವೇ ಗುರುವೇ ಶಿವಾಧವಾ

### ಟೀಕಾಕಾರರ ಮಂಗಳಂ

ಕಂದ|| ಶ್ರೀಗುರು ನಿಜಬೋಧಾಮೃತ
ಸಾಗರನಪ್ರತಿಮನಖಿಳಕಾರಣರೂಪಂ
ಯೋಗಿಜನಸೇವಿತಂ ಮುದಿ
ಮಾಗಾರಂ ಪಾಲಿಸುಗೆ ನಿರಂಜನಲಿಂಗಂ

**ಗದ್ಯ :** ಶ್ರೀಮದನೇಕಲೋಕವಿಸ್ತಾರ ಕಾರಣರೂಪ ಸಚ್ಚಿದಾನಂದ ನಿತ್ಯ ಪರಿಪೂರ್ಣ ಸ್ವಭಾವಷಟ್ಸ್ಥಲಜ್ಞಾನಪ್ರಭಾ ಪುಂಜರಂಜಿತ ಮಂಗಳಾಂತರಂಗ ಕಾಂಡತ್ರಯಾತೀತಾಖಂಡಿತಾಮಳಭಕ್ತಿಕಾಂಡಮಂಡಿತೋದ್ದಂಡ ಶಿವಯೋಗಿಜನ

ಮನಸ್ಸರಸೀವಿಹರದ್ರಾಜಹಂಸ ಭಕ್ತಿಜ್ಞಾನವೈರಾಗ್ಯ ಮಾರ್ಗೋದ್ಧಾರ ಪರಮಚರಿತ ಶರಣ ಕರುಣಾಪಾಂಗ ನಿರಂಜನಲಿಂಗ ಕೃಪಾಮೃತಸಾರಪೂರನಿರ್ಮಲಾಂತಃಕರಣ ಶುದ್ಧಜ್ಞಾನ ಸತ್‌ಕ್ರಿಯಾಚಾರವರ್ತನಯುಕ್ತನಪ್ಪ ತೋಂಟದ ಸಿದ್ಧಲಿಂಗದೇಶಿಕಂ ನಾಂ ಮೊಗ್ಗೆಯ ಮಾಯಿದೇವ ಪ್ರಭುವಿನಿಂ ನಿರೂಪಿತಮಪ್ಪ ಪರಮ ವೀರಶೈವ-ಮಾರ್ಗ ಪ್ರತಿಪಾದಕಮಪ್ಪ ಶತಕತ್ರಯ ಮಹಾಪ್ರಬಂಧಮಂ ಸಮಸ್ತಶಿವಗಣಂಗಳ-ರಿದಾಚರಿಸಿ ನಿತ್ಯಮುಕ್ತರಾಗಲೆಂದು ಶುದ್ಧಶಬ್ದಾರ್ಥಂಗಳನೆಲ್ಲರರಿವಂತೆ ಕನ್ನಡಿಸಿ, ವ್ಯಾಖ್ಯಾನಮಂ ಮಾಡಿದಪೆಂ.

**ಅವತಾರಿಕೆ :** ಇಂತು ಮೊಗ್ಗೆಯ ಮಾಯಿದೇವಾಚಾರ್ಯಂ ಸಕಲಭಕ್ತಜನ ಹಿತೋಪದೇಶ ಕಾರಣಾರ್ಥಮಾಗಿ, ಭಕ್ತಿಜ್ಞಾನವೈರಾಗ್ಯ ವೈಭವಮಂ ಪ್ರಕಟಿಸ-ಲಿಚ್ಛೈಸಿ, ತತ್ಪ್ರತಿಪಾದಕಶತಕತ್ರಯಮಂ ಪೇಳಲುದ್ಯೋಗಿಸಿದಾತನಾಗಿ, "ಯೋ ಗುರುಸ್ಸಶ್ಶಿವಃ ಪ್ರೋಕ್ತೋಯಃ ಶಿವಸೋಗುರುಃಸ್ಮೃತಃ" ಇಂತೆಂಬ ಶಿವಾಗಮ ವಾಕ್ಯಪ್ರಮಾಣದಿಂ ಶ್ರೀಗುರುವಿಂಗೆಯುಂ ಶಿವಂಗೆಯುಂ ಅಭೇದಮಂ ಭಾವಿಸಿ-ಕೊಂಡು, ಶ್ರೀಗುರು ಮಂಗಳಾಚರಮಂ ಗ್ರಂಥಾರಂಭದಲ್ಲಿ ಮಾಡಿ, ಮೊದಲು ಭಕ್ತಿಪ್ರತಿಪಾದಕಮಾದ ಶಿವಾಧವಶತಕಮಂ ಪೇಳುತಿರ್ದಪಂ—

**ಟೀಕೆ :** ಶ್ರೀಗುರುವೇ - ಜ್ಞಾನಸಂಪತ್ತಿನಿಂದ ಉಪದೇಶಿಸುವ ಗುರುವೆ, ಮಹಾಗುರುವೇ - ಪೂಜ್ಯನಾದಂಥ ಗುರುವೆ, ಶಾಂತಿಕಲಾಗುರುವೇ - ಶಾಂತಿಯೆಂಬ ಕಲೆಯೊಡನೆ ಕೂಡಿದ ಅಮೂರ್ತಸಾದಾಖ್ಯಸ್ವರೂಪನಾದಂಥ ಗುರುವೆ, ಶಿವಾತ್ಮವಿದ್ಯಾಗುರುವೇ - ಲಿಂಗಾಂಗಸ್ಥಲಂಗಳೈಕ್ಯವಂ ಬೋಧಿಸುವ ಗುರುವೆ, ಪುರಾಗುರುವೇ - ದೇವದಾನವ ಮಾನವರುಗಳಿಗೆ ಮೊದಲಿಗನಾದ ಗುರುವೆ, ವಿಶ್ವಜಗದ್ಗುರುವೇ - ಸಮಸ್ತ ಜಗಂಗಳಿಗೂ ಗುರುವೆ, ವಿಶುದ್ಧ ಚೇಷ್ಟಾಗುರುವೇ - ಅತಿ ನಿರ್ಮಲವಾದ ಚರಿತ್ರೆಯುಳ್ಳ ಗುರುವೆ, ಸುಧೀ ಗುರುವೇ - ಶೋಭನವಾದ ಬುದ್ಧಿಯುಳ್ಳ ಗುರುವೆ, ಭಕ್ತಿಯಶೋ ಗುರುವೇ - ಶಿವಭಕ್ತಿಯಿಂ ದಿಗಂತದಲ್ಲಿ ಪ್ರಸಿದ್ಧಿಯಂ ಪೊಕ್ಕ ಗುರುವೆ, ಪ್ರಸಾದತೇಜೋಗುರುವೇ - ಶುದ್ಧ ಸಿದ್ಧ ಪ್ರಸಿದ್ಧವೆಂಬ ಪ್ರಸಾದದಿಂದಾದ ಪ್ರಭಾವವುಳ್ಳ ಗುರುವೆ, ಕೃಪಾಗುರುವೇ - ದಯಾಸ್ವರೂಪನಾದ ಗುರುವೆ, ಮದ್ಗುರುವೇ - ಎನ್ನ ಗುರುವೆ, ಗುರುವೇ - ಎನ್ನ ತಂದೆಯಾದ ಗುರುವೆ, ಶಿವಾಧವ-ಚಿಚ್ಛಕ್ತಿವಲ್ಲಭನಾದ ಪರಶಿವನ ಸ್ವರೂಪನಾದ ಗುರುವೆ, ಜಯ-ಸರ್ವೋತ್ಕೃಷ್ಟನಾಗು.

**ವಿಚಾರ :** ಇನ್ನಿಲ್ಲಿ 'ಜಯು'ವೆಂದು ಕ್ರಿಯಾಧ್ಯಾಹಾರಂ. ಈ ವೃತ್ತದಲ್ಲಿ "ಶಿವಾತ್ಮವಿದ್ಯಾಗುರುವೆ" ಎಂಬ ಪದದಿಂದೆಯುಂ "ಪ್ರಸಾದತೇಜೋಗುರುವೆ" ಎಂಬ ಪದದಿಂದೆಯುಂ "ಸುಧೀಗುರುವೆ" ಎಂಬ ಪದದಿಂದೆಯುಂ "ಭಕ್ತಿಯಶೋಗುರುವೆ" ಎಂಬ ಪದದಿಂದೆಯುಂ ಸಂಬಂಧ-ವಿಷಯ-ಪ್ರಯೋಜನ ಅಧಿಕಾರಿಗಳೆಂಬ ಅನುಬಂಧ ಚತುಷ್ಟಯಂ ಸೂಚಿಸಲ್ಪಟ್ಟಿತು. ಇಲ್ಲಿ ಲಿಂಗಸ್ಥಲಾಂಗಸ್ಥಲಸಂಯೋಗವೇ ಸಂಬಂಧ, ಗುರು-ಲಿಂಗ-ಜಂಗಮ-ಪಾದೋದಕ-ಪ್ರಸಾದ-ಪಂಚಕಂಗಳನೇಕರೂಪವೆಂದು ಪ್ರತಿಪಾದಿಸುವುದೇ ವಿಷಯ, ಸ್ವರೂಪಸಾಕ್ಷಾತ್ಕಾರರೂಪವಾದ ಮೋಕ್ಷವೇ ಪ್ರಯೋಜನ, ಸರ್ವಾಚಾರಸಂಪನ್ನನಾಗಿ, ಷಡರ್ಥಸಂಗ್ರಹಾಚರಣೆಯುಳ್ಳಾತನಾಗಿ ಮುಮುಕ್ಷುವಾದ ಭಕ್ತನೇ ಅಧಿಕಾರಿ. ಇದೀಗ ಪ್ರೇಕ್ಷಾವತ್ಪ್ರವೃತ್ತ್ಯಂಗವಾದ ಅನುಬಂಧಚತುಷ್ಟಯಂ.

## ಭಾವಾರ್ಥಬೋಧಿನೀಕಾರನ ಮಂಗಳಂ

ಕಂದ || ಪರಶಿವಕಮಲಾಂತರದೊಳ್
ಪರಿಶೋಭಿಪ ದೃಕ್ಕ್ರಿಯಾ ಸುಮಧುವಂ ಪೀರ್ದಾಂ
ನೆರೆ ಸುಖಿಪ ಭೃಂಗಭಾವವ
ಕರುಣಿಸಿದಾ ಗುರುಚರರ್ಗೆ ವಂದಿಪೆನೊಲವಿಂ

**ಭಾವಾರ್ಥಬೋಧಿನಿ ಪದ್ಯ - ೧ :** ಶ್ರೀಗುರುವೆ, ಪೂಜ್ಯಗುರುವೆ, ಶಾಂತಿಕಲಾಮಯಗುರುವೆ, ಷಟ್‌ಸ್ಥಲತತ್ವವಿದ್ಯಾಗುರುವೆ, ಪುರಾತನ ಗುರುವೆ, ಸಮಸ್ತ ಜಗದ್ಗುರುವೆ, ನಿರ್ಮಲಚರಿತ್ರೆಯ ಗುರುವೆ, ಸುಬುದ್ಧಿಯ ಗುರುವೆ, ಭಕ್ತಿಯ ಪ್ರಸಾರವನ್ನು ಮಾಡಿದ ಕೀರ್ತಿಯಿಂದ ಕೂಡಿದ ಗುರುವೆ, ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದತ್ರಯದ ಪ್ರಭಾವವುಳ್ಳ ಗುರುವೆ, ದಯಾನ್ವಿತ ಗುರುವೆ, ನನ್ನ ಗುರುವೆ, ತಂದೆಯಾದ ಗುರುವೆ, ಶಿವಾಧವನಾದ (ಜ್ಞಾನಶಕ್ತಿಗೆ ಪತಿಯಾದ) ಶಿವನ ಸ್ವರೂಪನಾದ ಗುರುವೆ ಸರ್ವೋತ್ಕೃಷ್ಟನಾಗು—

ಹೀಗೆಂದು ಗ್ರಂಥಕರ್ತೃವು ಶಿವಾಭೇದಭಾವನೆಯಿಂದ ಗುರುವನ್ನು ಸ್ತುತಿಸಿ, ಮಂಗಳಾಚರಣವನ್ನು ಮಾಡಿರುವನು.

## ಟೀಕಾಕಾರನ ಅವತಾರಿಕೆ

ಇನ್ನು ಆಚಾರ್ಯರ್ಗಂ ಸ್ವಗುರು ನಮಸ್ಕಾರಾನಂತರದಲ್ಲಿ ವೀರಶೈವಸಂಪ್ರದಾಯ ಪ್ರವರ್ತಕರಾದ ಬಸವೇಶ್ವರ, ಚೆನ್ನಬಸವೇಶ್ವರ, ಪ್ರಭುದೇವರೆಂಬ ಪುರಾತನರಂ ಮೂರು ಪದ್ಯದಿಂ ಸ್ತೋತ್ರಮಂ ಮಾಡುತ್ತಿರ್ದಪಂ—

## ಚಂಪಕಮಾಲಾವೃತ್ತಂ

೧ ಜಯ ಬಸವೇಶ ಭಕ್ತಜನಭಾಗ್ಯ ಶುಭೋದಯ ವೀರಶೈವನಿ-
ರ್ಣಯ ಪರಮಾವತಾರ ಶರಣಾಗತರಕ್ಷಕ ಚಿದ್ಘನಪ್ರಭಾ-
ಮಯ ಜಗದಾದಿದೇಶಿಕ ಪುರಾತನಪುಂಗವ ಶಾಂಭವೈಪುರಾ-
ಶ್ರಯ ಜಯ ಸೋಮನಾಥ ಜಯದೇವ ಜಯಾವಿರತಂ ಶಿವಾಧವಾ

**ಟೀಕೆ** : ಭಕ್ತಜನಭಾಗ್ಯ - ಶಿವಭಕ್ತ ಜನಂಗಳ ಭಾಗ್ಯಸ್ವರೂಪನಾದ, ಶುಭೋದಯ - ಶೋಭನವಾದ ಏಳಿಗೆಯನ್ನುಳ್ಳಂಥ, ವೀರಶೈವ ನಿರ್ಣಯ - ವೀರಶೈವಾಚಾರನಿಶ್ಚಯಕ್ಕೋಸ್ಕರ (ಪುನರುದ್ಧಾರಣೆಗೋಸ್ಕರ), ಪರಮಾವತಾರ - ಉತ್ಕೃಷ್ಟವಾದ ಅವತಾರವುಳ್ಳಂಥ, ಶರಣಾಗತರಕ್ಷಕ - ಮರೆಹೊಕ್ಕವರ ರಕ್ಷಿಸುವಂಥ, ಚಿದ್ಘನಪ್ರಭಾಮಯ - ಜ್ಞಾನದಿಂದ ದಟ್ಟಿತ್ತಾದ ಪ್ರಕಾಶಸ್ವರೂಪನಾದಂಥ, ಜಗದಾದಿದೇಶಿಕ - ಲೋಕಗಳಿಗೆ ಪ್ರಥಮಾಚಾರ್ಯನಾದಂಥ, ಪುರಾತನಪುಂಗವ - ಪೂರ್ವದ ಪ್ರಮಥಗಣಂಗಳಲ್ಲಿ ಶ್ರೇಷ್ಠನಾದಂಥ, ಬಸವೇಶ - ಎಲೈ ಬಸವೇಶ್ವರನೆ, ಜಯ-ಸರ್ವೋತ್ಕೃಷ್ಟನಾಗು, ಶಾಂಭವೈಪುರಾಶ್ರಯ-ಶಿವಸಂಬಂಧಿಯಾದ ಜ್ಞಾನಾಕಾಶವೆಂಬ ಪಟ್ಟಣವೇ ಆಶ್ರಯವಾಗುಳ್ಳ ("ಐಕಾರಃ ಕಥ್ಯತೇ ಜ್ಞಾನೇ ವಾಗ್ಭವೇ ಗಜ ಶಿಕ್ಷಣೇ" ಎಂದು ನಾನಾರ್ಥರತ್ನಮಾಲೆಯುಂಟಾಗಿ, ಐಕಾರಕ್ಕೆ ಜ್ಞಾನವೆಂಬರ್ಥವು.) ಸೋಮನಾಥ - ಚಿತ್ಕಲಾಯುಕ್ತನಾದ, ಬಸವೇಶ - ಎಲೈ ಬಸವೇಶ್ವರನೆ, ಜಯ-ಸರ್ವೋತ್ಕೃಷ್ಟನಾಗು, ದೇವ - ಸ್ವಯಂಪ್ರಕಾಶಸ್ವರೂಪನಾದ, ಬಸವೇಶ - ಎಲೈ ಬಸವೇಶ್ವರನೆ, ಜಯ - ಸರ್ವೋತ್ಕೃಷ್ಟನಾಗು, ಶಿವಾಧವ - ಗುಣತ್ರಯಾತೀತವಪ್ಪ ಪರಶಕ್ತಿಗೆ ವಲ್ಲಭನಾದ, ಬಸವೇಶ - ಎಲೈ ಬಸವೇಶ್ವರನೇ, ಅವಿರತಂ - ನಿರಂತರವಲ್ಲಿ, ಜಯ - ಸರ್ವೋತ್ಕೃಷ್ಟನಾಗು || ೧ ||

**ಭಾವಾರ್ಥಬೋಧಿನಿ** - ೧ : ಶಿವಭಕ್ತರ ಭಾಗ್ಯಸ್ವರೂಪನೆ, ಮಂಗಳಕರ-ವಾದ ಅಭ್ಯುದಯವುಳ್ಳವನೆ, ವೀರಶೈವಮತದ ನಿಜಾಚರಣೆಯನ್ನು ನಿರ್ಣಯಿಸುವುದಕ್ಕಾಗಿ ಧರಿಸಿದ ಪರಮಾವತಾರವುಳ್ಳವನೆ, ಶರಣಾಗತರ ರಕ್ಷಕನೆ, ಅಧಿಕವಾದ ಜ್ಞಾನದ ತೇಜದಿಂದ ಕೂಡಿದವನೆ, ಜಗತ್ತಿಗೆ ಆದಿಗುರುವೆನಿಸಿದವನೆ, ಪ್ರಮಥ ಶ್ರೇಷ್ಠನೆ, ಶಿವಸಂಬಂಧವಾದ ಚಿದಾಕಾಶವೆಂಬ ಪಟ್ಟಣದ ಆಶ್ರಯವುಳ್ಳವನೆ, ಸರ್ವೋತ್ಕೃಷ್ಟನಾಗು, ಉಮಾಸಹಿತನಾದ ಶಂಕರನ ಸ್ವರೂಪನೇ, ಸರ್ವೋತ್ಕೃಷ್ಟನಾಗು, ದೇವನೆ, ಶಿವೆಯ ( ಚಿಚ್ಛಕ್ತಿಯ ) ವಲ್ಲಭನಾದ ಶಿವನ ಸ್ವರೂಪನೆ, ನಿರಂತರವೂ ಜಯಶೀಲನಾಗಿರು.



ಗ್ರಂಥಕರ್ತೃವು ಈ ಪದ್ಯದಲ್ಲಿ ಬಸವೇಶ್ವರನನ್ನು ಶಿವನಿಗೆ ಅಭಿನ್ನನೆಂದು ಭಾವಿಸಿ ಸ್ತುತಿಸಿರುವನು.

**ಚಂಪಕಮಾಲಾವೃತ್ತಂ**

೭ ಬಸವಕುಮಾರ ಭಾಕ್ತಿಕಪುರಸ್ಸರ ಷಟ್ಸ್ಥಲಧೀರ ಚಿತ್ಸುಧಾ-
ರಸಭರೀತಾಂತರಂಗ ಸಕಲಾಕ್ಷಸಮರ್ಪಿತಲಿಂಗ ತತ್ಪ್ರಸಾ-
ದಸುಖವಿಶೇಷತೃಪ್ತ ಶಿವಯೋಗಪದೈಕಸಮಾಪ್ತ ನೀನೆ ರ-
ಕ್ಷಿಸುಗಡ ಜೀಯ ಚೆನ್ನಬಸವಯ್ಯ ಕೃಪಾನಿಧಿಯೇ ಶಿವಾಧವಾ

**ಟೀಕೆ :** ಭಾಕ್ತಿಕ ಪುರಸ್ಸರ - ಶಿವಭಕ್ತರಲ್ಲಿ ಅಗ್ರೇಸರನಾದಂಥ-("ಪುರೋಗಾಗ್ರೇಸರಪ್ರಷ್ಠಾಗ್ರತಸ್ಸರಪುರಸ್ಸರಾಃ" ಎಂದು ಅಮರನಿಘಂಟು) ಷಟ್ಸ್ಥಲಧೀರ-ಷಟ್ಸ್ಥಲಮಾರ್ಗಮಂ ಬಲ್ಲಂಥ - ("ಧೀರೋಮನಿಷೀಜ್ಞಃ ಪ್ರಾಜ್ಞಃ" ಎಂದು ನಿಘಂಟು ) ( ಷಟ್ಸ್ಥಲಜ್ಞಾನಮಂ ಕೊಡತಿರ್ಪಂಥಾತನೆಂದಾದರೂ ಆಗಲಿ, "ವಿದ್ಯಾಯಾಂರಮತೇ ಯಸ್ಮಾದ್ಧೀರ ಇತ್ಯುಚ್ಯತೇಬುಧೈಃ" ಎಂಬಂತೆ ಷಟ್ಸ್ಥಲಜ್ಞಾನ ವಿದ್ಯೆಯಲ್ಲಿ ರಮಿಸುತ್ತಿರ್ಪಾತನೆಂದಾದರೂ ಆಗಲಿ, ಚಿತ್ಸುಧಾರಸಭರಿತಾಂತರಂಗ-ಜ್ಞಾನಾಮೃತರಸದಿಂ ತುಂಬಲ್ಪಟ್ಟಂತರಂಗವನುಳ್ಳಂಥ, ಸಕಲಾಕ್ಷಸಮರ್ಪಿತಲಿಂಗ ತತ್ಪ್ರಸಾದಸುಖವಿಶೇಷ ತೃಪ್ತ - ಸಕಲ - ಸಮಸ್ತವಾದ ಅಕ್ಷ - ಇಂದ್ರಿಯಂಗಳಲ್ಲಿ ಸಮರ್ಪಿತ - ಇರಿಸಲ್ಪಟ್ಟ ಲಿಂಗ – ಲಿಂಗಗಳ ತತ್ಪ್ರಸಾದಸುಖವಿಶೇಷ - ಆ ಪ್ರಸಾದಸುಖಾತಿಶಯದಿಂದ ತೃಪ್ತ - ತೃಪ್ತಿವಡೆದಾತನಾದಂಥ, ಶಿವಯೋಗ ಪದೈಕಸಮಾಪ್ತ - ಶಿವಯೋಗಪದವೊಂದರಿಂದಲೇಸಾಗಿ ಐದಲ್ಪಟ್ಟಂಥ, ಕೃಪಾನಿಧಿಯೆ - ಕೃಪೆಗೆ ನೆಲೆಯಾದಂಥ, ಶಿವಾಧವ - ಚಿಚ್ಛಕ್ತಿವಲ್ಲಭನಾದಂಥ ಪರಶಿವನ ಸ್ವರೂಪನಾದ, ಬಸವಕುಮಾರ - ಬಸವೇಶ್ವರನ ಪುತ್ರನಾದಂಥ, ಚೆನ್ನಬಸವಯ್ಯ-ಚೆನ್ನಬಸವೇಶ್ವರನೆಂಬ, ಜೀಯ - ಎಲೆ ಒಡೆಯನೆ, ನೀನೆ ರಕ್ಷಿಸು ಗಡ - ನೀನೆ ಪಾಲಿಸು ಕಂಡೆಯಾ"

**ಭಾವಾರ್ಥಬೋಧಿನಿ ಪದ್ಯ ೩ :** ಶಿವದೀಕ್ಷೆಯಂ ಮಾಡಿದ ಬಸವನೆಂಬ ಗುರುವಿನ ಪುತ್ರನೆ, ಭಕ್ತರಲ್ಲಿ ಅಗ್ರಗಣ್ಯನೆ, ಷಟ್‌ಸ್ಥಲತತ್ವವಿದ್ಯೆಯಲ್ಲಿ ಪಂಡಿತನೆ, ಜ್ಞಾನಾಮೃತಭರಿತ ಹೃದಯನೆ, ಸಕಲೇಂದ್ರಿಯಗತಲಿಂಗಪ್ರಸಾದಸುಖವಿಶೇಷದಿಂದ ತೃಪ್ತಸಾದವನೆ, ಶಿವಯೋಗಪದವೊಂದರಿಂದಲೇ (ಭಕ್ತರಿಗೆ) ಪ್ರಾಪ್ತವಾಗುವವನೆ, ಕೃಪಾನಿಧಿಯೆ, ಚಿಚ್ಛಕ್ತಿಯ ಪತಿಯಾದ ಶಿವನ ಸ್ವರೂಪನೆ, ಚೆನ್ನಬಸವಸ್ವಾಮಿಯೆ,

ನನ್ನನ್ನು ಕಾಪಾಡು. ಇಲ್ಲಿಯೂ ಚೆನ್ನಬಸವನಿಗೂ ಶಿವನಿಗೂ ಅಭೇದದ ಸ್ತೋತ್ರವಿರುವುದು.

**ಚಂಪಕಮಾಲಾವೃತ್ತಂ**

೪ ಪ್ರಭುವೆ ಮಹಾಗುರುಪ್ರಭುವೆ ಲಿಂಗಕಳಾಪ್ರಭುವೇ ಚರಾಭಿಧ-
ಪ್ರಭುವೆ ಶಿವಾತ್ಮವಿತ್ಪ್ರಭುವೆ ಯೋಗಿವರಪ್ರಭುವೇ ಚಿದಂಗನಾ-
ಪ್ರಭುವೆ ಸದಾಮಲಪ್ರಭುವೆ ರಕ್ಷಿಸುದೇವ ಗುಹೇಶ್ವರಾಲ್ಲಮ-
ಪ್ರಭುವೆ ನಿರಂಜನಪ್ರಭುವೆ ಮತ್ಪ್ರಭುವೇ ಪ್ರಭುವೇ ಶಿವಾಧವಾ

**ಟೀಕೆ :** ಪ್ರಭುವೆ - ನಿಗ್ರಹಾನುಗ್ರಹಸಮರ್ಥನೆ, ಮಹಾಗುರುಪ್ರಭುವೆ - ಪೂಜ್ಯನಾದ ಗುರುವರೇಣ್ಯನೆ, ಲಿಂಗಕಳಾಪ್ರಭುವೇ - ಲಿಂಗಚೈತನ್ಯಕ್ಕಧೀಶ್ವರನೆ, ಶಿವಾತ್ಮವಿತ್ಪ್ರಭುವೆ - ಶಿವತತ್ವಮಂ ಬಲ್ಲವರ್ಗಧೀಶ್ವರನೆ, ("ಆತ್ಮಾ ಭಾವೇ ಧೃತೌ ಬುದ್ಧೌ ಪರತತ್ವೇ ಪರಾತ್ಮನಿ" ಎಂದು ಯಾದವ ನಿಘಂಟು) ಯೋಗಿವರಪ್ರಭುವೆ - ಮಹಾಯೋಗಿ ಶ್ರೇಷ್ಠರ್ಗಧೀಶ್ವರನೆ, ಚಿದಂಗನಾಪ್ರಭುವೆ - ಜ್ಞಾನಶಕ್ತಿವಲ್ಲಭನೆ, ಸದಾಮಲಪ್ರಭುವೆ - ಯಾವಾಗಲೂ ನಿರ್ಮಲಾಂತಃಕರಣವುಳ್ಳ ಪ್ರಭುವೆ, ನಿರಂಜನ ಪ್ರಭುವೆ - ನಿರ್ಲೇಪನಾವ ಎಲ್ಲೈ ಒಡೆಯನೆ, ಮತ್ಪ್ರಭುವೇ - ಎನ್ನಾಳ್ದನೆ, ಪ್ರಭುವೇ - ಸಕಲಜಗತ್ಪರಿಪೂರ್ಣನೆ, ಶಿವಾಧವ - ಚಿಛ್ಛಕ್ತಿವಲ್ಲಭನಾವಂಥ, ಗುಹೇಶ್ವರಾಲ್ಲಮಪ್ರಭುವೇ - ತನುಕರಣೇಂದ್ರಿಯಗಳಿಗೆ ವಿಲಕ್ಷಣವಾಗಿರ್ಪ ದಹರಾಕಾಶದಲ್ಲಿ ವಿವರಿಸುವಂಥ ದೇವನೆ, ರಕ್ಷಿಸು—ಪಾಲಿಸು.

**ಭಾವಾರ್ಥಬೋಧಿನಿ** - ೪ : ಭಕ್ತೋದ್ಧಾರ ಸಮರ್ಥನೆ, ಮಹಾಗುರು ಸ್ವಾಮಿಯೆ, ಲಿಂಗಕಲೆಗಧೀಶನೆ, ಶಿವತತ್ವವಿದವಾದ ಸ್ವಾಮಿಯೆ, ಶಿವಯೋಗಿಶ್ರೇಷ್ಠನಾದಪ್ರಭುವೆ, ಜ್ಞಾನಕಾಂತೆಯ ಒಡೆಯನೆ, ನಿರಂತರನಿರ್ಮಲಸ್ವಾಮಿಯೆ, ಸ್ವಾಮಿಯೆ, ದಹರಾಕಾಶಕ್ಕೆ (ಗುಹೆಗೆ) ಒಡೆಯನಾದ ಅಲ್ಲಮಪ್ರಭುವೆ, ರಂಜನ ರಹಿತಸ್ವಾಮಿಯೆ, ನನ್ನದೇವರೆ, ಸ್ವಾಮಿ ಚಿಚ್ಛಕ್ತಿವಲ್ಲಭನೆ ರಕ್ಷಿಸು.

ಇಲ್ಲಿ ಅಲ್ಲಮಪ್ರಭುವಿನ ಸ್ತುತಿಯೂ ಶಿವಾಭಿನ್ನವಾಗಿಯೇ ಇರುವುದು.

**ಅವತಾರಿಕೆ** : ಇಂತು ಆಚಾರ್ಯಂ ಬಸವಾದಿ ಪುರಾತನರಂ ಸ್ತುತಿಸಿ, ನೂತನ ಪುರಾತನರಂ ಸ್ತುತಿಸುತಿರ್ಪಂ.

## ಚಂಪಕಮಾಲಾವೃತ್ತಂ

೫ ಬಸವನನೊರ್ಮೆ ಚೆನ್ನಬಸವಣ್ಣನನೊರ್ಮೆ ಗುಹೇಶ್ವರಾಲ್ಲಮ-
ಪ್ರಸವಯಶೋಮಯ ಪ್ರಭುವನೊರ್ಮೆ ಸಮಾಹಿತಮಾದ ಭಾಕ್ತಿಕಂ
ಮಸಗೆ ಪುನಃ ಪುನಸ್ಸ್ಮರಿಸಿ ಕೀರ್ತಿಸಿ ಪಾಡಿ ಭವಪ್ರಪಂಚಮಂ
ನುಸುಳುವರಯ್ಯ ವೀರನಿಯಮವ್ರತಧರ್ಮಪರರ್ ಶಿವಾಧವಾ

**ಟೀಕೆ :** ವೀರನಿಯಮವ್ರತಧರ್ಮಪರರ್ - ವೀರನಿಯಮ - ಅಕ್ರೋಧ, ಗುರುಸೇವೆ, ಶೌಚ, ಅಲ್ಪಾಹಾರ ಎಚ್ಚರುಗಳೆಂದೈದು ನಿಯಮಂಗಳ, ವೀರವ್ರತ ಗೌರವ, ಲೈಂಗಿಕ, ಆಚಾರ, ಪ್ರಸಾದ, ಪಾದೋದಕ, ಭಕ್ತಿಯೆಂಬ ಷಡ್ವಿಧ ವ್ರತಂಗಳ ಧರ್ಮ - ಆಚಾರದಲ್ಲಿ ಪರರ್ - ತಾತ್ಪರ್ಯವುಳ್ಳವರುಗಳು ಬಸವನಂ ಒರ್ಮೆ-ಬಸವೇಶ್ವರನನ್ನೊಂದು ವೇಳೆ, ಚೆನ್ನಬಸವಣ್ಣನಂ ಒರ್ಮೆ-ಚೆನ್ನಬಸವೇಶನ ನೊಂದು ಸೂಳು, ಗುಹೇಶ್ವರಾಲ್ಲಮಪ್ರಸವ ಯಶೋಮಯ ಪ್ರಭುವಂ ಒರ್ಮೆ- ಗುಹೇಶ್ವರಾಲ್ಲಮ - ಗುಹೇಶ್ವರನೆಂಬ ಮತ್ತು ಅಲ್ಲಮನೆಂಬ ಪೆಸರುಳ, ಪ್ರಸವ ಯಶೋಮಯ - ಕುಸುಮ ಸುಕುಮಾರವಾದ ಕೀರ್ತಿಯುಳ್ಳ, ಪ್ರಭುವಂ ಒರ್ಮೆ- ಪ್ರಭುದೇವರನೊಂದು ಸಾರಿ, ಸಮಾಹಿತವಾದ - ಅವಿರಳವಾದ, ಭಾಕ್ತಿಕಂ ಮಸಗೆ - ಭಕ್ತಿಭಾವಂ ಪ್ರಕಾಶಿಸುತ್ತಿರಲಾಗಿ, ಪುನಃ ಪುನಃ - ಮತ್ತೆ ಮತ್ತೆ, ಸ್ಮರಿಸಿ - ನೆನೆದು, ಕೀರ್ತಿಸಿ - ಕೊಂಡಾಡಿ, ಪಾಡಿ - ಗಾನವಂ ಮಾಡಿ, ಭವಪ್ರ ಪಂಚಮಂ - ಸಂಸಾರದ ವಿಸ್ತಾರವನ್ನು, ನುಸುಳುವರಯ್ಯ - ದಾಂಟುವರು.

**ಭಾವಾರ್ಥಬೋಧಿನಿ - ೫ :** ಶಿವಾಧವನೆ, ವೀರನಿಯಮದ ಮತ್ತು ವೀರ ವ್ರತದ ಧರ್ಮದವರು(ವೀರಶೈವರು) ಒಮ್ಮೆ ಬಸವಣ್ಣನನ್ನು, ಒಮ್ಮೆ ಚೆನ್ನಬಸವಣ್ಣ ನನ್ನು, ಒಮ್ಮೆ ಕುಸುಮಕೋಮಲ ಅಥವಾ ಕುಸುಮಧವಳಿತ ಕೀರ್ತಿಯುಳ್ಳ ಅಲ್ಲಮಪ್ರಭುವನ್ನು ಪೂರ್ಣಭಕ್ತಿಭಾವದಿಂದ ಮತ್ತೆ ಮತ್ತೆ ಸ್ಮರಿಸಿ, ಹೊಗಳಿ, ಗಾನಮಾಡಿ ಜನನಮರಣಾತ್ಮಕವಾದ ಪ್ರಪಂಚವನ್ನು ದಾಟುವರು.

## ಚಂಪಕಮಾಲಾವೃತ್ತಂ

೬ ಬಸವಪುರಾತನರ್ಚರಿಸಿ ತೋರಿದ ಷಟ್ಸ್ಥಲಮಾರ್ಗದೊಳ್ ಪ್ರವ-
ರ್ತಿಸುತಮನೂನಭಕ್ತಿರತಿಯಿಂ ತನುವಿತ್ತಮನಂಗಳಂ ಸಮ-
ರ್ಪಿಸಿ ಗುರುಲಿಂಗಜಂಗಮಕೆ ವಂಚನೆಯಿಲ್ಲದೆ ಮಾಡಿ ಕೂಡಿ ರಾ-
ಜಿಸುವ ಮಹಾತ್ಮರಂ ನೆನೆವುದೇ ಘನಮುಕ್ತಿಪದಂ ಶಿವಾಧವಾ

**ಟೀಕೆ :** ಬಸವಪುರಾತನರ್ - ಬಸವೇಶ್ವರ ಮುಂತಾದ ಪುರಾತನರು, ಚರಿಸಿ ತೋರಿದ - ಆಚರಿಸಿ ತೋರಿದಂಥ, ಷಟ್‌ಸ್ಥಲಮಾರ್ಗದೊಳ್ - ಷಟ್‌ಸ್ಥಲ ಮಾರ್ಗದಲ್ಲಿ - ಪ್ರವರ್ತಿಸುತ್ತಂ - ಮಿಗಿಲಾಗಿ ನಡೆಯುತ್ತ, ಅನೂನಭಕ್ತಿರತಿಯಿಂ-ಸಂಪೂರ್ಣವಾದ ಭಕ್ತಿತಾತ್ಪರ್ಯದಿಂ, ಗುರುಲಿಂಗಜಂಗಮಕ್ಕೆ - ಗುರುಲಿಂಗಜಂಗಮವೆಂಬ ತ್ರಿವಿಧಕ್ಕೆ, ತನುವಿತ್ತ ಮನಂಗಳಂ - ತನುಮನೋಧನಂಗಳನ್ನು, ವಂಚನೆಯಿಲ್ಲದೆ - ಮರೆಮಾಜದೆ, ಸಮರ್ಪಿಸಿ - ಕೊಟ್ಟು, ಮಾಡಿ - ಇಂತಪ್ಪ ಭಕ್ತಿಯ ಮಾಡಿ, ಕೂಡಿ - ಸಾಮರಸ್ಯವನೈದಿ, ರಾಜಿಸುವ - ಒಪ್ಪುತಿರ್ಪ, ಮಹಾತ್ಮರಂ - ಮಹಾನುಭಾವರನ್ನು, ನೆನೆವುದೇ-ಸ್ಮರಿಸುವುದೇ, ಘನಮುಕ್ತಿಪದಂ-ದೊಡ್ಡಿತ್ತಾದ ಮೋಕ್ಷಪದವು.

**ಭಾವಾರ್ಥಬೋಧಿನಿ - ೬ :** ಶಿವಾಧವನೆ, ಬಸವಾದಿ ಪ್ರಮಥರು ಆಚರಿಸಿ, ಬೋಧಿಸಿದ ಷಟ್‌ಸ್ಥಲಮಾರ್ಗದಲ್ಲಿ ನಡೆದು, ಸಂಪೂರ್ಣಭಕ್ತಿರತಿಯಿಂದ ಉಪಾಸ್ಯ-ರಾದ ಗುರುಲಿಂಗಜಂಗಮರಿಗೆ ತನುಮನೋಧನಂಗಳನ್ನು ವಂಚನೆಯಿಲ್ಲದೆ ಸಮ-ರ್ಪಿಸಿ, ಇಂತಪ್ಪ ಭಕ್ತಿಯನ್ನು ಮಾಡಿ, ಲಿಂಗಾಂಗಸಾಮರಸ್ಯವನ್ನು ಪಡೆದು ಶೋಭಿಸುವ ಮಹಾನುಭಾವಿಗಳನ್ನು ನೆನೆಯುವುದೇ ಘನವಾದ ಮುಕ್ತಿಪದವು-ಎಂದರೆ-ಮಹಾನುಭಾವಿಗಳನ್ನು ಸ್ಮರಿಸುವುದರಿಂದ ಅವರ ಮಾರ್ಗದಲ್ಲಿ ನಡೆಯು ಬೇಕೆಂಬ ಪ್ರವೃತ್ತಿಯುಂಟಾಗಿ, ಅವರಂತೆ ನಡೆದು, ತಾವೂ ಮುಕ್ತರಾಗುವರೆಂಬುದೇ ಇಲ್ಲಿನ ಅಭಿಪ್ರಾಯವಿರುವುದು.

**ಅವತಾರಿಕೆ :** ಇಂತು ಆಚಾರ್ಯಂ ನೂತನ ಪುರಾತನರ ಕೀರ್ತನಾನಂತರ-ದಲ್ಲಿ ಭಕ್ತಿಯ ಮಹತ್ವವಂ ಪೇಳುತಿರ್ದಪಂ—

**ಉತ್ಪಲಮಾಲಾವೃತ್ತಂ**

೭ ಏನೆನಲುಂಟು ಭಕ್ತಿಯ ಮಹಾತ್ಮತೆಯುಂ ಶ್ರುತಿಶಾಸ್ತ್ರಪಂಕ್ತಿ 'ಯೋ-
ಗೇನಪರಾ' ಎನುತ್ತಮಳಭಕ್ತಿಯ ವೈಭವಮಂ ಪೊಗಳ್ದು ಸ-
ನ್ಯಾಸಿಸಿ ತಾಗಿ ಯೋಗಪದದಿಂಮುಪರಿಷ್ಠವೆನಿಪ್ಪ ಭಕ್ತಿ ಸಾ-
ಮ್ಯಾನುಭವೈಕನಿಷ್ಕಳಪದಕ್ಕೆಡೆಯಾವಪದಂ ಶಿವಾಧವಾ





**ಟೀಕೆ** : ಶ್ರುತಿಶಾಸ್ತ್ರಪಂಕ್ತಿ - ಚತುರ್ವೇದ ಷಟ್ಶಾಸ್ತ್ರಸಮೂಹವು, "ಯೋಗೇನಪರಾ" ಎನುತ್ತೆ - ಸಾಯುಜ್ಯ ಮುಕ್ತಿಯಿಂದಂ ಭಕ್ತಿಯಧಿಕವೆಂದು "ಯೋಗೇನತು ಪರಾ ಭಕ್ತಿರಿತಿ ಭಕ್ತೇಸ್ತು ವೈಭವಂ" (ಶಿವಾನುಭವಸೂತ್ರದ ಪಂಚಮಾಧಿಕರಣದ ಸೂತ್ರ - ೭೦) ಎಂದು, ಅಮಳಭಕ್ತಿಯ - ಅಕಳಂಕವಾದ ಭಕ್ತಿಯ, ವೈಭವವನ್ನು - ಪ್ರಭಾವವನ್ನು ಪೊಗಳ್ದು - ಕೊಂಡಾಡಿ, ಸನ್ಮಾನಿಸಿತಾಗಿ-ಬಹುಮಾನಮಂ ಮಾಡಿತ್ತಾಗಿ, ಭಕ್ತಿಯ - ಶಿವಭಕ್ತಿಯ, ಮಹಾತ್ಮತೆಯಂ - ಪ್ರಭಾವವನ್ನು, ಏನೆನಲುಂಟು - ಏನೆಂದು ಪೇಳಬಹುದು ! ಯೋಗಪದದಿಂದೆ - ಸಾಯುಜ್ಯಮುಕ್ತಿಗಿಂತಲೂ, ಉಪರಿಷ್ಠವೆನಿಪ್ಪ - ಅಧಿಕವೆನಿಸುವಂಥ, ಭಕ್ತಿ ಸೌಖ್ಯಾನುಭವೈಕನಿಷ್ಕಳಪದಕ್ಕೆ - ಭಕ್ತಿಯ ಸುಖವೊಂದನ್ನೇ ಅನುಭವಿಸತಕ್ಕ ನಿಷ್ಕಳಪದಕ್ಕೆ, ಆವ ಪದಂ - ಆವ ಸಾಲೋಕ್ಯಾದಿ ಪದಂಗಳು, ಎಣೆ - ಸರಿ ? ಸಮವಲ್ಲವೆಂಬುದರ್ಥವು.

**ಭಾವಾರ್ಥಬೋಧಿನಿ** - ೭ : ವೇದಶಾಸ್ತ್ರಗಳು ಸಾಯುಜ್ಯಮುಕ್ತಿಗಿಂತಲೂ ಶಿವಭಕ್ತಿಯೇ ಅಧಿಕವೆಂದು ಕೊಂಡಾಡಿ ಗೌರವಿಸುತ್ತಿರುವುದರಿಂದ ಆ ಶಿವಭಕ್ತಿಯ ಮಹಿಮೆಯನ್ನು ಏನೆಂದು ವರ್ಣಿಸಬೇಕು ?

ಹೀಗೆ ಸಾಯುಜ್ಯಮುಕ್ತಿಗಿಂತಲೂ ಶ್ರೇಷ್ಠವಾದ ಆ ಶಿವಭಕ್ತಿಯ ಸುಖ-ವೊಂದನ್ನೇ ಅನುಭವಿಸುವ ಕಳಾತೀತವಾದ ಪದವಿಗೆ ಸಮನಾದ ಮತ್ತಾವ ಪದವಿಯಿರುವುದು ?

**ವಿಚಾರ** : ಈ ಪದ್ಯದಲ್ಲಿರುವ "ಯೋಗೇನ ಪರಾ" ಎಂಬ ವಾಕ್ಯದಲ್ಲಿರುವ ಯೋಗಶಬ್ದಕ್ಕೆ ಭಿನ್ನಭಿನ್ನವಾದ ಅರ್ಥಗಳಿದ್ದರೂ 'ಮುಕ್ತಿ' ಎಂಬರ್ಥವನ್ನೇ ಟೀಕಾಕಾರನು ಮಾಡಿರುವುದು ಸಮುಚಿತವಿರುವುದು - ಏಕೆಂದರೆ-ಮಾಯಿದೇವನು "ಪಂಚಮಃ ಪುರುಷಾರ್ಥೋಹಿ ಭಕ್ತಿಃ ಶೈವೀಸನಾತನೀ" (ಶಿವಭಕ್ತಿಯು ಪಂಚಮ ಪುರುಷಾರ್ಥವು) ಎಂದು ಶಿವಾನುಭವಸೂತ್ರದ ಎಂಟನೆಯ ಅಧಿಕರಣದಲ್ಲಿ ಹೇಳಿರುವುದರಿಂದ ಐದನೆಯ ಪುರುಷಾರ್ಥವಾದ ಶಿವಭಕ್ತಿಯು ಮುಕ್ತಿಗಿಂತಲೂ ಮಿಗಿಲಾದುದೆಂದು ವ್ಯಕ್ತವಾಗುತ್ತಿರುವುದಲ್ಲವೆ ? ಆದರೆ ಈ ಭಕ್ತಿಯು ಷಟ್‌ಸ್ಥಲ ಗತವಾಗಿ, ಶ್ರದ್ಧಾದಿ ಷಡ್ವಿಧರೂಪದಿಂದ ಪರಿಣಮಿಸುವ ಭಕ್ತಿಯೆಂಬುದನ್ನು ಮರೆಯ ಬಾರದು. ಮತ್ತು ಅಂಗನಲ್ಲಿ (ಆತ್ಮನಲ್ಲಿ) ಇರುವ ಶಕ್ತಿಯೇ ಈ ಭಕ್ತಿಯಾಗಿ ಪರಿಣಮಿಸಿರುವುದೆಂಬುದಾಗಿ ತಿಳಿದುಕೊಳ್ಳಬೇಕು.

## ಚಂಪಕಮಾಲಾವೃತ್ತಂ

೮ ಭಕ್ತಿ ಶಿವಪ್ರಸಾದ ಜನನೀಭವನಂ ಶಿವನ ಪ್ರಸಾದವಾ
ಭಕ್ತಿಗೆ ಜನ್ಮಭೂಮಿ ವಿಮಲಾಂಕುರ ಬೀಜದವೋಲ್ ಪರಸ್ಪರಂ
ವ್ಯಕ್ತಮಿದಿಂತು ನೋಳ್ಪೊಡದು ತಾನೆ ನಿರಂತರಮಪ್ಪ ಮುಕ್ತಿಯಾ
ಮುಕ್ತಿಯೆ ಶುದ್ಧ ನಿಷ್ಕಳ ನಿಜೈಕ್ಯ ಪದಂ ಪರಮಂ ಶಿವಾಧವಾ

**ಟೀಕೆ :** ಭಕ್ತಿ – ಶಿವಭಕ್ತಿಯು, ಶಿವಪ್ರಸಾದಜನನೀಭವನಂ – ಶಿವಪ್ರಸನ್ನತೆಗೆ ತವರ್ಮನೆಯಾದುದು, ಶಿವನ – ಆ ಶಿವನ, ಪ್ರಸಾದಂ – ಪ್ರಸನ್ನತೆಯು, ಆ ಭಕ್ತಿಗೆ – ಆ ಶಿವಭಕ್ತಿಗೆ, ಜನ್ಮಭೂಮಿ – ಜನನಸ್ಥಾನವಾದುದು, ವಿಮಲಾಂಕುರ ಬೀಜವವೋಲ್ – ನಿರ್ಮಲವಾದ ಬೀಜಾಂಕುರನ್ಯಾಯದಂತೆ, ಪರಸ್ಪರಂ – ಅನ್ಯೋನ್ಯವಾಗಿ, ಇದು, ವ್ಯಕ್ತಂ – ಸ್ಫುಟವು. ಇಂತು ನೋಳ್ಪೆಡೆ – ಪ್ರಸಾದಾದ್ದೇವತಾ ಭಕ್ತಿಃ ಪ್ರಸಾದೋ ಭಕ್ತಿಸಂಭವಃ ಯಥೈವಾಂಕುರತೋ ಬೀಜಂ ಬೀಜತೋವಾಯಥಾಂಕುರಂ" (ಶಿವಾನುಭವಸೂತ್ರ – ೮ ನೆಯ ಅಧಿಕರಣ – ಸೂ. ೩೧) ಇಂತೆಂಬ ವಾಕ್ಯಪ್ರಮಾಣದಿಂ ನೋಡಿದರೆ, ಅದು ತಾನೆ – ಆ ಭಕ್ತಿ ತಾನೆ, ನಿರಂತರಮಪ್ಪ– ಎಡೆದೆರಪಿಲ್ಲದ, ಮುಕ್ತಿ – ಆ ಮುಕ್ತಿಯೆ – ಆ ಮೋಕ್ಷವೇ, ಪರಮಂ–ಉತ್ಕೃಷ್ಟವಾದ, ಶುದ್ಧ ನಿಷ್ಕಳನಿಜೈಕ್ಯಪದಂ – ಶುದ್ಧ – ನಿರ್ಮಳವಾದ, ನಿಷ್ಕಳ – ಕಳಾತೀತವಾದ, ನಿಜೈಕ್ಯಪದಂ – ಸ್ವಸ್ವರೂಪಸಾಕ್ಷಾತ್ಕಾರಪದವು.

**ಭಾವಾರ್ಥಬೋಧಿನಿ ಪದ್ಯ ೮ :** ಶಿವಭಕ್ತಿಯಿಂದ ಶಿವಪ್ರಸನ್ನತೆಯೂ, ಶಿವಪ್ರಸನ್ನತೆಯಿಂದ ಶಿವಭಕ್ತಿಯೂ ಉಂಟಾಗುವವು. ಬೀಜವೃಕ್ಷನ್ಯಾಯದಂತೆ (ಬೀಜದಿಂದ ವೃಕ್ಷವೂ, ವೃಕ್ಷದಿಂದ ಬೀಜವೂ ಉಂಟಾಗುವಂತೆ) ಈ ಶಿವಭಕ್ತಿ ಶಿವ ಪ್ರಸಾದಗಳು ಅನ್ಯೋನ್ಯವಾಗಿ ಸಂಬಂಧಿಸಿರುವುದು ಸುಸ್ಪಷ್ಟವು. ಈ ಕಾರಣದಿಂದ ಆ ಶಿವಭಕ್ತಿಯೇ ನಿರಂತರವಾದ ಮುಕ್ತಿಯಾಗಿ ಪರಿಣಮಿಸುವುದು. ಆ ಮುಕ್ತಿಯೇ ಶುದ್ಧವೂ, ನಿಷ್ಕಳವೂ ಆದ ನಿಜೈಕ್ಯಪದವು (ಲಿಂಗಾಂಗಸಾಮರಸ್ಯ ಸ್ಥಿತಿಯು).

**ವಿಚಾರ :** ಮಾಯಿದೇವರ ವಿಶೇಷಾರ್ಥ ಪ್ರಕಾಶಿಕೆಯ ತೃತೀಯಾಧಿಕರಣದಲ್ಲಿರುವ "ಪ್ರಸಾದ ಭಕ್ತಿ ಮುಕ್ತೀನಾಮೇಕದೇಶ ಸಮನ್ವಯಃ। ಅಪಿ ಮುಕ್ತೇರ್ಭವೇಜ್ಜನ್ಯಾತೇಷೌ ದ್ವೌಜನಕೌ ಮತೌ ॥೫೦॥ ಪ್ರಸಾದೋ ಜನಕಃ ಪ್ರೋಕ್ತೋ ಜನನೀ ಭಕ್ತಿರೀರಿತಾ। ಅನಯೋರೈಕ್ಯ ಭಾವೇನ ಜನಿತಾ ಮುಕ್ತಿ ಕನ್ಯಕಾ" ॥೫೧॥ ಎಂಬೆರಡು ಸೂತ್ರಗಳ ಅರ್ಥವು ಹೀಗಿರುವುದು : ಪ್ರಸಾದ-ಭಕ್ತಿ

ಮುಕ್ತಿ ಇವುಗಳಿಗೆ ಏಕಸ್ಥಾನದಲ್ಲಿ ಸಮನ್ವಯವಿದ್ದರೂ ಮುಕ್ತಿಯು ಜನ್ಯಸ್ಥಾನದಲ್ಲಿರುವುದು ಪ್ರಸಾದ ಭಕ್ತಿಗಳು ಜನಕಸ್ಥಾನದಲ್ಲಿರುವವು. (೫೦) ಪ್ರಸಾದವು ಜನಕನು, ಭಕ್ತಿಯು ಜನನಿಯು, ಈ ಜನನೀ ಜನಕರ ಸಾಮರಸ್ಯ ಭಾವದಿಂದ ಮುಕ್ತಿಕನ್ಯೆಯು ಜನಿಸುವಳು. (೫೧) ಈ ಬಗೆಯಾದ ಅರ್ಥವೇ ಮೇಲಿನ ಪದ್ಯದಲ್ಲಿ ವ್ಯಕ್ತವಾಗಿರುವುದೆಂಬುದನ್ನು ತಿಳಿದುಕೊಳ್ಳಬೇಕು.

**ಅವತಾರಿಕೆ :** ಇಂತು ಶಿವಭಕ್ತಿಯ ವೈಭವಮಂ ವಿಸ್ತರಿಸಿ, ಕರ್ಮಕಾಂಡ ಜ್ಞಾನಕಾಂಡಕ್ಕಿಂದುಪರಿಯಾದ ಘನಲಿಂಗಪದಸ್ಥರೇ ಶರಣರೆಂದು ಪೇಳುತಿರ್ದಪಂ–

**ಉತ್ಪಲಮಾಲಾವೃತ್ತಂ**

೯ ಸ್ಥೂಲಮಿದೀಗ ಸೂಕ್ಷ್ಮಮಿದು ತತ್ಪರಸಂಜ್ಞೆಯಿದೆಂದು ಪೇಳ್ವತ-
ತ್ವಾಳಿಯೊಳಾರಿಗಾವುದುಪಲಕ್ಷಣವೀಕ್ಷಣಸಾಧ್ಯಮೆಂತೆನಲ್
ಸ್ಥೂಲಮನೀಕ್ಷಿಪರ್ ಸುರರು ಸೂಕ್ಷ್ಮಮನೀಕ್ಷಿಪರಾತ್ಮಯೋಗಿಗ-
ಳ್ಮೇಲಣ ಲಿಂಗಮಂ ಶರಣರೀಕ್ಷಿಸುವರ್ ಸತತಂ ಶಿವಾಧವಾ

**ಟೀಕೆ :** ಇದೀಗ, ಸ್ಥೂಲಂ – ಸಕಲತತ್ವವು, ಇದು, ಸೂಕ್ಷ್ಮಂ – ಸಕಲ ನಿಷ್ಕಲ ತತ್ವವು, ಇದು, ತತ್ಪರಸಂಜ್ಞೆ – ಕೇವಲ ನಿಷ್ಕಲ ತತ್ವವು, ಎಂದು, ಪೇಳ್ವ – ಹೇಳುವಂಥ, ತತ್ವಾಳಿಯೊಳ್ – ತತ್ವಸಮೂಹದಲ್ಲಿ, ಉಪಲಕ್ಷಣ ವೀಕ್ಷಣಸಾಧ್ಯಂ – ಸಮೀಪದೃಷ್ಟಿಯಿಂ ಸಾಧಿಸಲ್ಪಡುವುದು, ಆರಿಗೆ – ಆವಾತಂಗೆ ಆವುದು – ಆವ ತತ್ವವು, ಎಂತೆನಲ್ – ಹೇಗೆನಲು, ಸುರರು – ದೇವತೆಗಳು, ಸ್ಥೂಲಮಂ ಈಕ್ಷಿಪರ್ – ಸಕಲ ತತ್ವಮಂ ಕಾಣ್ಬರು, ಆತ್ಮಯೋಗಿಗಳ್ – ಯೋಗಿಗಳು, ಸೂಕ್ಷ್ಮವ – ಸಕಲ ನಿಷ್ಕಲ ತತ್ವವನ್ನು, ಈಕ್ಷಿಪರ್ – ನೋಳ್ಪರು, ಸತತಂ – ಯಾವಾಗಲೂ, ಮೇಲಣ ಲಿಂಗಮಂ – ಸ್ಥೂಲಸೂಕ್ಷ್ಮಾತಿರಿಕ್ತವಾದ ನಿಷ್ಕಳಲಿಂಗವನ್ನು, ಶರಣರ್ – ಷಟ್‌ಸ್ಥಲಜ್ಞಾನಿಗಳಾದ ಶರಣರು, ಈಕ್ಷಿಪರ್ ನೋಡುವರ್. ಈ ಅರ್ಥದಲ್ಲಿ ವಾತುಳತಂತ್ರದಲ್ಲಿ ಬ್ರಹ್ಮನ ವಾಕ್ಯವು :

"ಅಸ್ಮದಾದ್ಯಮರೈರ್ದೃಶ್ಯಂ ಸ್ಥೂಲಂ ಸೂಕ್ಷ್ಮಂ ಚ ಯೋಗಿಭಿಃ |
ತತಃ ಪರಂತು ಯನ್ನಿತ್ಯಂ ಜ್ಞಾನಮಾನಂದಮವ್ಯಯಂ |
ತನ್ನಿಷ್ಠೈಸ್ತತ್ಪರೈರ್ಭಕ್ತೈರ್ದೃಶ್ಯಂ ತದ್ವ್ರತಮಾಸ್ಥಿತೈಃ" |

**ಭಾವಾರ್ಥಬೋಧಿನಿ - ೯ : ಸಕಲ, ಸಕಲನಿಷ್ಕಲ, ನಿಷ್ಕಲವೆಂದು** ಮೂರು ಬಗೆಯ ತತ್ವಗಳಲ್ಲಿ ಮೊದಲನೆಯ ಸಕಲ ತತ್ವದ ದರ್ಶನವು ಸುರರಿಗೆ ಸಾಧ್ಯವಾದುದು. ಎರಡನೆಯ ಸಕಲನಿಷ್ಕಲ ತತ್ವದ ದರ್ಶನವು ಯೋಗಿಗಳಿಗೆ ಸಾಧ್ಯ. ಇನ್ನು ಷಟ್ ಸ್ಥಲಜ್ಞಾನಿಗಳಾದ ಶರಣರಿಗೆ ನಿಷ್ಕಲತತ್ವದ (ನಿಷ್ಕಲಲಿಂಗದ) ದರ್ಶನವು ಸಾಧ್ಯವಾಗಿರುವುದು. ಎಂದರೆ - ನಿಷ್ಕಲತತ್ವವೇ ಭಾವಲಿಂಗವಾಗಿ ಶರಣರಿಗೆ ಭಾವಗ್ರಾಹ್ಯವಾಗಿರುವುದು. ಮತ್ತು ಆ ಭಾವಲಿಂಗವೇ ಮನೋಗ್ರಾಹ್ಯ ವಾಗಿ ಪ್ರಾಣಲಿಂಗವೆನಿಸುವುದು. ದೃಷ್ಟಿಗ್ರಾಹ್ಯವಾಗಿ ಇಷ್ಟಲಿಂಗವೆನಿಸುವುದು. ಈ ಇಷ್ಟ, ಪ್ರಾಣ, ಭಾವಲಿಂಗಗಳಿಗೆ ಕ್ರಮವಾಗಿ - ಸಕಲ, ಸಕಲನಿಷ್ಕಲ, ನಿಷ್ಕಲ ವೆಂದೂ ಕರೆಯಲಾಗಿದೆ. ಈ ಕಾರಣದಿಂದ ಸ್ಥೂಲಸೂಕ್ಷ್ಮತತ್ವಗಳಿಗೆ ಮೂಲ ಕಾರಣವಾದ ಪರತತ್ವದ ಸಾಕ್ಷಾತ್ಕಾರವನ್ನು ಪಡೆದ ಶರಣರಿಗೆ ಆ ಸ್ಥೂಲಸೂಕ್ಷ್ಮ ತತ್ವಗಳೂ ಸುಲಭಗ್ರಾಹ್ಯವಾಗಿರುವವೆಂಬುದೇ ಈ ಪದ್ಯದ ತಾತ್ಪರ್ಯವಿರುವುದೆಂದು ತತ್ವಜ್ಞರ ಅಭಿಪ್ರಾಯವಿರುವುದು.

## ಚಂಪಕಮಾಲಾವೃತ್ತಂ

೧೦ ತಪದ ಜಿತೇಂದ್ರಿಯತ್ವದ ವಿರಾಗದ ಯೋಗದ ಮೌನದ ವ್ರತ-  
ಪ್ರವರದ ನಿತ್ಯಕರ್ಮದ ಸಮಾಧಿಯ ಸಂಜೆಯ ಮಂತ್ರಮಾಲಿಕಾ-  
ಜಪದ ಶರೀರನಿಗ್ರಹದ ಹೋಮದ ನೇಮದ ತೀರ್ಥಯಾತ್ರೆಯಾ-  
ಕ್ಷಪಿತಸಮಾಯ ಜಾಡ್ಯದೊಳಗಿರ್ಪನೆ ಭಕ್ತಿಪರಂ ಶಿವಾಧವಾ

**ಟೀಕೆ :** ತಪದ - ಕೃಛ್ರ ಚಾಂದ್ರಾಯಣಾದಿ ತಪಸ್ಸಿನ, ಜಿತೇಂದ್ರಿಯತ್ವದ- ಪಂಚೇಂದ್ರಿಯಂಗಳ ನಿಗ್ರಹಿಸುವುವರ, ವಿರಾಗದ - ವೈರಾಗ್ಯದ, ಯೋಗದ - ಕರ್ಮ ಯೋಗದ, ಮೌನದ - ವಾಙ್ನಿಯಮದ, ವ್ರತಪ್ರವರದ - ಭಿನ್ನ ವ್ರತಸಮೂಹಂಗಳ ನಿತ್ಯಕರ್ಮದ - ಅಕರಣೇಪ್ರತ್ಯವಾಯರೂಪದ ಕರ್ಮದ, (ಮಾಡದಿರ್ದೊಡೆ ದೋಷ, ಮಾಡಿದೊಡೆ ಫಲವಿಲ್ಲವೆಂಬುದರ್ಥ) ಸಮಾಧಿಯ - ಸವಿಕಲ್ಪಕ ನಿರ್ವಿಕಲ್ಪಕ ಸಮಾಧಿಗಳ, ಸಂಜೆಯ - ಸಂಧ್ಯಾವಂದನ ಕರ್ಮದ, ಮಂತ್ರಮಾಲಿಕಾ ಜಪದ - ಸಪ್ತಕೋಟಿ ಮಹಾಮಂತ್ರಜಪದ, ಶರೀರನಿಗ್ರಹದ - ಉಪವಾಸಾದಿ ವ್ರತಗಳ, ಹೋಮದ - ಯಜ್ಞಾದಿಕರ್ಮದ, ನೇಮದ - ಪ್ರಾಣಾಯಾಮಾದಿಗಳ, ತೀರ್ಥ ಯಾತ್ರೆಯ - ಪುಣ್ಯತೀರ್ಥಗಳಂ ಚರಿಸುವುದು, ಅಕ್ಷಪಿತಸಮಾಯಜಾಡ್ಯದೊಳಗೆ, ಅಕ್ಷಪಿತ - ಎಂದೆಂದಿಗೂ ಕೆಡದಿರ್ದ, ಸಮಾಯ - ಮಾಯೆಯೊಡನೆ ಕೂಡಿದ, ಜಾಡ್ಯದೊಳಗೆ - ಜಡತ್ವದಲ್ಲಿ, ಭಕ್ತಿಪರಂ - ಶಿವಭಕ್ತಿತಾತ್ಪರ್ಯವುಳ್ಳ ಶರಣನು, ಇರ್ಪನೆ? ಇರನೆಂಬುದರ್ಥ.





**ಭಾವಾರ್ಥಬೋಧಿನಿ - ೧೦ :** ಷಟ್‌ಸ್ಥಲತತ್ವಕ್ರಿಯಾಪರನಾದ ಶರಣನು, ಕೃಚ್ಛ್ರ ಚಾಂದ್ರಾಯಣಾದಿ ತಪಗಳನ್ನೂ, ಇಂದ್ರಿಯನಿಗ್ರಹವನ್ನೂ, ಭೋಗದಲ್ಲಿ ವೈರಾಗ್ಯವನ್ನೂ, ಕರ್ಮಯೋಗವನ್ನೂ, ಮೌನವ್ರತವನ್ನೂ, ಇನ್ನು ಭಿನ್ನ ಭಿನ್ನ ವ್ರತಗಳನ್ನೂ, ನಿತ್ಯಕರ್ಮವನ್ನೂ, (ಮಾಡದಿದ್ದೊಡೆ ದೋಷವುಂಟಾಗುವುದು, ಮಾಡಿದರೆ ಯಾವ ಫಲವೂ ಇಲ್ಲವೆಂಬರ್ಥದ ವರ್ಣಾಶ್ರಮವಿಹಿತ ಕ್ರಿಯೆಯನ್ನೂ) ಸವಿಕಲ್ಪಕನಿರ್ವಿಕಲ್ಪಕ ಸಮಾಧಿಕ್ರಿಯೆಗಳನ್ನೂ, ಸಂಧ್ಯಾವಂದನವನ್ನೂ, ಬಹುವಿಧ ಮಂತ್ರಜಪಗಳನ್ನೂ, ದೇಹದಂಡನೆ, ಅಗ್ನಿಹೋತ್ರ, ಪ್ರಾಣಾಯಾಮ, ತೀರ್ಥ-ಯಾತ್ರೆ-ಇವುಗಳನ್ನೂ ಆಚರಿಸಬೇಕೆಂಬ ಭ್ರಮೆಯೊಡನೆ ಕೂಡಿದ ಅಚಲವಾದ ಮೂಢತ್ವದಲ್ಲಿ ಸಿಲ್ಕಿಕೊಂಡಿರುವನೆ ? ಇಲ್ಲವೆಂದರ್ಥ - ಎಂದರೆ-ಶರಣನ ವರ್ತನವು ಬಹುವಿಧ ಕರ್ಮಕಲಾಪಕ್ಕೆ ದೂರವಾಗಿರುವುದೆಂದು ತಾತ್ಪರ್ಯ.

## ಚಂಪಕಮಾಲಾವೃತ್ತಂ

೧೧ ಕ್ಷಯಿಸದೆ ಸರ್ವಕಾಮಿತಸಮೃದ್ಧಿ ಸಮನ್ವಿತ ತತ್ತ್ರದೈಹಿಕಾ-
ಶ್ರಯಘನಸೌಖ್ಯಮಂ ಬಿಡದೆ ಭೋಗಿಸಿ ತತ್ವನಿಜಸ್ವರೂಪನಿ-
ಶ್ಚಯಪದಮಂ ಶರೀರವಸಾನದೊಳೊಂದಿ ಮಹಾಮಹೇಶ್ವರ-
ರ್ಬಯಸದೆ ಭೋಗಮೋಕ್ಷಪರರಪ್ಪುದು ಚಿತ್ರವಲಾ ಶಿವಾಧವಾ

**ಟೀಕೆ :** ಮಹಾಮಹೇಶ್ವರರ್ - ಮಹಾನುಭಾವರಪ್ಪ ವೀರಮಾಹೇಶ್ವರರು, ಸರ್ವಕಾಮಿತಸಮೃದ್ಧಿ - ಸಮಸ್ತವಾದ ಮನೋರಥಂಗಳ ಪೆರ್ಮೆಗೆ, ಕ್ಷಯಿಸದೆ-ನಷ್ಟವಾಗದೆ, ಸಮನ್ವಿತತತ್ತ್ರದೈಹಿಕಾಶ್ರಯಘನಸೌಖ್ಯಮಂ-ಸಮನ್ವಿತ-ಕೂಡಿದಂಥ ತತ್ತ್ರತ್ - ಆಯಾ, ಐಹಿಕಾಶ್ರಯ - ಇಹಲೋಕವನ್ನಾಶ್ರಯಿಸಿದಂಥ, ಘನ-ದೊಡ್ಡಿತ್ತಾದ, ಸೌಖ್ಯಮಂ - ಸುಖವನ್ನು, ಬಿಡದೆ - ಎಡೆವಿಡದೆ, ಭೋಗಿಸಿ-ಅನುಭವಿಸಿ, ಶರೀರದ ಅವಸಾನದೊಳ್ - ದೇಹಾವಸಾನದಲ್ಲಿ, ಬಯಸದೆ - ಮೋಕ್ಷವಂ ಬಯಸದೆ, ತತ್ವನಿಜಸ್ವರೂಪ ನಿಶ್ಚಯಪದಮಂ - ತತ್ವ-ಶಿವತತ್ವದ, ನಿಜಸ್ವರೂಪ-ತನ್ನ ಸಹಜಸ್ವರೂಪದ, ನಿಶ್ಚಯಪದಮಂ - ನಿಶ್ಚಯ ಭಾವವನ್ನು, ಒಂದಿ-ಕೂಡಿ, ಭೋಗಮೋಕ್ಷಪರರ್ - ಭುಕ್ತಿಮುಕ್ತಿಗಳಲ್ಲಿ ತಾತ್ಪರ್ಯವುಳ್ಳವರು, ಅಪ್ಪುದು-ಆಗುವುದು, ಚಿತ್ರವಲಾ - ಆಶ್ಚರ್ಯವಲ್ಲವೆ ?

"ಸ್ವೇಚ್ಛಾ ವಿಗ್ರಹಿಣಸ್ಸರ್ವೇ ಸ್ವೇಚ್ಛಾಚಾರಾ ಗಣೇಶ್ವರಾಃ |
ಶಿವೇನ ಸಹತೇ ಭೋಗಾನ್ಭುಕ್ತ್ವಾ ಯಾಂತಿ ಶಿವಂ ಪದಂ"

ಎಂದಾದಿತ್ಯಪುರಾಣವುಂಟಾಗಿ, ಸಿದ್ಧಾಂತಿಗಳು ಇಂದ್ರಿಯ ವಿಕೃತಿಕರವೆಂದು ಸರ್ವ ಭೋಗವುಂ ಬಿಟ್ಟು, ಶರೀರಾವಸಾನದಲ್ಲಿ ಮೋಕ್ಷವಂ ಬಯಸುವರು. ಶರಣರು ಲಿಂಗಪ್ರಸಾದಭೋಗಿಗಳಾದ ಕಾರಣ ಇಹಲೋಕದ ಸುಖಂಗಳಂ ಬಿಡದೆ, ತಾವು ಜೀವನ್ಮುಕ್ತರಾದ ಕಾರಣ ಶರೀರಾವಸಾನದಲ್ಲಿ ಮೋಕ್ಷವಂ ಬಯಸದೆ, ನಿತ್ಯರಾಗಿರ್ಪರೆಂಬುದಭಿಪ್ರಾಯಂ.

**ಭಾವಾರ್ಥಬೋಧಿನಿ** - ೧೧ : ಮಹಾವೀರಮಾಹೇಶ್ವರರಾದ ಶರಣರು ತಮ್ಮ ಮನೋರಥಂಗಳ ಅಭಿವೃದ್ಧಿಯನ್ನು ತಡೆಗಟ್ಟದೆ, ಇಹಲೋಕದ (ಲಿಂಗಾರ್ಪಿತಕ್ಕೆ ಯೋಗ್ಯವಾದ) ಆಯಾ ಭೋಗಗಳನ್ನು ಬಿಡದೆ ಭೋಗಿಸಿ, ದೇಹಾನಂತರದಲ್ಲಿ ಮೋಕ್ಷವಾಗಬೇಕೆಂಬುದನ್ನು ಆಪೇಕ್ಷಿಸದೆ, ಶಿವನ ಸಹಜಸ್ವರೂಪವು ತಮ್ಮಲ್ಲಿರುವುದೆಂಬ ನಿಶ್ಚಯಭಾವದಿಂದಿರ್ದು, ಭೋಗಮೋಕ್ಷಗಳೆರಡನ್ನೂ ಅನುಭವಿಸುತ್ತಿರ್ಪರು. ಇದು ಆಶ್ಚರ್ಯವಲ್ಲವೆ ? ಲಿಂಗಸ್ವರೂಪಿಗಳಾಗಿಯೇ ಲಿಂಗೋಪಾಸಕರಾಗಿ, ಲಿಂಗಭೋಗೋಪಭೋಗಿಗಳಾಗಿರುವ ವೀರಶೈವರು ಸಹಜವಾಗಿಯೇ ಭುಕ್ತಿಮುಕ್ತಿಪರರಾಗಿರುವರು. ವಿಷಯಭೋಗತ್ಯಾಗವು ಮೋಕ್ಷದ ಸಾಧನವೆಂಬ ಮಾರ್ಗವನ್ನು ತ್ಯಜಿಸಿ, ಅಹಂಕಾರ ಮಮಕಾರಗಳ ತ್ಯಾಗವನ್ನು ಮಾಡಿ, ದಾಸೋಹಂಭಾವದ ಕಾಯಕದಿಂದ ಬಂದುದು ಶಿವಪ್ರಸಾದವೆಂದು ನಿಶ್ಚಯಿಸಿ, ಅದನ್ನು ಶಿವನೊಡನೆ ಶಿವಾರ್ಪಣಪೂರ್ವಕ ಭೋಗಿಸುವುದೇ ಮುಕ್ತಿಸ್ಥಿತಿಯೆಂಬುದೇ ಶರಣಮಾರ್ಗವೆಂದು ತಾತ್ಪರ್ಯ.

**ಅವತಾರಿಕೆ :** ಇಂತಪ್ಪ ಶರಣರಾಚರಿಸುವ ಷಟ್‌ಸ್ಥಲಕ್ರಮವುಂ ಪೇಳುತಿರ್ದಪಂ—

**ಉತ್ಪಲಮಾಲಾವೃತ್ತಂ**

೧೨ ಪ್ರಾಣಮುಮಂ ಶರೀರಮುಮನರ್ಥಮುಮಂ ಗುರುಲಿಂಗಜಂಗಮ-
ಶ್ರೇಣಿಗೆ ಕೊಟ್ಟು ತನ್ಮುಖಸಮಾಗತ ಶಾಂತಿಕರಪ್ರಸಾದಕ-
ಲ್ಯಾಣಸುಖಪ್ರಪೂರ್ಣಪರಿಣಾಮುವನೈದಿದವರ್ಗೆ ನಿತ್ಯನಿ-
ರ್ವಾಣಪದಂ ಬಳಿಕ್ಕುಳಿಪವರ್ಗೆ ಪರಿಭ್ರಮಣಂ ಶಿವಾಧವಾ

**ಟೀಕೆ :** ಗುರುಲಿಂಗಜಂಗಮಶ್ರೇಣಿಗೆ - ಗುರುಲಿಂಗಜಂಗಮಸಮೂಹಕ್ಕೆ, ಪ್ರಾಣಮುಮಂ ಶರೀರಮುಮಂ ಅರ್ಥಮುಮಂ - ಪ್ರಾಣಶರೀರಾರ್ಥಂಗಳನ್ನು,

ಕೊಟ್ಟು -ಸಮರ್ಪಿಸಿ, ತನ್ಮುಖಸಮಾಗತಶಾಂತಿಕರಪ್ರಸಾದಕಲ್ಯಾಣ ಸುಖಪ್ರಪೂರ್ಣ ಪರಿಣಾಮಮಂ - ತನ್ಮುಖ - ಆ ಗುರುಲಿಂಗಜಂಗಮದ ಮುಖದತ್ತಣಿಂ,ಸಮಾಗತ-ಬಂದ, ಶಾಂತಿಕರ-ಸಂಸಾರತಾಪವನಡಂಗಿಸುವ, ಪ್ರಸಾದ - ತ್ರಿವಿಧ ಪ್ರಸಾದದ, ಕಲ್ಯಾಣ -. ಮಂಗಲಸ್ವರೂಪವಾದ, ಸುಖ - ಆನಂದದಿಂದ, ಪ್ರಪೂರ್ಣ - ತುಂಬಲ್ಪಟ್ಟ, ಪರಿಣಾಮಮಂ - ತೃಪ್ತಿಯನ್ನು, ಐದಿದವರ್ಗೆ - ಪಡೆದವರ್ಗೆ, ನಿತ್ಯನಿರ್ವಾಣ ಪದಂ - ಕೇಡಿಲ್ಲದ ಮೋಕ್ಷಪದವು, ಬಳಿಕ್ಕುಳಿದವರ್ಗೆ - ಇನ್ನುಳಿದ ಆ ಸಿದ್ಧಾಂತಿಗಳ್ಗೆ, ಪರಿಭ್ರಮಣಂ - ಸಂಸಾರಚಕ್ರದಲ್ಲಿ ತಿರುಗುವುದು ತಪ್ಪದು.

**ಭಾವಾರ್ಥಬೋಧಿನಿ - ೧೨ :** ಶಿವಲಿಂಗದ ತ್ರಿವಿಧರೂಪರಾದ ಗುರುಲಿಂಗ, ಇಷ್ಟಲಿಂಗ, ಜಂಗಮಲಿಂಗವೆಂಬ ಮೂರಕ್ಕೆ ಕ್ರಮವಾಗಿ, ಶರೀರ-ಪ್ರಾಣ-ಧನ ಇವುಗಳನ್ನು ಸಮರ್ಪಿಸಿ, ಆ ಮೂವರಿಂದ ಪಡೆದ ಭವತಾಪವನ್ನು ಪರಿಹರಿಸುವ ಶುದ್ಧ-ಸಿದ್ಧ-ಪ್ರಸಿದ್ಧವೆಂಬ ಪ್ರಸಾದತ್ರಯದ ಭೋಗದಿಂದುಂಟಾಗುವ ಶುಭಸುಖದಿಂದ ತುಂಬಿದ ತೃಪ್ತಿಯನ್ನು ಪಡೆದ ಶರಣರು ನಿತ್ಯಮುಕ್ತರಾಗಿಯೇ ಇರುವರು. ಉಳಿದ ಸಿದ್ಧಾಂತಿಗಳು (ದ್ವೈತಿಗಳಾದ ಶೈವರು) ಜನನಮರಣಚಕ್ರದಲ್ಲಿ ತಿರುಗುವರು. ಶಿವಪ್ರಸಾದಭೋಗಿಗಳಾದ ಶರಣರು ಪ್ರಸಾದಕಾಯರಾಗಿರುವುದರಿಂದ ನಿತ್ಯಮುಕ್ತರಾಗಿಯೇ ಇರುವರು ಪ್ರಸಾದಭೋಗದೂರರಾಗಿರುವವರು ವಿಷಯ-ಭೋಗಿಗಳಾಗುವುದರಿಂದ ಭವಚಕ್ರದಲ್ಲಿ ತಿರುಗುತ್ತಿರುವರೆಂಬುದು ಈ ಪದ್ಯದ ತಾತ್ಪರ್ಯ.

## ಉತ್ಪಲಮಾಲಾವೃತ್ತಂ

೧೨ ಕಿಂಕರಭಾವಮಂ ಬಲಿದು ಲಿಂಗಮುಖಂ ಚರಲಿಂಗಮೆಂದು ನಿ-
ಶ್ಶಂಕತೆಯಿಂ ಸುವರ್ಣವಸನಾನ್ನಪುರಸ್ಸರವಸ್ತುವಾಹನಾ-
ಲಂಕರಣಂಗಳಂ ಸಲೆ ಸಮರ್ಪಿಸಿ ವೀರಶಿವಾಗಮೋಕ್ತ ಚಿ-
ಹ್ನಾಂಕಿತರಾದವರ್ಗೆ ಮಣಿಮಂತುಟೆ ಭಕ್ತಿಪದಂ ಶಿವಾಧವಾ

**ಟೀಕೆ :** ಕಿಂಕರಭಾವಮಂ - ದಾಸೋಹಂಭಾವವನು, ಬಲಿದು - ಧೃಢೀಕರಿಸಿ, ಚರಲಿಂಗವು - ಜಂಗಮಲಿಂಗವು, ಲಿಂಗಮುಖಂ - ಲಿಂಗಕ್ಕೆ ಮುಖವು, ಎಂದು, ನಿಶ್ಶಂಕತೆಯಿಂ - ನಿಸ್ಸಂಶಯದಿಂದ, ಸುವರ್ಣವಸನಾನ್ನಪುರಸ್ಸರವಸ್ತುವಾಹನಾಲಂಕರಣಂಗಳಂ - ಸುವರ್ಣ - ಚಿನ್ನವನ್ನು, ವಸನ - ವಸ್ತ್ರವನ್ನು,

ಅನ್ನ - ಭೋಜ್ಯವಸ್ತುವನ್ನು, ಪುರಸ್ಸರ - ಇದು ಮೊದಲಾದ, ವಸ್ತು-ಸುಗಂಧಾದಿ ವಸ್ತುಗಳನ್ನು, ವಾಹನ - ಕರಿತುರಗಾಂದೋಳಿಗಳನ್ನು, ಅಲಂಕರಣಂಗಳಂ - ಆಭರಣಂಗಳನ್ನು, ಸಲೆ - ಚೆನ್ನಾಗಿ, ಸಮರ್ಪಿಸಿ - ಕೊಟ್ಟು, ವೀರಶಿವಾಗಮೋಕ್ತ ಚಿಹ್ನಾಂಕಿತರಾದವರ್ಗೆ-ವೀರಶೈವಾಗಮೋಕ್ತಲಕ್ಷಣಲಕ್ಷಿತರಾದವರ್ಗೆ, ಮಣಿವಂತುದೆ-ನಮಸ್ಕರಿಸುವುದೇ, ಭಕ್ತಿಪದಂ - ಭಕ್ತಿಮಾರ್ಗವು.

**ಭಾವಾರ್ಥಬೋಧಿನಿ - ೧೩** : ದಾಸೋಹಂಭಾವವನ್ನು ಗಟ್ಟಿಗೊಳಿಸಿ-ಕೊಂಡು, ತಮ್ಮ ಇಷ್ಟಲಿಂಗಮುಖವೇ ಜಂಗಮವೆಂದು ನಿಸ್ಸಂಶಯದಿಂದ ತಿಳಿದು-ಕೊಂಡು, ಆ ಜಂಗಮಮೂರ್ತಿಗೆ ಧನಕನಕವಸ್ತ್ರಭೋಜನವಾಹನಾಭರಣಾದಿಗಳನ್ನು ಭಕ್ತಿಯಿಂದ ಸಮರ್ಪಿಸುತ್ತಿರಬೇಕು. ಮತ್ತು ವೀರಶೈವಾಗಮೋಕ್ತರೀತಿಯಿಂದ ಲಿಂಗಭಸಿತಾದಿಗಳಿಂದ ಶೋಭಿತರಾದವರನ್ನು ಕಂಡೊಡನೆ, ಅವರಿಗೆ ನಮಸ್ಕರಿಸ-ಬೇಕು. ಇದು ವೀರಶೈವ ಭಕ್ತಿಮಾರ್ಗವು. ೧೨-೧೩ ಪದ್ಯಗಳಿಂದ ಭಕ್ತಸ್ಥಲದ ಮುಖ್ಯ ಲಕ್ಷಣವನ್ನು ಹೇಳಿ, ಮುಂದೆ ಮಹೇಶ್ವರಸ್ಥಲದ ಲಕ್ಷಣವನ್ನು ಹೇಳುವನು—

**ಚಂಪಕಮಾಲಾವೃತ್ತಂ**

೧೪ ಪರವಧುವಂ ಪರಪ್ರವಿಣಮಂ ಪರಹಿಂಸೆಯುಮನ್ನೆವೆ ದೂರದಿಂ
ಪರಿಹರಿಸೆ ಸ್ವದೇಶಿಕನಿರೂಪಿತಮಪ್ಪ ಷಡರ್ಥಸಂಗ್ರಹಾ-
ಚರಣೆಯೊಳೇಕಲಿಂಗ ನಿಜನಿಷ್ಠೆ ಸಮಾಹಿತಮಾದೊಡಂತವೇ
ಪರಮಮಹೇಶ್ವರಸ್ಥಲದ ಲಕ್ಷಣವೃತ್ತಿಪದಂ ಶಿವಾಧವಾ

**ಟೀಕೆ** : ಪರವಧುವಂ - ಪರಸ್ತ್ರೀಯನ್ನು, ಪರಪ್ರವಿಣಮಂ - ಪರಧನವನ್ನು, ಪರಹಿಂಸೆಯುಂ - ಪರರ ಪೀಡಿಸುವುದನ್ನು, ದೂರದಿಂ ಪರಿಹರಿಸಿ - ದೂರದಲ್ಲಿ ಬಿಟ್ಟು, ಸ್ವದೇಶಿಕ ನಿರೂಪಿತಮಪ್ಪ - ತನ್ನಾಚಾರ್ಯನಿಂ ನಿರೂಪಿಸಲ್ಪಟ್ಟ, ಷಡರ್ಥಸಂಗ್ರಹಾಚರಣೆಯೊಳ್ ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕಾರ, ಸಾಧನ, ಸಾಧ್ಯಂಗಳೆಂಬ ಷಡರ್ಥಸಂಗ್ರಹಾಚರಣೆಯಲ್ಲಿ, (ಈಯರ್ಥದಲ್ಲಿ ವಾಯುತಂತ್ರ ವುಂಟು—

ಜ್ಞಾನಂ ಜ್ಞೇಯಮನುಷ್ಠೇಯಮಧಿಕಾರೋಽರ್ಥಸಾಧನಂ |
ಸಾಧ್ಯಂ ಚೇತಿ ಷಡರ್ಥಾನಾಂ ಸಂಗ್ರಹಸ್ತ್ವೇಷ ಸಂಗ್ರಹಃ ||
ಗುರೋರಧಿಗತಂ ಜ್ಞಾನಂ ಜ್ಞೇಯಂ ಪಾಶಃ ಪಶುಃ ಪತಿಃ |
ಲಿಂಗಾರ್ಚನಾದ್ಯನುಷ್ಠೇಯಂ ಭಸ್ಮಾದ್ಯಧಿಕೃತಂ ದ್ವಿಜ |
ಸಾಧನಂ ಶಿವಮಂತ್ರಾದ್ಯಂ ಸಾಧ್ಯಂ ಶಿವಸಮಾನತಾ ||
ಷಡರ್ಥಸಂಗ್ರಹಸ್ಯಾರ್ಥಜ್ಞಾನಾತ್ಸರ್ವಜ್ಞತೋಚ್ಯತೇ ||

ಇಂತೆಂಮುದಾಗಿ, ಏಕಲಿಂಗನಿಜನಿಷ್ಠೆ - ಏಕಲಿಂಗ - ಒಂದೇ ಲಿಂಗದಲ್ಲಿ, ನಿಜನಿಷ್ಠೆ - ತನ್ನ ನಿಷ್ಠೆಯು, ಸಮಾಹಿತಮಾದೊಡೆ - ಕೂಡಿದೊಡೆ, ಅಂತದೇ - ಅದು ತಾನೇ, ಪರಮಮಹೇಶ್ವರಸ್ಥಲದ - ಉತ್ಕೃಷ್ಟವಾದ ಮಹೇಶ್ವರಸ್ಥಲದ, ಲಕ್ಷಣವೃತ್ತಿಪದಂ - ಲಕ್ಷಣ - ಸ್ವರೂಪದಲ್ಲಿ, ವೃತ್ತಿ - ಪ್ರವರ್ತಿಸುವ, ಪದಂ - ಮಾರ್ಗವು.

**ಭಾವಾರ್ಥಬೋಧಿನಿ - ೧೪ :** ಪರಸ್ತ್ರೀ ಪರಧನ ಪರಪೀಡನಗಳೆಂಬಿವುಗಳನ್ನು ದೂರದಲ್ಲೇ ಬಿಟ್ಟು, ತನ್ನ ಗುರುವಿನಿಂದ ಉಪದೇಶಿಸಲ್ಪಟ್ಟ ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕಾರ, ಸಾಧನ, ಸಾಧ್ಯವೆಂಬ ಷಡರ್ಥಗಳ ಆಚರಣೆಯುಳ್ಳವನಾಗಿ, ಇಷ್ಟಲಿಂಗವೊಂದರಲ್ಲಿಯೇ ನಿಷ್ಠೆಯು ಗಟ್ಟಗೊಂಡಿರಲು ಮಹೇಶ್ವರಸ್ಥಲದ ಮಾರ್ಗವೆನಿಸುವುದು.

**ವಿಚಾರ :** ಟೀಕಾಕಾರನು ಷಡರ್ಥಸಂಗ್ರಹದ ಸ್ವರೂಪವನ್ನು ತಿಳಿಸುವುದಕ್ಕಾಗಿ ವಾಯುತಂತ್ರದ ಪ್ರಮಾಣವನ್ನು ಕೊಟ್ಟಿರುವನು. ಆ ಪ್ರಮಾಣದಲ್ಲಿ ದ್ವೈತಪರವಾದ ಪಾಶುಪತಮತಕ್ಕನುಸರಿಸಿದ ಷಡರ್ಥಗಳ ಸ್ವರೂಪವು ಉಕ್ತವಾಗಿರುವುದು. ಆ ರೀತಿಯಾಗಿ ಉಕ್ತವಾದ ಷಡರ್ಥಗಳ ಸ್ವರೂಪವನ್ನು ವೀರಮಾಹೇಶ್ವರನು ತಿಳಿದುಕೊಳ್ಳಬಹುದಾದರೂ ಮುಖ್ಯವಾಗಿ ತಾನು ಆಚರಿಸುವ ಷಟ್‌ಸ್ಥಲಾಚರಣೆಗನುಸರಿಸಿ ಷಡರ್ಥಗಳ ಸ್ವರೂಪವು ಹೀಗಿರುವದು—

ಲಿಂಗ, ಅಂಗ, ಶಕ್ತಿ, ಭಕ್ತಿ, ಹಸ್ತ, ಮುಖ, ಪದಾರ್ಥ, ಪ್ರಸಾದ-ಎಂಬ ಎಂಟು ವಿಷಯಗಳ ವಿಚಾರವು ಮುಖ್ಯ. ಈ ಎಂಟರ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಳ್ಳುವದೇ ಜ್ಞಾನ. ಈ ಎಂಟು ವಿಷಯಗಳೇ ತಿಳಿದುಕೊಳ್ಳತಕ್ಕ ಜ್ಞೇಯಗಳಾಗಿರುವವು. ಇನ್ನು ಅನುಷ್ಠಾನವೆಂದರೆ, ಆಚಾರಾದಿ ಲಿಂಗಗಳನ್ನು ಕ್ರಮವರಿತು

ಅಂಗನು ಪೂಜಿಸುವುದು. ಅಧಿಕಾರವೆಂದರೆ ಅಂಗನು ಲಿಂಗದಲ್ಲಿ ಸಮರಸವಾಗ-ಬೇಕೆಂಬ ಕಾಂಕ್ಷೆ. ಸಾಧನವೆಂದರೆ ಆಚಾರಾದಿ ಲಿಂಗಗಳಿಗೆ ಉಕ್ತವಾದ ಪದಾರ್ಥಗಳನ್ನು ಆ ಲಿಂಗಗಳಿಗೆ ಕ್ರಮವರಿತು ಅರ್ಪಿಸುವುದು. ಸಾಧ್ಯವೆಂದರೆ, ಆಚಾರಾದಿ ಲಿಂಗಮುಖದಿಂದ ಪ್ರಾಪ್ತವಾದ ಪ್ರಸಾದದ ಪ್ರಾಪ್ತಿ. ಮತ್ತು ಆ ಪ್ರಸಾದಪ್ರಾಪ್ತಿ-ಯಿಂದುಂಟಾಗುವ ಸಾಮರಸ್ಯ-ಹೀಗೆ ಷಡರ್ಥಗಳ ಸ್ವರೂಪವಿರುವುದು.

## ಉತ್ಪಲಮಾಲಾವೃತ್ತಂ

೧೫ ಲಿಂಗಮುಖಾರ್ಪಣೀಯಮಪಹ ಸರ್ವವಿಶುದ್ಧಪದಾರ್ಥಜಾತಮಂ
ಸ್ವಾಂಗವಚೋಮನಃಕರಣ ಕಾಯಕವಾಚಿಕ ಮಾನಸಕ್ರಿಯಾ-
ಸಂಗತಸಾವಧಾನ ಸುವಿವೇಕದಿನರ್ಪಿಸಿ ತತ್ಪ್ರಸಾದಮಂ
ಪಿಂಗದೆ ಭೋಗಿಪಲ್ಲಿ ಬಳಿಕಾ ಸ್ಥಲಸಿದ್ಧಿ ದಿಟಂ ಶಿವಾಧವಾ

**ಟೀಕೆ :** ಲಿಂಗಮುಖಾರ್ಪಣೀಯಮಪಹ - ಇಷ್ಟಪ್ರಾಣಭಾವವೆಂಬ ತ್ರಿವಿಧಲಿಂಗ ಮುಖಕ್ಕೆ ಸಮರ್ಪಿಸಲ್ತಕ್ಕ, ಸರ್ವವಿಶುದ್ಧ ಪದಾರ್ಥಜಾತಮಂ - ಸಮಸ್ತವಾದ ನಿರ್ಮಲ ಪದಾರ್ಥಸ್ವರೂಪವನ್ನು, ಸ್ವಾಂಗ......ವಿವೇಕದಿಂ - ಸ್ವ - ತನ್ನ ಸಂಬಂಧವಾದ, ಅಂಗವಚೋಮನಃಕರಣಂಗಳ - ತನುವಾಙ್ಮನಸ್ಸುಗಳೆಂಬ ತ್ರಿಕರಣಗಳಲ್ಲಿಯೂ, ಕಾಯಕವಾಚಿಕಮಾನಸಕ್ರಿಯಾ - ಕಾಯಕ ವ್ಯಾಪಾರ ವಾಚಿಕವ್ಯಾಪಾರ ಮಾನಸವ್ಯಾಪಾರಂಗಳೊಡನೆ, ಸಂಗತ- ಕೂಡಿದಂಥ, ಸಾವಧಾನ-ಎಚ್ಚರದೊಡನೆ ಕೂಡಿದ, ಸುವಿವೇಕದಿಂ - ಶೋಭನವಾದ ಮತಿಯಿಂದ, ಅರ್ಪಿಸಿ - ತ್ರಿವಿಧಲಿಂಗಕ್ಕರ್ಪಿಸಿ, ತತ್ಪ್ರಸಾದಮಂ - ಆ ತ್ರಿವಿಧಲಿಂಗಪ್ರಸಾದವನು, ಪಿಂಗದೆ - ತೊಲಗದೆ, ಭೋಗಿಪಲ್ಲಿ - ಅನುಭವಿಸುವಲ್ಲಿ, ಬಳಿಕ - ಆ ಮೇಲೆ ಆ ಸ್ಥಲಸಿದ್ಧಿ - ಆ ಪ್ರಸಾದಿಸ್ಥಲ ಸಿದ್ಧಿಯಪ್ಪುದು, ದಿಟಂ - ನಿಶ್ಚಯವು.

**ಭಾವಾರ್ಥಬೋಧಿನಿ** - ೧೫ : ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗವೆಂಬ ತ್ರಿವಿಧಲಿಂಗಗಳಿಗೆ ಅರ್ಪಿಸಲು ಯೋಗ್ಯವಾದ (ಶುದ್ಧ ಸಿದ್ಧ ಪ್ರಸಿದ್ಧವೆಂಬ ಹೆಸರಿನ) ಪರಿಶುದ್ಧ ಪದಾರ್ಥಸಮೂಹವನ್ನು ತ್ರಿಕರಣಗಳಾದ ಕಾಯ ವಾಙ್ಮನಗಳ ಕ್ರಿಯಾಯುಕ್ತವಾದ ಮತ್ತು ಅವಧಾನಭಕ್ತಿಯುಕ್ತವಾದ ಸುಜ್ಞಾನದಿಂದ ಆ ತ್ರಿವಿಧಲಿಂಗಗಳಿಗೆ ಅರ್ಪಿಸಿ, ಆ ಲಿಂಗಗಳ ತ್ರಿವಿಧಪ್ರಸಾದವನ್ನು ಬಿಡದೆ ಸೇವಿಸುತ್ತಿ-ರುವುದೇ ಪ್ರಸಾದಿಸ್ಥಲದ ಮಾರ್ಗವು. ಇಲ್ಲಿ ತ್ರಿವಿಧಲಿಂಗಗಳ ಅರ್ಪಣವು ಮಾತ್ರ

ಉಕ್ತವಾಗಿದ್ದರೂ ತ್ರಿವಿಧಲಿಂಗಗಳ ಭೇದಗಳಾದ ಆಚಾರಾದಿ ಷಡ್ವಿಧಲಿಂಗಗಳಿಗೆ ಅರ್ಪಿತವಾಗುವ ಗಂಧಾದಿ ಷಟ್ಪದಾರ್ಥಗಳ ಅರ್ಪಣವೂ ಅಡಕವಾಗಿರುವುದೆಂಬುದನ್ನು ಗ್ರಹಿಸಬೇಕು.

## ಉತ್ಪಲಮಾಲಾವೃತ್ತಂ

೧೬ ಆಣವಮಾಯಕಾರ್ಮಿಕಮಲತ್ರಯಸಂಗತಿದೂರಮಾಗಿ ನಿ-
ರ್ವಾಣಪದೈಕಹೇತುವಹ ಸದ್ಗುರುನಾಥ ನಿಜೋಪದೇಶದಿಂ
ಪ್ರಾಣದ ಲಿಂಗದ ಸ್ಥಿತಿ ಸಮಂಜಸಮಾಗಿ ಸುಸಾಧ್ಯಮಾದೊಡಾ
ಪ್ರಾಣವೆ ಲಿಂಗಮಾದ ಪರಮಸ್ಥಳಸಿದ್ಧಿ ಕಣಾ ಶಿವಾಧವಾ

**ಟೀಕೆ** : ನಿರ್ವಾಣ ಪದೈಕಹೇತುವಹ - ನಿರ್ವಾಣಪದ - ಮೋಕ್ಷಪದಕ್ಕೆ, ಏಕ - ಮುಖ್ಯವಾಗಿ, ಹೇತುವಹ - ಕಾರಣಮಪ್ಪ, ಸದ್ಗುರುನಾಥನಿಜೋಪದೇಶದಿಂ- ಸದ್ಗುರುನಾಥ, ಶ್ರೀಗುರುಸ್ವಾಮಿಯ, ನಿಜೋಪದೇಶದಿಂ - ಸಹಜವಾದ ದೀಕ್ಷಾತ್ರಯೋಪದೇಶದಿಂದ, ಆಣವ.........ಸಂಗತಿ - ಆಣವ - ಗರ್ಭಸಂಬಂಧವಾದ, ಅಣುರೂಪವಾದ ಮಲವು, ಮಾಯ - ಜಾತಿಸಂಬಂಧವಾದ ಮೋಹವೆಂಬ ಮಲವು, (ಮಾಯಾಸಂಬಂಧಿ - ಮಾಯಂ, "ತಸ್ಯೇದಂ" ಎಂಬ ಸೂತ್ರದಿಂದ ಸಂಬಂಧಾರ್ಥದಲ್ಲಿ 'ಅಣ್' ಪ್ರತ್ಯಯಮಂ ಮಾಳ್ಪುದು) ಕಾರ್ಮಿಕಮಲ - ಪ್ರಪ್ತಸಂಬಂಧವಾದ ಈಷಣತ್ರಯದೊಡನೆ ಕೂಡಿದ ಮಲವು, ತ್ರಯ - ಈ ಮೂರರ, ಸಂಗತಿ - ಸಂಪರ್ಕವು, ದೂರಮಾಗಿ - ಬಿಡುಗಡೆಯಾಗಿ, ಪ್ರಾಣದ ಲಿಂಗದ ಸ್ಥಿತಿ - ಪ್ರಾಣಲಿಂಗಗಳೆರಡರ ಸ್ಥಿತಿಯು, ಸಮಂಜಸಮಾಗಿ - ಸರಸವಾಗಿ, ಸುಸಾಧ್ಯಮಾದೊಡೆ - ಲೇಸಾಗಿ ಸಾಧ್ಯವಾದರೆ, ಆ ಪ್ರಾಣವೇ, ಆ ಪ್ರಾಣ ತಾನೇ, ಲಿಂಗಮಾದ - ಲಿಂಗರೂಪವಾದ, ಪರಮ - ಉತ್ಕೃಷ್ಟವಾದ ಸ್ಥಳ - ಸ್ಥಳದ ಸಿದ್ಧಿ ಕಣಾ - ಸಿದ್ಧಿಯಲ್ಲಾ. ("ಪ್ರಾಣೇಷ್ವಂತರ್ಮನಸೋ ಲಿಂಗಮಾಹುಃ" ಎಂದು ಬೃಹದಾರಣ್ಯಕಮುಂಟು)

**ಭಾವಾರ್ಥಬೋಧಿನಿ - ೧೬** : ಶ್ರೀಗುರುಸ್ವಾಮಿಯು ಮಾಡಿದ ಮೋಕ್ಷಕ್ಕೆ ಕಾರಣವಾದ ವೇಧಾ-ಮಂತ್ರ-ಕ್ರಿಯಾರೂಪವಾದ ದೀಕ್ಷಾತ್ರಯದಿಂದ ಕ್ರಮವಾಗಿ ಆಣವ-ಮಾಯ-ಕಾರ್ಮಿಕಗಳೆಂಬ ಮಲತ್ರಯವು ದೂರವಾಗಲಾಗಿ, ಪ್ರಾಣವೂ ಲಿಂಗವೂ ಎರಡೂ ಒಂದಾಗಿ (ಪ್ರಾಣವೇ ಲಿಂಗಸ್ವರೂಪವಾಗಿ) ಸಮರಸಿಸಿದ್ದಲ್ಲಿ, ಅದೇ ಶ್ರೇಷ್ಠವಾದ ಪ್ರಾಣಲಿಂಗಿಸ್ಥಲದ ಸಿದ್ಧಿಯು.

**ವಿಚಾರ: ಟೀಕಾಕಾರನು** ಆಣವ-ಮಾಯಾ-ಕಾರ್ಮಿಕವೆಂಬ ಮಲತ್ರಯ ಗಳನ್ನು ಕ್ರಮವಾಗಿ ಗರ್ಭದ-ಜಾತಿಯ-ದ್ರವ್ಯದ ಸಂಬಂಧದ ದೋಷದಿಂದುಂಟಾದವು ಗಳೆಂದು ವಿವರಿಸಿರುವುದುಂಟು; ಮಲತ್ರಯದ ವಿವರಣೆಗಳಲ್ಲಿ ಇದೊಂದು ಕ್ರಮ ವಾಗಿರುವುದು. ಆದರೆ, ಮಲತ್ರಯಸ್ವರೂಪದ ವಿವರಣೆಯು ಕೆಳಗೆ ವಿವರಿಸಿ ದಂತೆಯೂ ಇರುವುದೆಂಬುದನ್ನು ಗಮನಿಸಬೇಕು.

ಶಿವನಲ್ಲಿರುವ ಇಚ್ಛಾಜ್ಞಾನಕ್ರಿಯಾಶಕ್ತಿಗಳು ಸಂಕೋಚ ಹೊಂದುತ್ತ ತ್ರಿಮಲಗಳ ಸ್ವರೂಪವಾಗುವವೆಂದು ಹೇಳಲ್ಪಟ್ಟವೆ. ಇವುಗಳಿಂದಾವರಿಸಲ್ಪಟ್ಟ ಶಿವಸ್ವರೂಪವೇ ಸ್ವಾಂಶರೂಪವಾಗುಳ್ಳ ಜೀವರೆನಿಸಿಕೊಂಡು ಸಂಸಾರಿಜೀವಿಗಳಾಗು ವರು. ಶಿವಶಕ್ತಿಯಲ್ಲಿ ಸಂಕೋಚವಿಕಾಸಸ್ವರೂಪವು ಅನಾದಿಸಿದ್ಧವು-ಹೀಗೆ ಸಂಕೋಚವನ್ನೂ ವಿಕಾಸವನ್ನೂ ಹೊಂದುತ್ತಿರುವುದಕ್ಕೆ ಶಿವನ ಲೀಲೆಯೆಂದು ಕರೆ-ಯುವರು. ಆಣವಮಲ:- ನಾನು ಸರ್ವಾತ್ಮನು, ಸರ್ವತ್ರ ಪರಿಪೂರ್ಣನು ಎಂಬ ಪ್ರತೀತಿಗೆ ಕಾರಣವಾಗಿ, ಪರಶಿವನ ಸಂಕಲ್ಪರೂಪವಾದ ಯಾವ ಇಚ್ಛಾಶಕ್ತಿಯಿರುವು-ದೋ, ಅದು ಸಂಕೋಚವನ್ನು ಹೊಂದಿ, ಆತ್ಮನ ಸಂಸಾರಕ್ಕೆ ಕಾರಣವಾಗಿ, ಅಜ್ಞಾನಗ್ರಂಥಿಯೆಂದೂ, ಅವಿದ್ಯೆಯೆಂದೂ ಕರೆಯಿಸಿಕೊಂಡಿತು. ಇದು ಜೀವನಿಗೆ ಕಾರಣಶರೀರರೂಪದಿಂದ ಮೊದಲನೆಯ ಆವರಣವಾಗಿರುವುದು. ಇದು ಆತ್ಮನಿಗೆ ನಾನು ಶಿವನಲ್ಲವೆಂಬ ಬುದ್ಧಿಯನ್ನೂ, ತಾನಲ್ಲದ ಅಣುರೂಪವಾದ ದೇಹಾದಿಗಳು ತಾನೆಂಬ ಬುದ್ಧಿಯನ್ನೂ ಹುಟ್ಟಿಸಿ, ಆತ್ಮನನ್ನು ಅಣುರೂಪನನ್ನಾಗಿ ಮಾಡಿತು. ಆದುದರಿಂದ ಇದಕ್ಕೆ ಆಣವಮಲವೆನ್ನುವರು. ಮಾಯಾಮಲ—ಶಿವನ ಜ್ಞಾನ ಶಕ್ತಿಯು ಸಂಕೋಚವಾಗಿ ಸರ್ವಜ್ಞತೆಗೆ ಬದಲಾಗಿ - ಆತ್ಮನಲ್ಲಿ ಕಿಂಚಿಜ್ಞತೆಯ-ನ್ನುಂಟುಮಾಡಿ, ಮಾಯಾಮಲವೆನಿಸಿಕೊಂಡಿತು. ಇದೇ ಸೂಕ್ಷ್ಮಶರೀರರೂಪದಿಂದ ಜೀವನಿಗೆ ಎರಡನೆಯ ಆವರಣವಾಗಿರುವುದು. ಕಾರ್ಮಿಕಮಲ-- ಶಿವನ ಕ್ರಿಯಾ-ಶಕ್ತಿಯು ಸಂಕುಚಿತವಾಗಿ, ಸರ್ವ ಕರ್ತೃತ್ವಕ್ಕೆ ಬದಲಾಗಿ ಕಿಂಚಿತ್ ಕರ್ತೃತ್ವವನ್ನು ಹೊಂದಿ, ಜೀವನಿಂದ ಶುಭಾಶುಭಕರ್ಮಗಳನ್ನು ಮಾಡಿಸುವ ಕಾರ್ಮಿಕಮಲ ಸ್ವರೂಪವಾದುದು. ಇದರಿಂದ ಜೀವನು ಪುಣ್ಯಪಾಪಗಳನ್ನು ಮಾಡುತ್ತಾ ನಾನು ಸುಖಿಯು, ದುಃಖಿಯು ಎಂಬ ವ್ಯವಹಾರವುಳ್ಳವನಾದನು. ಇದು ಸ್ಥೂಲಶರೀರ ರೂಪದಿಂದ ಜೀವನಿಗೆ ಮೂರನೆಯ ಆವರಣವೆನಿಸುವದು.

ಹೀಗೆ ಮೂರು ಶರೀರಗಳಲ್ಲಿ ಸಂಬಂಧಿಸಿರುವ ಆಣವಾದಿ ತ್ರಿಮಲಗಳನ್ನು ಗುರುವು ವೇಧಾದಿ ದೀಕ್ಷಾತ್ರಯದಿಂದ ಪರಿಹರಿಸಿ, ಇಷ್ಟ-ಪ್ರಾಣ-ಭಾವವೆಂಬ ಲಿಂಗತ್ರಯಗಳನ್ನು ದೇಹತ್ರಯದಲ್ಲಿ ಎಂದರೆ-ದೇಹ, ಪ್ರಾಣ, ಆತ್ಮ ಈ ಮೂರರಲ್ಲಿ

ಪ್ರತಿಷ್ಠಿಸುವನು. ಆದುದರಿಂದಲೇ ಪ್ರಾಣವು ಲಿಂಗವಾಗಿ ಪರಿಣಮಿಸುವುದು. ಈ ಪ್ರಾಣಲಿಂಗಸ್ಥಿತಿಯು ದೃಢವಾಗಿ ನೆಲೆನಿಂತರೆ ಪ್ರಾಣಲಿಂಗಿಸ್ಥಲ ಸಿದ್ಧಿಯುಂಟಾಗುವದು.

## ಉತ್ಪಲಮಾಲಾವೃತ್ತಂ

೧೭ ಪಂಚವಿಧೇಂದ್ರಿಯ ಪ್ರಕೃತಿಸಂಗಸುಖಂ ತನಗೆಂಬ ಬುದ್ಧಿಯಂ
ವಂಚಿಸಿ ಲಿಂಗವೇ ಪತಿ ತದೀಯ ಮಹಾಸತಿ ತಾನೆನಿಪ್ಪ ನಿ-
ರ್ವಂಚಕಭಾವಮಂ ಬಲಿದು ಚಿತ್ಪರಿಣಾಮಪರಾನುಭೂತಿಯಿಂ-
ದಂ ಚರಿಸಲ್ ವಿಶಿಷ್ಟ ಶರಣಸ್ಥಲಸಿದ್ಧಿ ಕಣಾ ಶಿವಾಧವಾ

**ಟೀಕೆ :** ಪಂಚ……ಸುಖಂ - ಪಂಚವಿಧ - ಐದು ತೆರನಾದ, ಇಂದ್ರಿಯ-ಇಂದ್ರಿಯಗಳ, ಪ್ರಕೃತಿ-ಸ್ವಭಾವದ, ಸಂಗ-ಸಂಪರ್ಕದಿಂದಾದ, ಸುಖಂ-ಆನಂದವು, ತನಗೆ ಎಂಬ-ಹೀಗೆಂಬ, ಬುದ್ಧಿಯಂ - ಭಾವನೆಯನ್ನು, ವಂಚಿಸಿ- ವಿಸರ್ಜಿಸಿ, ಲಿಂಗವೇ ಪತಿ-ಪುರುಷನು, ತಾಂ-ತಾನು, ತದೀಯ ಮಹಾಸತಿ-ಆ ಲಿಂಗಸಂಬಂಧವಾದ ಅಧಿಕವಾದ ಸತಿಯು, ಎನಿಪ್ಪ - ಎಂದೆನಿಸುವ, ನಿರ್ವಂಚಕ ಭಾವಮಂ - ನಿಸ್ಸಂದೇಹ ಭಾವವನ್ನು, ಬಲಿದು - ದೃಢೀಕರಿಸಿ, ಚಿತ್ಪರಿ …… ಭೂತಿಯಿಂದ - ಚಿತ್ಪರಿಣಾಮ - ಚಿಚ್ಛಕ್ತಿವಿಕಾರಮಪ್ಪ, ಪರಾನುಭೂತಿಯಿಂದಂ - ಉತ್ಕೃಷ್ಟವಾದ ಜ್ಞಾನದಿಂದ, ಚರಿಸಲ್ - ಆಚರಿಸಲಾಗಿ, ವಿಶಿಷ್ಟಶರಣಸ್ಥಲಸಿದ್ಧಿ ಕಣಾ - ಮಿಗೆ ಶ್ರೇಷ್ಠವಾದ ಶರಣಸ್ಥಲದ ನಿಶ್ಚಯವಲಾ.

**ಭಾವಾರ್ಥಬೋಧಿನಿ - ೧೭ :** ಶ್ರೋತ್ರಾದಿ ಪಂಚೇಂದ್ರಿಯಂಗಳ ಮೂಲಕವಾಗಿ ಸ್ವಾಭಾವಿಕವಾಗಿ ಜನಿಸುವ ಶಬ್ದಾದಿಗಳ ಸುಖವು ತನಗೆಂಬ ಭಾವನೆಯನ್ನು ತ್ಯಜಿಸಿ, ಲಿಂಗವು ಪತಿಯು ತಾನು ಲಿಂಗದ ಸತಿಯು ಎಂಬ ನಿಶ್ಚಿತ ಭಾವನೆಯನ್ನು ಪಡೆದುಕೊಂಡು, ಸಕಲವೂ ಲಿಂಗಗತ ಚಿಚ್ಛಕ್ತಿಯ ರೂಪಾಂತರವಾದುದೆಂಬ ಪರಮಾನುಭವದಿಂದ ವರ್ತಿಸುತ್ತಿರುವುದೇ ಶರಣಸ್ಥಲದ ನಿಲವು.

ಲಿಂಗಕ್ಕೆ ಸತಿಯಾಗಿ ಶರಣಾಗತನಾದ ಶರಣನಿಗೆ ತನ್ನದೆಂಬುದಾವುದೂ ಇಲ್ಲ. ತನ್ನಿಂದ್ರಿಯಗಳು ಲಿಂಗೇಂದ್ರಿಯಗಳು-ಲಿಂಗಮುಖಗಳು-ಇಂದ್ರಿಯಸುಖವೆಲ್ಲವೂ ಲಿಂಗಕ್ಕಾಗಿ ಏರ್ಪಟ್ಟ ಲಿಂಗಸುಖವಾಗಿರುವದೆಂಬ ಭಾವನೆಯು ಶರಣನಲ್ಲಿರಬೇಕು. ಈ ಭಾವನೆಯಲ್ಲಿ ಅಹಂಕಾರ ಮಮಕಾರಗಳ ಸುಳಿವಿಲ್ಲ. ಈ ಭಾವನೆ

ಯಲ್ಲಿ ಸರ್ವಾರ್ಪಣ ಸ್ಥಿತಿಯು ತುಂಬಿಕೊಂಡಿರುವುದು. ಈ ಭಾವನೆಯು ಬಲಗೊಳ್ಳುವುದಕ್ಕಾಗಿ ಸಕಲವೂ ಲಿಂಗಗತಶಕ್ತಿಯ ಲೀಲೆಯಾಗಿರುವದೆಂಬ ಸುಜ್ಞಾನವೂ ಶರಣನಲ್ಲಿರಬೇಕೆಂಬುದೇ ಮೇಲಣ ಪದ್ಯದ ತಾತ್ಪರ್ಯವಾಗಿರುವುದು.

## ಉತ್ಪಲಮಾಲಾವೃತ್ತಂ

೧೮ ತನಗವಸಾನಭೂಮಿ ಶಿವಲಿಂಗಮದಕ್ಕವಸಾನಭೂಮಿ ತಾ-
ನೆನಿಸಿ ಬಹಿಃಪ್ರಪಂಚರಚನಾಕ್ರಿಯೆಯಂ ನೆರೆ ಬಿಟ್ಟು ಚಿತ್ಪರಾ-
ಣ್ವನುಭವದಿಂದಹಂ ತ್ವಮಿತಿ ಶಬ್ದವಿಭೇದವಡಂಗಿ ತೋರ್ಪೊಡಾ-
ತನೆ ಪರಮೈಕ್ಯ ನಿಷ್ಕಳಮಹಾಸ್ಥಲಯುಕ್ತಿವಿದಂ ಶಿವಾಧವಾ

**ಟೀಕೆ :** ತನಗೆ - ಶರಣನೆನಿಸುವ ತನಗೆ, ಅವಸಾನಭೂಮಿ - ನಿಲುಕಡೆಯ ಸ್ಥಾನವು, ಶಿವಲಿಂಗಂ - ಶಿವಲಿಂಗವು, ಅದಕ್ಕೆ - ಆ ಶಿವಲಿಂಗಕ್ಕೆ, ಅವಸಾನ ಭೂಮಿ - ನಿಲುಕಡೆಯ ಸ್ಥಾನವು, ತಾಂ, ಎನಿಸಿ - ಶರಣ ತಾನೆ ಎನಿಸಿ, ಬಹಿಃ ಪ್ರಪಂಚರಚನಾಕ್ರಿಯೆಯಂ - ಬಾಹ್ಯಪ್ರಪಂಚವ ನಿರ್ಮಿಸುವ ವ್ಯಾಪಾರವನು, ನೆರೆಬಿಟ್ಟು - ನಿರ್ವಾಸನೆಯಪ್ಪಂತೆ ಬಿಟ್ಟು, ಚಿತ್ ...... ಅನುಭವದಿಂದೆ - ಚಿತ್-ಜ್ಞಾನದಿಂ, ಪರ - ಉತ್ಕೃಷ್ಟವಾದ ಅಣು - ಸೂಕ್ಷ್ಮವಾದ, ಅನುಭವದಿಂದೆ-ಸ್ವರೂಪಸಾಕ್ಷಾತ್ಕಾರದಿಂದ, ಅಹಂತ್ವಮಿತಿ - ನಾನು ನೀನೆಂಬ, ಶಬ್ದವಿಭೇದಂ-ಶಬ್ದಭೇದವು, ಅಡಂಗಿ - ಲೀನವಾಗಿ, ತೋರ್ಪೊಡೆ ಕಾಣಿಸಿದೊಡೆ, ಆತನೆ - ಅವನು ತಾನೇ, ಪರಮ ...... ವಿದಂ - ಪರಮ - ಉತ್ಕೃಷ್ಟವಾದ ಮಹಾಲಿಂಗದಲ್ಲಿ, ಐಕ್ಯ - ಭೇದವಿಲ್ಲದ, ನಿಷ್ಕಳ – ಕಳಾರಹಿತವಾದ, ಮಹಾಸ್ಥಲ – ಅಧಿಕವಾದ ಸ್ಥಲದ, ಯುಕ್ತಿವಿದಂ – ಸಂಬಂಧವನು ಬಲ್ಲಾತನು.

**ಭಾವಾರ್ಥಬೋಧಿನಿ – ೧೮ :** ತನಗೆ ಶಿವಲಿಂಗವೂ, ಶಿವಲಿಂಗಕ್ಕೆ ತಾನೂ ಪರಸ್ಪರವಾಗಿ, ಅಂತಿಮವಾದಾಶ್ರಯ ಸ್ಥಾನವೆಂದು ತಿಳಿದು, ಲಿಂಗಾತಿರಿಕ್ತವಾದ ಬಾಹ್ಯಪ್ರಪಂಚವನ್ನು ನಿರ್ಮಿಸುವ ವ್ಯವಹಾರದ ವಾಸನೆಯುಂಟದಂತೆ ಆ ವ್ಯವಹಾರ ವನ್ನು ತ್ಯಜಿಸಿ, ಜ್ಞಾನಕ್ಕಿಂತಲೂ ಮೇಲಿನದಾದ ಮತ್ತು ಸೂಕ್ಷ್ಮವಾದ ಲಿಂಗಾನು-ಭವರೂಪ ಸ್ವರೂಪ ಸಾಕ್ಷಾತ್ಕಾರದಿಂದ ನಾನು (ಅಂಗ) ನೀನು (ಲಿಂಗ) ಎಂಬ ಶಬ್ದಭೇದವಡಗಿರುವುದೇ ಐಕ್ಯಸ್ಥಲದ ಮಾರ್ಗವಾಗಿರುವುದು. (ಲಿಂಗಕ್ಕೆ ಅಂಗದಲ್ಲಿ, ಅಂಗನಿಗೆ ಲಿಂಗದಲ್ಲಿ ನಿತ್ಯಸಂಬಂಧದ ಆಶ್ರಯವಿರುವುದು - ಅಂಗನು ಷಟ್‌ಸ್ಥಲಾ-ಚರಣೆಯಿಂದ ಪಡೆದ ಲಿಂಗಾನುಭವದಿಂದ ಲಿಂಗಸ್ವರೂಪಿಯಾಗುವನು. ಆಗ

ಅಂಗ - ಲಿಂಗವೆಂಬ ಭೇದವಡಗುವುದು - ಇದೇ ಐಕ್ಯಸ್ಥಲದ ವರ್ತನವೆಂದು ಮೇಲಿನ ಪದ್ಯದ ತಾತ್ಪರ್ಯವಿರುವುದು.)

**ಅವತಾರಿಕೆ** : ಇಂತಪ್ಪ ಷಟ್‌ಸ್ಥಲಾಚರಣಯುಕ್ತನಾದ ಶರಣನ ಷಡಿಂದ್ರಿಯಗಳಲ್ಲಿ ಲಿಂಗಸಂಬಂಧವಿರಲಾಗಿ, ಆತಂಗೆ ಭೌತಿಕವಾದ ದೇಹೇಂದ್ರಿಯಗಳಿಲ್ಲವೆಂದು ಪೇಳುತ್ತಿರ್ದಪಂ—

## ಉತ್ಪಲಮಾಲಾವೃತ್ತಂ

೧೯ ಆಚರಣಾದಿಲಿಂಗ ಗುರುಲಿಂಗ ಶಿವಾಹ್ವಯಲಿಂಗ ಜಂಗಮಾ-
ಖ್ಯೋಚಿತಲಿಂಗ ನಿರ್ಮಳನಿರರ್ಗಳನಿಶ್ಚಲ ಮುಕ್ತಿದ ಪ್ರಸಾ-
ದಾಚಳಲಿಂಗ ನಿಷ್ಕಳಮಹಾಘನಲಿಂಗ ಮಯೇಂದ್ರಿಯ ಪ್ರಭಾ-
ಸೂಚಿತ ಷಟ್‌ಸ್ಥಲಾತ್ಮಕ ಶರೀರಧರಂ ಶರಣಂ ಶಿವಾಧವಾ

**ಟೀಕೆ :** ಆಚರಣಾದಿ ...... ಶರೀರಧರಂ - ಆಚರಣಾದಿಲಿಂಗ - ಸರ್ವತತ್ವಂಗಳ್ಗಾಧಾರವಾದ ಲಿಂಗವು, (ಆಚಾರಲಿಂಗ) ಗುರುಲಿಂಗ - ಗುರುಲಿಂಗವು ಶಿವಾಹ್ವಯಲಿಂಗ - ಶಿವನೆಂಬ ಪೆಸರುಳ್ಳ ಲಿಂಗವು, ಜಂಗಮಾಖ್ಯೋಚಿತಲಿಂಗ - ಜಂಗಮನೆಂಬ ಪೆಸರ್ಗೆ ಯೋಗ್ಯವಾದ ಲಿಂಗವು, ನಿರ್ಮಳ ...... ದಾಚಳಲಿಂಗ - ನಿರ್ಮಳ-ಸ್ವಚ್ಛವಾದ, ನಿರರ್ಗಳ – ಎಡೆತಡೆಯಿಲ್ಲದ, ನಿಶ್ಚಲ – ಚಲನೆಯಿಲ್ಲದ, ಮುಕ್ತಿದ-ಮೋಕ್ಷಪ್ರದವಾದ, ಪ್ರಸಾದ – ಪ್ರಸಾದವೆಂಬ, ಅಚಳಲಿಂಗ – ಸ್ಥಿರವಾದ ಲಿಂಗವು, ನಿಷ್ಕಳಮಹಾಲಿಂಗ – ಕಲಾತೀತಮಪ್ಪ ಪೂಜ್ಯವಾದ ಸರ್ವೋತ್ಕೃಷ್ಟ ಲಿಂಗವು, (ಮಹಾಲಿಂಗ) ಮಯ – ಇಂತಿಪ್ಪಲಿಂಗಗಳ ಸ್ವರೂಪವಾದ, ಇಂದ್ರಿಯ – ಷಡಿಂದ್ರಿಯಂಗಳ, ಪ್ರಭಾ – ಬೆಳಗಿನಿಂ, ಸೂಚಿತ – ತೋರಿಸಲ್ಪಟ್ಟ, ಷಟ್‌ಸ್ಥಲಾತ್ಮಕ– ಷಟ್‌ಸ್ಥಲ ಸ್ವರೂಪವಾದ, ಶರೀರ – ಶರೀರವನು, ಧರಂ – ಧರಿಸಿವಾತನೇ, ಶರಣಂ – ಶರಣನೆನಿಸುವನು.

**ಭಾವಾರ್ಥಬೋಧಿನಿ - ೧೯ :** ನಾಶಿಕ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯವೆಂಬ ಷಡಿಂದ್ರಿಯಗಳಲ್ಲಿ ಕ್ರಮವಾಗಿ - ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಇವು ೬ ನೆಲೆಸಿರುವುದರಿಂದ ಆ ಷಲ್ಲಿಂಗಗಳ ಬೆಳಗಿಂದ ತುಂಬಿದ ಭಕ್ತಾದಿಷಟ್‌ಸ್ಥಲ ಸ್ವರೂಪವುಳ್ಳ ಶರೀರವನ್ನು

ಧರಿಸಿದಾತನೇ ಶರಣನು. ಆದುದರಿಂದ ಶರಣನಿಗೆ ಭೌತಿಕ ಶರೀರವಿಲ್ಲವೆಂದು ತಾತ್ಪರ್ಯ.

### ಉತ್ಪಲಮಾಲಾವೃತ್ತಂ

೨೦ ಭಾಕ್ತಿಕಮುಖ್ಯ ಷಟ್‌ಸ್ಥಲಸಮಾಚಾರಣಾಮಲಯೋಗಮಾರ್ಗಸಂ-
ಪ್ರೋಕ್ತ ವಿಚಾರಸಾರ ಪರಿಣಾಮ ಮಹತ್ತರ ಸೌಖ್ಯಸಿದ್ಧಿಯಿಂ
ಮುಕ್ತಿಪದಂ ಸ್ವಭಾವಪದಮಾಗಿ ವಿರಾಜಿಪನಯ್ಯ ಸದ್ಗುರು-
ಪ್ರೋಕ್ತರಹಸ್ಯವಾಕ್ಯ ಪರಮಾರ್ಥವಿದಂ ಶರಣಂ ಶಿವಾಧವಾ

**ಟೀಕೆ :** ಸದ್ಗುರು ……… ವಿದಂ ಸದ್ಗುರು – ಶ್ರೀ ಗುರುಸ್ವಾಮಿಯಿಂ- ಪ್ರೋಕ್ತ – ಹೇಳಲ್ಪಟ್ಟ, ರಹಸ್ಯ – ಗೋಪ್ಯವಾದ, ವಾಕ್ಯ–ನಿರೂಪದ, ಪರಮಾರ್ಥ- ನಿಶ್ಚಯವನು, ವಿದಂ – ಬಲ್ಲಂಥ, ಶರಣಂ – ಶರಣನು, ಭಾಕ್ತಿಕ……ಸಿದ್ಧಿಯಿಂ- ಭಾಕ್ತಿಕ – ಭಕ್ತಿಸ್ಥಲವೇ, ಮುಖ್ಯ – ಮೊದಲಾದ, ಷಟ್‌ಸ್ಥಲ – ಷಟ್‌ಸ್ಥಲಂಗಳನ್ನು, ಸಮಾಚರಣ – ಚೆನ್ನಾಗಿ ಆಚರಿಸುವುದರಿಂದ, ಅಮಲ – ನಿರ್ಮಲವಾದ, ಯೋಗ – ಶಿವಯೋಗದ, ಮಾರ್ಗ ನಡೆವಳಿಕೆಯಿಂ, ಸಂಪ್ರೋಕ್ತ – ಚೆನ್ನಾಗಿ ಪೇಳಲ್ಪಟ್ಟ, ವಿಚಾರ – ವಿವೇಕದಲ್ಲಿ, ಸಾರ – ಶ್ರೇಷ್ಠವಾದ, ಪರಿಣಾಮ – ಪರಿಣಮಿಸುತಿರ್ಪ, ಮಹತ್ತರ – ಅಧಿಕತರವಾದ, ಸೌಖ್ಯ – ಆನಂದದ, ಸಿದ್ಧಿಯಿಂ- ಪಡೆವುದರಿಂದ, ಮುಕ್ತಿಪದಂ – ಮೋಕ್ಷಮಾರ್ಗವೇ, ಸ್ವಭಾವಪದಮಾಗಿ–ಸಹಜ ಮಾರ್ಗವಾಗಿ, ವಿರಾಜಿಸುತಿರ್ಪನಯ್ಯಾ – ಒಪ್ಪುತ್ತಿರ್ಪನಲಾ.

**ಭಾವಾರ್ಥಬೋಧಿನಿ - ೨೦ :** ಸದ್ಗುರುವು ಬೋಧಿಸಿದ ರಹಸ್ಯವಾಕ್ಯಗಳ ಪರಮಾರ್ಥವನ್ನು ತಿಳಿದ ಶರಣನು, ಭಕ್ತಾದಿಯಾದ ಷಟ್‌ಸ್ಥಲಗಳ ಆಚರಣದಿಂದುಂಟಾದ ಶಿವಯೋಗದ ( ಲಿಂಗಾಂಗಸಂಗದ ) ಮಾರ್ಗದಲ್ಲಿ ಉಕ್ತವಾದ ಜ್ಞಾನದಲ್ಲಿ ಪರಿಣಮಿಸುವ ಮಹತ್ತರಾನಂದದ ಸಿದ್ಧಿಯನ್ನು ಪಡೆಯುವುದರಿಂದ ಆತನಿಗೆ ಮೋಕ್ಷಮಾರ್ಗವು ಸಹಜಮಾರ್ಗವಾಗಿ ವಿರಾಜಿಸುವುದು. (ಷಟ್‌ಸ್ಥಲಾ- ಚರಣಸಂಪನ್ನನಾದ ಲಿಂಗಾಂಗಯೋಗಿಯು ಸಹಜಮುಕ್ತನಾಗಿ ಶೋಭಿಸುವನೆಂದು ತಾತ್ಪರ್ಯ)

## ಚಂಪಕಮಾಲಾವೃತ್ತಂ

೨೧ ಪರಮಷಡಂಗಯೋಗನಿರವದ್ಯನಿರರ್ಗಳಮಾರ್ಗದೊಳ್ಮನೋ
ಹರವಹನೈಷ್ಠಿಕಾಚರಣೆ ಶಂಕೆಯನೊಂದದೆ ಸಮ್ಯಗುತ್ತರೋ
ತ್ತರಕಣಯುಂಗಳೊಳ್ ಸಲೆ ಸಮಾಹಿತಮಾಗಿ ವಿರಾಜಿಸಿರ್ಪುದೊಂ
ದರಿದೆ ಗುರೂಪದೇಶವಚನಾನುಭವಾಗಮದೊಳ್ ಶಿವಾಧವಾ

**ಟೀಕೆ :** ಪರಮ......ಮಾರ್ಗದೊಳ್ - ಪರಮ - ಉತ್ಕೃಷ್ಟವಾದ, ಷಡಂಗಯೋಗ - ಷಟ್‌ಸ್ಥಲಯೋಗದಿಂದ ನಿರವದ್ಯ - ದೋಷರಹಿತವಾದ, ನಿರರ್ಗಳ - ನಿರಂಕುಶವಾದ, ಮಾರ್ಗದೊಳ್ - ದಾರಿಯಲ್ಲಿ, ಮನೋಹರವಹ - ಮಂಜುಳವಾದ, ನೈಷ್ಠಿಕಾಚರಣೆ - ಶರಣನ ನೈಷ್ಠಿಕಾಚರಣೆಯು, ಶಂಕೆಯನೊಂದದೆ-ಸಂದೇಹವಂ ಪೊರ್ದದೆ, ಸಮ್ಯಗುತ್ತರೋತ್ತರಕಣಯುಂಗಳೊಳ್ - ಸಮ್ಯಕ್ - ಚೆನ್ನಾಗಿ, ಉತ್ತರೋತ್ತರಕಣಯುಂಗಳೊಳ್ - ಉತ್ತರೋತ್ತರ ಮಾರ್ಗಂಗಳಲ್ಲಿ, ("ಕಣಯೋ ಮಾರ್ಗಣೇ ಮಾರ್ಗೇಮುರೀಜ್ಯಾಮರ್ಥನಿಜ್ಜಯೇ" ಎಂದು ವಿಶ್ವ ಪ್ರಕಾಶಿಕೆಯುಂಟು) ಸಲೆ - ಚೆನ್ನಾಗಿ, ಸಮಾಹಿತಮಾಗಿ-ಕೂಡಿ, ವಿರಾಜಿಸಿರ್ಪುದು-ಒಪ್ಪುತ್ತಿರ್ಪುದು, ಒಂದು - ಇದು ತಾನೊಂದು, ಗುರೂ...... ದೊಳ್...... ಗುರೂಪದೇಶ - ಶ್ರೀಗುರುನಿರೂಪದ, ವಚನ-ವಾಕ್ಯದ, ಅನುಭವ-ಜ್ಞಾನಾನುಭವ ದಲ್ಲಿಯೂ, ಆಗಮದೊಳ್ - ಶಿವಾಗಮಂಗಳಲ್ಲಿಯೂ, ಅರಿದೆ-ಜ್ಞೋದ್ಯವೆ ? ಜ್ಞೋದ್ಯವಲ್ಲವೆಂಬುವರ್ಥ.

**ಭಾವಾರ್ಥಬೋಧಿನಿ - ೨೧ :** ಶ್ರೇಷ್ಠವಾದ ಷಟ್‌ಸ್ಥಲದ ಲಿಂಗಾಂಗ-ಯೋಗದ ನಿರ್ದೋಷವೂ ನಿರಾತಂಕವೂ ಆದ ದಾರಿಯಲ್ಲಿ ಚಿತ್ತಾಕರ್ಷಕವಾದ ನಿಷ್ಠಾಪೂರ್ವಕಾಚರಣೆಯು ನಿಸ್ಸಂಶಯವಾಗಿ, ಭಕ್ತಾದ್ಯುತ್ತರೋತ್ತರಸ್ಥಲಮಾರ್ಗ-ಗಳಲ್ಲಿ ಚೆನ್ನಾಗಿ ಕೂಡಿ, ವಿರಾಜಿಸುವ ಬಗೆಯು ಗುರೂಪದೇಶಲಬ್ಧವಾದ ಅನುಭವ ದಲ್ಲಿಯೂ ಶಿವಾಗಮಂಗಳಲ್ಲಿಯೂ ವೇದ್ಯವಾಗುವುದು ಅರಿದಲ್ಲ. (ಈ ಪದ್ಯದ ಅರ್ಥವು ಅಸ್ಪಷ್ಟವೆಂದು ಕೆಲವರು ಶಂಕಿಸುವರು.)

## ಉತ್ಪಲಮಾಲಾವೃತ್ತಂ

೨೧ ಗೌರವಲೈಂಗಿಕಾದಿ ನಿಯಮವ್ರತಧರ್ಮವೆನಿಪ್ಪ ದರ್ಪಣ
ದ್ವಾರದೆ ನಿಟ್ಟಿಸಲ್ಮಿಗೆ ಪರಿಸ್ಫುಟಮಾದ ನಿಜಸ್ವರೂಪ ವಿ
ಸ್ತಾರಮತೀವಶೋಭೆವಡೆದುನ್ನತಿಯಿಂ ಪ್ರತಿಬಿಂಬಿಸುತ್ತಮಿ
ರ್ಪಾ ರಮಣೀಯಭಾವವೆ ಕಣಾ ಪರತತ್ವಪದಂ ಶಿವಾಧವಾ

**ಟೀಕೆ :** ಗೌರವ......ವೆನಿಪ್ಪ - ಗೌರವ - ಗುರುಸಂಬಂಧವಾದ, ಲೈಂಗಿಕ- ಲಿಂಗಸಂಬಂಧವಾದ, ಆದಿ - ಇವು ಮೊದಲಾದ ಜಂಗಮ ಪಾದೋದಕ ಪ್ರಸಾದ ಭಕ್ತಿಸಂಬಂಧವಾದ, ನಿಯಮವ್ರತಧರ್ಮವೆನಿಪ್ಪ – ನಿಯಮ – ಕಟ್ಟಿನ, ವ್ರತ - ವ್ರತಂಗಳ, ಧರ್ಮವೆನಿಪ್ಪ - ಆಚರಣೆಯೆನಿಸುವ, ದರ್ಪಣದ್ವಾರದಿಂ - ಕೈಪಿಡಿಯ ಬಾಗಿಲಲ್ಲಿ, ನಿಟ್ಟಿಸಲ್ – ನೋಡಲಾಗಿ, ಮಿಗೆ ಪರಿಸ್ಫುಟಮಾದ – ಅತ್ಯಂತ ವ್ಯಕ್ತವಾದ, ನಿಜಸ್ವರೂಪ ವಿಸ್ತಾರಂ - ಸ್ವಸ್ವರೂಪಸಾಕ್ಷಾತ್ಕಾರದ ಚಿತ್ತಾರವು, ಅತೀವ ಶೋಭೆವಡೆದು - ಮಿಗಿಲಾಗಿ ಕಾಂತಿವೆತ್ತು, ಉನ್ನತಿಯಿಂ – ಪೆರ್ಮೆಗೆಯಿಂ, ಪ್ರತಿಬಿಂಬಿಸುತ್ತಮಿರ್ಪ – ಮಾರ್ಪೊಳೆವುತ್ತಿರ್ಪ, ಆ ರಮಣೀಯ ಭಾವವೆ – ಆ ರಂಜಿಸುತ್ತಿರ್ಪ ಭಾವವೇ, ಪರತತ್ವಪದಂ ಕಣಾ – ಶಿವತತ್ವವಲ್ಲವೆ ?

**ಭಾವಾರ್ಥಬೋಧಿನಿ - ೨೧ :** ಗುರು-ಲಿಂಗ-ಜಂಗಮ-ಪಾದೋದಕ-ಪ್ರಸಾದಾದಿ ವಿಷಯಗಳಲ್ಲಿ ಭಕ್ತಿಯಿಂದ ನಿಯತವ್ರತರಾಗಿ ಆಚರಿಸುವ ಧರ್ಮವೆಂಬ ಕನ್ನಡಿಯ ಮೂಲಕವಾಗಿ ನೋಡುವುದರಿಂದ ಸ್ವಸ್ವರೂಪಸಾಕ್ಷಾತ್ಕಾರವಾಗುವುದಾವುದುಂಟೋ; ಆ ರಮಣೀಯವಾದ ಪ್ರತಿಬಿಂಬಭಾವವೇ ಶಿವತತ್ವವಾಗಿರುವುದು. ಶರಣರ ನಿಜಾಚರಣೆಯೆಂಬ ಕನ್ನಡಿಯಲ್ಲಿ ಅವರ ಮನೋಹರವಾದ ಲಿಂಗರೂಪವು ಮಾರ್ಪೊಳೆಯುವುದು. ಅದೇ ಶಿವತತ್ವವಲ್ಲವೆ ? ಎಂಬುದಿಲ್ಲಿ ತಾತ್ಪರ್ಯ.

## ಚಂಪಕಮಾಲಾವೃತ್ತಂ

೨೨ ಮುಕುರವನೀಕ್ಷಿಪಂಗನೆಯ ಬುದ್ಧಿಯದೇಂ ವರರೂಪಹಾವಭಾ-
ವಕಲಿತ ವಿಭ್ರಮಾಪ್ತನಿಜಮಂಗಳ ಮೂರ್ತಿಯನೀಕ್ಷಿಪಲ್ಲಿಯೋ
ಮುಕುರವನೇ ನಿರೀಕ್ಷಿಪೆಡೆಯಲ್ಲಿಯೊ ತನ್ನನೆ ನೋಳ್ಪ ಕೈಸೆ ಲೈಂ
ಗಿಕನಿಯಮಾರ್ಚನಾನುಭವದರ್ಪಣದೋಳ್ ಶರಣಂ ಶಿವಾಧವಾ

**ಟೀಕೆ** : ಮುಕುರವಂ – ಕನ್ನಡಿಯನ್ನು, ಈಕ್ಷಿಪ – ನೋಡುವ, ಅಂಗನೆಯ - ಸ್ತ್ರೀಯ, ಬುದ್ಧಿ – ಭಾವವು, ಅದೇಂ - ಅದೇನು, ವರರೂಪ...... ಮೂರ್ತಿಯಂ - ವರ – ಶ್ರೇಷ್ಠವಾದ, ರೂಪ – ಸೌಂದರ್ಯದ, ಹಾವ - ಮುಖವಿಕಾಸದಿಂದ, ಭಾವ – ಚಿತ್ತಸಂಭ್ರಮದಿಂದ, ಕಲಿತ – ಕೂಡಿದ, ವಿಭ್ರಮ–ಪುರ್ಬಿನ ವಿಲಾಸದಿಂದ, ಆಪ್ತ – ಎಯ್ದಲ್ಪಟ್ಟ, ನಿಜ – ಸ್ವಕೀಯವಾದ, ಮಂಗಳ ಮೂರ್ತಿಯಂ - ಚೆಲ್ವಿಕೆಯನುಳ್ಳ ಪ್ರತಿಬಿಂಬವನ್ನು, ಈಕ್ಷಿಪಲ್ಲಿಯೊ – ನೋಡುವೆಡೆಯಲ್ಲಿಯೊ ? ಮುಕುರವನೇ – ಕನ್ನಡಿಯನ್ನೇ, ನಿರೀಕ್ಷಿಪೆಡೆಯಲ್ಲಿಯೊ – ನೋಡುವೆಡೆಯಲ್ಲಿಯೊ ? ತನ್ನನೆ - ತನ್ನನ್ನೇ, ನೋಡುವಳ್ಳೆಸೆ - ನೋಡುವಳಷ್ಟೆ? ಹಾಗೆ, ಲೈಂಗಿಕ......ದರ್ಪಣದೋಳ್ – ಲೈಂಗಿಕ ಲಿಂಗಸಂಬಂಧವಾದ, ನಿಯಮ – ಕಟ್ಟಿನ, ಅರ್ಚನ – ಪೂಜೆಯ, ಅನುಭವ – ಅನುಭಾವವೆಂಬ, ದರ್ಪಣದೋಳ್ – ಕನ್ನಡಿಯಲ್ಲಿ, ಶರಣಂ – ಶಿವಶರಣನು, ಸ್ವಸ್ವರೂಪವನೆ ನೋಡುತ್ತಿರ್ಪನು.

**ಭಾವಾರ್ಥಬೋಧಿನಿ . ೨೩** : ಕನ್ನಡಿಯನ್ನು ನೋಡುವ ಸ್ತ್ರೀಯ ಭಾವನೆಯು, ತನ್ನ ಲಾವಣ್ಯದಿಂದ ಕೂಡಿದ ಮುಖವಿಕಾಸಾದಿಗಳಿಂದ ಬೆರೆತ ಮಂಗಳರೂಪವನ್ನು ನೋಡಿಕೊಳ್ಳುವುದರಲ್ಲಿರುವುದಲ್ಲದೆ, ಕನ್ನಡಿಯನ್ನು ನೋಡುವುದರಲ್ಲಿರುವುದಿಲ್ಲ. ಅದರಂತೆ ಶಿವಶರಣನು ತನ್ನ ನಿಯತವಾದ ಲಿಂಗಾರ್ಚನಾನುಭವದರ್ಪಣದಲ್ಲಿ ಸ್ವಸ್ವರೂಪವನ್ನೇ ನೋಡಿಕೊಳ್ಳುವ ಭಾವವುಳ್ಳವನಾಗಿರುವನು. ಲಿಂಗಾರ್ಚನದಿಂದುಂಟಾಗುವ ಲಿಂಗಾನುಭವದ ಪ್ರತಿಬಿಂಬವೇ ಶರಣನೆಂದು ತಾತ್ಪರ್ಯ.

## ಉತ್ಪಲಮಾಲಾವೃತ್ತಂ

೨೪ ನೋಡದ ಮುನ್ನ ದರ್ಪಣದ ಭಾವಮದುಂಟು ವಿಭ್ರಮಂ-
ಗೂಡಿ ವಿರಾಜಿಸುತ್ತಭಿಮುಖಾಸ್ಪದಮಾದ ನಿಜಸ್ವರೂಪಮಂ
ನೋಡಿದ ನಂತರಂ ಮರಳಿ ದರ್ಪಣಭಾವಮದುಂಟೆ ತತ್ವಮಂ
ನೋಡದ ಮುನ್ನ ಮಾಯೆ ಬಳಿಕೆಲ್ಲಿಯ ಮಾಯೆ ಬಿಡಾ ಶಿವಾಧವಾ

**ಟೀಕೆ** : ನೋಡದ ಮುನ್ನ - ಕನ್ನಡಿಯನ್ನು ನೋಡುವುದರಿಂದ ಮೊದಲು, ಅದು ದರ್ಪಣಭಾವಂ - ಕನ್ನಡಿಯೆಂಬ ಆ ಭಾವನೆಯುಂಟು, ವಿಭ್ರಮಂಗೂಡಿ

ವಿಲಾಸದೊಡನೆ ಕೂಡಿ, ವಿರಾಜಿಸುತ್ತ - ಒಪ್ಪುತ್ತ, ಅಭಿಮುಖಾಸ್ಪದಮಾದ - ತನಗಿದಿರಾದ, ನಿಜಸ್ವರೂಪಮಂ - ತನ್ನ ಸೌಂದರ್ಯವನ್ನು, ನೋಡಿದನಂತರಂ - ನೋಡಿದ ಬಳಿಕ, ಮರಳಿ - ಮತ್ತೆ, ಅದು ದರ್ಪಣಭಾವಂ - ಆ ಕನ್ನಡಿಯೆಂಬ ಭಾವನೆಯುಂಟೆ? ಇಲ್ಲವೆಂಬರ್ಥ. ಹಾಗೆ, ತತ್ವಮಂ - ಸ್ವರೂಪಮಂ, ನೋಡದ ಮುನ್ನ - ಕಾಣ್ಬುವರಿಂ ಮೊದಲು, ಮಾಯೆ - ಇದಿರಿಟ್ಟು ಮಾಳ್ಪ ಕ್ರಿಯಾಚರಣೆಯು, ಉಂಟು. ಬಳಿಕ - ಸ್ವಸ್ವರೂಪಸಾಕ್ಷಾತ್ಕಾರವಾದನಂತರವಲ್ಲಿ, ಎಲ್ಲಿಯು ಮಾಯೆ - ಕ್ರಿಯಾಚಾರವೆಲ್ಲಿಯುದು, ಬಿಡಾ - ತೆಗೆ, "ನ ಚ ಲಿಂಗಂ ನ ಚ ಕ್ರಿಯಾ" ಎಂದು ವಾ

**ಭಾವಾರ್ಥಬೋಧಿನಿ - ೨೪ :** ಸ್ತ್ರೀಗೆ ಕನ್ನಡಿಯಲ್ಲಿ ತನ್ನನ್ನು ನೋಡಿಕೊಳ್ಳುವುದಕ್ಕೆ ಮೊದಲು ಅದು ಕನ್ನಡಿಯೆಂಬ ಭಾವನೆಯುಂಟು. ಆ ಕನ್ನಡಿಯಲ್ಲಿ ತನ್ನ ಸೌಂದರ್ಯವನ್ನು ನೋಡಿಕೊಂಡಮೇಲೆ ಅವಳಿಗೆ ಕನ್ನಡಿಯ ಜ್ಞಾನವು ಮರೆಯಾಗುವುದು. ಅದರಂತೆ ಶರಣನಿಗೆ ತನ್ನಲ್ಲಿ ಲಿಂಗಸ್ವರೂಪವನ್ನು ಕಂಡುಕೊಳ್ಳುವುದಕ್ಕೆ ಮೊದಲು ತನ್ನ ಲಿಂಗವೂ ಲಿಂಗಕ್ರಿಯಾದಿಗಳೂ ಭಿನ್ನವಾಗಿ ತೋರಿದರೂ, ತಾನು ಲಿಂಗಸ್ವರೂಪನೆಂಬುದು ಗೋಚರವಾದ ಮೇಲೆ ಆ ಭಿನ್ನತೆಯು ಮರೆಯಾಗುವುದು. ಎಂದರೆ ತಾನೇ ಲಿಂಗವಾಗಿಯೂ ತನ್ನ ಕ್ರಿಯೆಗಳು ಲಿಂಗಕ್ರಿಯೆಗಳಾಗಿಯೂ ಪರಿಣಮಿಸುವವೆಂದು ತಾತ್ಪರ್ಯ. (ಪದ್ಯದಲ್ಲಿರುವ ಮಾಯೆಯೆಂಬ ಶಬ್ದಕ್ಕೆ ಟೀಕಾಕಾರನು ಮಾಡಿರುವ ಅರ್ಥವ ಸ್ಪಷ್ಟತೆಯಾಗುವುದಿಲ್ಲವೆಂದು ಕೆಲವರ ಅಭಿಪ್ರಾಯ)

**ಅವತಾರಿಕೆ :** ಸ್ವಸ್ವರೂಪಸಾಕ್ಷಾತ್ಕಾರವುಳ್ಳ ಶರಣಂಗೆ ಷಟ್‌ಸ್ಥಲಾಚರಣೆಯೊಂದೇ ಸ್ವರೂಪಮಾಗಿರ್ಪುದೆಂದು ಪೇಳುತ್ತಿರ್ದಪಂ.

**ಉತ್ಪಲಮಾಲಾವೃತ್ತಂ**

೨೫ ಭಾಕ್ತಿಕವೇ ಮಹೇಶ್ವರಮಹಾಸ್ಥಲಮಾ ಸ್ಥಲವೇ ಪ್ರಸಾದಸಂ-
ಯುಕ್ತಿವಿಶಾರದಸ್ಥಳಮದೇ ಘನಜೀವಕಣಾತ್ಮಲಿಂಗ ಭಾ-
ಷೋಕ್ತಿ ನಿಜಸ್ಥಳಾಖ್ಯಮದು ತಾನೆ ಲಸಚ್ಚರಣಸ್ಥಲತ್ವಮಾ-
ಮುಕ್ತಿವಿಶಿಷ್ಟದಿವ್ಯ ಶರಣಸ್ಥಳಮೈಕ್ಯಪದಂ ಶಿವಾಧವಾ

**ಟೀಕೆ :** ಭಾಕ್ತಿಕವೇ - ಭಕ್ತಿಸ್ಥಲವೇ, ಮಹೇಶ್ವರಮಹಾಸ್ಥಳಂ - ಮಾಹೇಶ್ವರವೆಂಬ ಸ್ಥಳವು, ಆ ಸ್ಥಳವೇ - ಆ ಮಾಹೇಶ್ವರಸ್ಥಳವೇ, ಪ್ರಸಾದ ಸಂಯುಕ್ತಿ ವಿಶಾರದಸ್ಥಳಂ - ಪ್ರಸಾದ - ಪ್ರಸಾದದ, ಸಂಯುಕ್ತಿ - ಸಂಯೋಜನದಲ್ಲಿ, ವಿಶಾರದ - ಬಲ್ಲವಿಕೆಯುಳ್ಳ, ಸ್ಥಳಂ - ಸ್ಥಳವು. ಅದೇ - ಆ ಪ್ರಸಾದಿಸ್ಥಳವೇ, ಘನಜೀವಕಳಾತ್ಮಲಿಂಗಭಾವೋಕ್ತನಿಜಸ್ಥಳಾಖ್ಯಂ - ಘನ - ದೊಡ್ಡದಾದ, ಜೀವಕಳಾತ್ಮ - ಜೀವಕಳೆಗೆ ಚೈತನ್ಯವಾದ ಪ್ರಾಣವೇ, ಲಿಂಗಭಾವ - ಲಿಂಗಸ್ವರೂಪವಾದುದೆಂಬ ಭಾವದಿಂ, ಉಕ್ತ - ಹೇಳಲ್ಪಟ್ಟ, ನಿಜ - ಸಹಜವಾದ, ಸ್ಥಲ - ಸ್ಥಲವೆಂಬ, ಆಖ್ಯಂ - ಹೆಸರುಳ್ಳುದು. ಅದು ತಾನೆ - ಆ ಪ್ರಾಣಲಿಂಗಿಸ್ಥಳವೇ, ಲಸಚ್ಛರಣಸ್ಥಲತ್ವಂ - ಒಪ್ಪುತಿರ್ಪ ಶರಣಸ್ಥಲವಾದುದು. ಆ ಮುಕ್ತಿವಿಶಿಷ್ಟದಿವ್ಯ ಶರಣಸ್ಥಲಂ- ಅಂತಪ್ಪ ಮುಕ್ತಿಯೊಡನೆ ಕೂಡಿ ಪ್ರಕಾಶಮಯವಾದ ಶರಣಸ್ಥಲವೇ, ಐಕ್ಯಪದಂ - ಐಕ್ಯಸ್ಥಲವು.

**ಭಾವಾರ್ಥಬೋಧಿನಿ** - ೧೫ : ಭಕ್ತಸ್ಥಲವೇ ಮಹೇಶ್ವರಸ್ಥಲವಾಗಿಯೂ, ಆ ಮಹೇಶ್ವರಸ್ಥಲವೇ ಪ್ರಸಾದಿಸ್ಥಲವಾಗಿಯೂ, ಆ ಪ್ರಸಾದಿಸ್ಥಲವೇ ಪ್ರಾಣಲಿಂಗಿಸ್ಥಲವಾಗಿಯೂ, ಆ ಪ್ರಾಣಲಿಂಗಿಸ್ಥಲವೇ ಶರಣಸ್ಥಲವಾಗಿಯೂ, ಆ ಶರಣಸ್ಥಲವೇ ಐಕ್ಯಸ್ಥಲವಾಗಿಯೂ ಪರಿಣಮಿಸುವುದು.

**ವಿಚಾರ** : ದೀಕ್ಷಿತನಾದ ವೀರಶೈವನು ಷಟ್‌ಸ್ಥಲಗಳಿಗನುಸರಿಸಿ, ತನ್ನ ಲಿಂಗೋಪಾಸನೆಯನ್ನು ಮಾಡಬೇಕು. ಈ ಲಿಂಗೋಪಾಸನೆಗೆ ಅಂಗಪದವಾಚ್ಯನಾದ ವೀರಶೈವನಲ್ಲಿರುವ ಭಕ್ತಿಶಕ್ತಿಯ ವಿಕಾಸವೇ ಫಲವಾಗಿರುವುದು. ಭಕ್ತಸ್ಥಲದಲ್ಲಿ ಅಂಗನ ಭಕ್ತಿಯು ಶ್ರದ್ಧಾರೂಪವಾಗಿರುವುದು; ಅದು ಮಹೇಶ್ವರಾದಿಸ್ಥಲಗಳಲ್ಲಿ ಕ್ರಮವಾಗಿ – ನಿಷ್ಠೆ, ಅವಧಾನ, ಅನುಭವ, ಆನಂದ, ಸಮರಸವೆಂಬ ರೂಪದಿಂದ ಪರಿಣಮಿಸುವುದು - ಎಂದರೆ - ಅಂಗಗತಭಕ್ತಿಯು ಐಕ್ಯಸ್ಥಲದಲ್ಲಿ ಸಮರಸಭಕ್ತಿಯಾಗಿ ಪರಿಣಮಿಸಿ, ಅಂಗನಿಗೆ ಲಿಂಗದೊಡನೆ ಸಾಮರಸ್ಯವನ್ನುಂಟು ಮಾಡುವುದು. ಈ ಸಾಮರಸ್ಯ ಸಿದ್ಧಿಗಾಗಿಯೇ ಲಿಂಗೋಪಾಸನೆಯಿರುವುದು. ಈ ಲಿಂಗೋಪಾಸನೆಯು ಷಟ್‌ಸ್ಥಲಕ್ಕನುಸರಿಸಿ ನಡೆಯುವ ಕ್ರಮ ಹೀಗಿದೆ - ಸ್ಥಲಪದವಾಚ್ಯನಾದ ಶಿವನು ಏಕರೂಪನಾಗಿದ್ದರೂ, ಉಪಾಸ್ಯೋಪಾಸಕ ದೃಷ್ಟಿಯಿಂದ ಲಿಂಗಾಂಗವೆಂಬ ದ್ವಿವಿಧಸ್ಥಲವಾಗಿ ಪರಿಣಮಿಸುವನು. ಸ್ಥೂಲ, ಸೂಕ್ಷ್ಮ, ಕಾರಣವೆಂಬ ಮೂರು ಶರೀರಗಳಲ್ಲಿ ಲಿಂಗೋಪಾಸನೆಯು ಸಿದ್ಧಿಸಬೇಕೆಂಬ ದೃಷ್ಟಿಯಿಂದ ಇಷ್ಟ, ಪ್ರಾಣ, ಭಾವವೆಂದು ಲಿಂಗಸ್ಥಲವು ಮೂರಾಗಿಯೂ, ತ್ಯಾಗಾಂಗ,

ಭೋಗಾಂಗ, ಯೋಗಾಂಗವೆಂಬ ಹೆಸರಿನಿಂದ ಅಂಗಸ್ಥಲವು ಮೂರಾಗಿಯೂ ಪರಿಣ ಮಿಸುವುದು. ಮತ್ತು ಈ ಉಪಾಸನೆಯು ಹೃದಯ ಮತ್ತು ಪಂಚ ಬಹಿರಿಂದ್ರಿಯ ಗಳ ಮುಖವಾಗಿಯೂ ನಡೆಯಬೇಕೆಂಬ ದೃಷ್ಟಿಯಿಂದ ಇಷ್ಟಾದಿ ಮೂರು ಲಿಂಗಸ್ಥಲ ಗಳು ಆಚಾರಾದಿಯಾದ ೬ ಲಿಂಗಸ್ಥಲಗಳಾಗಿಯೂ, ತ್ಯಾಗಾದಿಯಾದ ಮೂರು ಅಂಗಸ್ಥಲಗಳು ಭಕ್ತಾದಿಯಾದ ೬ ಅಂಗಸ್ಥಲಗಳಾಗಿಯೂ ವಿಭಾಗವಾಗುವವು ಹೀಗೆ ಲಿಂಗೋಪಾಸನೆಯು ಮೂರು ಶರೀರಗಳಲ್ಲಿ ಮತ್ತು ಆರು ಇಂದ್ರಿಯಗಳಲ್ಲಿ ನಿತ್ಯವೂ ನಡೆಯುವುದಕ್ಕಾಗಿಯೇ ಒಂದೇ ಸ್ಥಲವು ಮೂರಾಗಿಯೂ ಆರಾಗಿಯೂ ರೂಪು ಗೊಂಡಿರುವುದು. ಈ ಕಾರಣದಿಂದ ಲಿಂಗಸ್ವರೂಪವನ್ನು ಹೊಂದಿ, ಲಿಂಗೋ ಪಾಸನೆಯನ್ನು ಮಾಡುವ ವೀರಶೈವ ಶರಣನಿಗೆ ಷಟ್‌ಸ್ಥಲಾಚರಣೆಯೆಲ್ಲಾ ಒಂದೇ ಆಗಿರುವುದೆಂದು ತಿಳಿಯಬೇಕೆಂಬುದೇ ಮೇಲಿನ ಪದ್ಯದ ತಾತ್ಪರ್ಯವಿರುವುದು.

**ಅವತಾರಿಕೆ :** ಇಂತು ಆಚಾರ್ಯಂ ಸ್ವಮತಸ್ಥಾಪನೆಯಂ ಮಾಡಿ, ಎಲ್ಲಿ ಪರ್ಯಂತ ಪರಮತತಿರಸ್ಕಾರವಾಗಲಿಲ್ಲ ಅಲ್ಲಿ ಪರ್ಯಂತವೂ ಸ್ವಮತಸ್ಥಾಪನೆ ಯಾಗಲಿಲ್ಲವೆಂಬ ನ್ಯಾಯದಿಂ ಪರಮತಗಳಂ ಖಂಡಿಸುವಲ್ಲಿ ಮೊದಲಾ ಸಿದ್ಧಾಂತಿಯ ಮತಮಂ ಖಂಡಿಸುತಿರ್ದಪಂ—

**ಚಂಪಕಮಾಲಾವೃತ್ತಂ**

೨೬ ಶ್ವಪಚನ ದೈವದಂತರಮನೊರ್ವೆ ವಿಚಾರಿಸಿ ನೋಡೆ ಲೋಕದೋಳ್
ಶ್ವಪಚನೆ ಬಲ್ಲಲಾ ಜನದ ಬುದ್ಧಿಗೆ ದೈವಮನೊಲ್ದು ಮುಟ್ಟಿದ-
ಲ್ಲಿ ಪರಮಶುದ್ಧತಾಸ್ಮರಣೆಯಿಲ್ಲದ ಶುದ್ಧ ಸಲೇಪಭಾವಮಾ-
ಶ್ವಪಚನ ತಟ್ಟುಮುಟ್ಟನೆಡೆಯಲ್ಲಿಯೆ ಬರ್ಪುದರಿಂ ಶಿವಾಧವಾ

**ಟೀಕೆ :** ಜನದ - ಸಿದ್ಧಾಂತಿಜನದ, ಬುದ್ಧಿಗೆ - ಮತಿಗೆ, ಪರಮಶುದ್ಧತಾ ಸ್ಮರಣೆಯಿಲ್ಲದೆ - ಮಹಾಪರಿಶುದ್ಧಿಯಾಯಿತೆಂಬ ಭಾವದ ನೆನಹಿಲ್ಲದೆ, ದೈವಮಂ- ಇಷ್ಟಲಿಂಗ ಮಾತ್ರವನ್ನು, ಒಲ್ದು - ಚೆನ್ನಾಗಿ, ಮುಟ್ಟಿದಲ್ಲಿ - ಸ್ಥೂಲತನುವಿನಲ್ಲಿ ಧರಿಸಿದಲ್ಲಿ, ಅಶುದ್ಧಸಲೇಪಭಾವಂ-ಅಪವಿತ್ರವಾದ ಪಾಪಲೇಪಭಾವವು,ಆ ಶ್ವಪಚನ- ಆ ಚಂಡಾಲನ, ತಟ್ಟುಮುಟ್ಟನ - ಸೋಂಕಿನ, ಎಡೆಯಲ್ಲಿಯೆ, ಬರ್ಪುದರಿಂ- ಬರುವುದರಿಂದೆ, ಲೋಕದೋಳ್ - ಜಗತ್ತಿನಲ್ಲಿ, ಶ್ವಪಚನ - ಚಂಡಾಲನ, ದೈವದ- ಆ ಸಿದ್ಧಾಂತಿಯ ಇಷ್ಟಲಿಂಗದ, ಅಂತರಮಂ - ತಾರತಮ್ಯವನ್ನು, ಒರ್ವೆ - ಒಂದು

ವೇಳೆ, ವಿಚಾರಿಸಿ ನೋಡೆ - ಆರೈದು ನೋಡಲಾಗಿ, ಶ್ವಪಚನೆ - ಆ ಚಂಡಾಲನೇ, ಬಲ್ಪಲಾ - ವೆಗ್ಗಳವಲಾ. (ಅಂಗವ ಮೇಲೆ ಲಿಂಗಸಂಬಂಧವಾಗಿ, ಲಿಂಗಭಾವ ವೆಡೆಗೊಳ್ಳದೆ ಮಲಿನಭಾವಿಯಾಗಿರ್ಪುದೆ ಆ ಲಿಂಗಧಾರಣಂ ವ್ಯರ್ಥವೆಂದಭಿಪ್ರಾಯವು)

**ಭಾವಾರ್ಥಬೋಧಿನಿ – ೨೬ :** ಭೇದವಾದಿಗಳಾದ ಶೈವಸಿದ್ಧಾಂತಿಗಳು ತಾವು ಸ್ಥೂಲ ಶರೀರದಲ್ಲಿ ಇಷ್ಟಲಿಂಗವನ್ನು ಧರಿಸಿಕೊಳ್ಳುವುದರಿಂದ "ಲಿಂಗಧಾರೀ ಸದಾಶುಚಿಃ" ಎಂಬ ವಾಕ್ಯದಂತೆ ತಾವು ಸದಾ ಪವಿತ್ರರೆಂಬ ಭಾವನೆಯನ್ನು ಬಿಟ್ಟು, ಚಂಡಾಲನು ತಮ್ಮನ್ನು ಸೋಂಕಿದ ಮಾತ್ರದಿಂದಲೇ ತಮಗೆ ಅಶುಚಿತ್ವವು ಸಂಭವಿಸುವುದೆಂದು ಭಾವಿಸುವರಷ್ಟೆ. ಇವರ ಭಾವನೆಯನ್ನು ವಿಚಾರಿಸಿ ನೋಡಲಾಗಿ, ಸದಾ ಪವಿತ್ರತೆಯನ್ನುಂಟುಮಾಡುವ ಲಿಂಗಸಂಬಂಧಕ್ಕಿಂತಲೂ ಚಂಡಾಲಸ್ಪರ್ಶದಲ್ಲಿಯೇ ಅಧಿಕ ಬಲವಿರುವುದೆಂದು ಭಾವಿಸಿದಂತಾಗುವುದಲ್ಲವೆ ? ಆ ಸಿದ್ಧಾಂತಿಗಳು ಲಿಂಗಧಾರಿಗಳಾದ ಮೇಲೆ ಅವರಲ್ಲಿ ಲಿಂಗಭಾವವು ಎಡೆಗೊಳ್ಳದೆ ಹೀಗೆ ಮಲಿನಭಾವನೇ ಮುಂದುಗೊಂಡರೆ ಆ ಲಿಂಗಧಾರಣವು ವ್ಯರ್ಥವೆಂದು ಅಭಿಪ್ರಾಯ.

**ವಿಚಾರ** : ಈ ಪದ್ಯದಲ್ಲಿ, ಲಿಂಗಧಾರಿಯು ತಾನು ಸದಾಶುಚಿಯೆಂಬ ಪವಿತ್ರಭಾವನೆಯುಳ್ಳವನಾಗಬೇಕು, ಆ ಪವಿತ್ರಭಾವನೆಯು ಗಟ್ಟಿಗೊಂಡರೆ "ಸರ್ವಂ ಲಿಂಗಮಯಂ ಜಗತ್" ಎಂಬ ವಿಶಾಲ ಭಾವನೆಯನ್ನುಂಟು ಮಾಡುವುದೆಂಬ ಅಭಿಪ್ರಾಯವಿರುವುದೆಂದು ಲಿಂಗತತ್ವಜ್ಞರು ಹೇಳುವರು. ಆದರೆ, ಇನ್ನು ಕೆಲವರ ಆಕ್ಷೇಪವು ಕೆಳಗಿನಂತಿರುವುದು :

**ಆಕ್ಷೇಪ** : ಈ ಪದ್ಯದ ಅರ್ಥದಂತೆ ಲಿಂಗಧಾರಿಯಾದವನಿಗೆ ಚಂಡಾಲಾದಿಗಳ ಸ್ಪರ್ಶದಿಂದ ಅಶುದ್ಧಿಯುಂಟಾಗದಿದ್ದ ಪಕ್ಷದಲ್ಲಿ ವೀರಶೈವರು ಚಂಡಾಲಾದಿ ಸ್ಪರ್ಶವನ್ನು ಮಾಡಬಾರದೇಕೆ ?

**ಸಮಾಧಾನ** : ವೀರಶೈವನು ದೀಕ್ಷೆಯಿಂದ ಮಲತ್ರಯರಹಿತನಾಗಿ ಲಿಂಗಸಂಗವನ್ನು ಪಡೆದುದರಿಂದ ತಾನು ಸದಾಶುಚಿಯೆಂಬ ಭಾವನೆಯುಳ್ಳವನಾಗಿರಬೇಕು. ಅಸ್ಪೃಶ್ಯತೆಯುಂಟಿರುವ ಸೂತಕಗಳಿಂದ ತನಗೆ ಮಾಲಿನ್ಯವಿಲ್ಲ. ತಾನು ಸೂತಕರಹಿತನು - ಎಂದು ತಿಳಿದುಕೊಳ್ಳಬೇಕು. ಇನ್ನು ಲಿಂಗಧಾರಿಗಳಾಗದವರು ಯಾರೇ ಇರಲಿ ಅವರು ಭವಿಗಳು. ಅವರ ಸ್ಪರ್ಶನಾದಿಗಳು ವೀರಶೈವನಿಗೆ ನಿಷೇಧಿಸಲ್ಪಟ್ಟಿವೆ. ಇದನ್ನು ಮಾಯಿದೇವನೇ ಈ ಶಿವಾಧವಶತಕದ ೮೩-೮೪ನೆಯ ಪದ್ಯಗಳಲ್ಲಿ ಹೇಳಿರುವನು. ಆದರೆ, ವರ್ಣವಿಭಾಗದ ದೃಷ್ಟಿಯಿಂದ ಪಂಚಮ

ವರ್ಣದವನಾದ ಚಂಡಾಲನು ಯಾವಾಗಲೂ ಅಸ್ಪೃಶ್ಯನಾಗಿರುವನು. ಭವಿ ಭಕ್ತ ವಿಭಾಗದಲ್ಲಿ ಈ ದೃಷ್ಟಿಯಿಲ್ಲ. ಭವಿಯೆಂದರೆ ಭಕ್ತಿಯಿಲ್ಲದವನು - ಭಕ್ತಿಯುಳ್ಳವನು ಲಿಂಗಧಾರಿಯಾಗದಿದ್ದರೂ ಪಿಂಡಜ್ಞಾನಿ (ಶುದ್ಧಭವಿ) ಯೆನಿಸಿಕೊಂಡು, ಗುರು ಕಾರುಣ್ಯವನ್ನು ಪಡೆದು, ಲಿಂಗಧಾರಣ ಮಾಡಿಸಿಕೊಳ್ಳಲು ಅರ್ಹನಾಗುವನು. ಆದುದರಿಂದ ಲಿಂಗಧಾರಿಯಲ್ಲದವನು ಯಾವಾಗಲೂ (ಭಕ್ತಿಯಿದ್ದಾಗಳೂ) ಭವಿಯಾಗಿ ಅಸ್ಪೃಶ್ಯನಾಗುವುದಿಲ್ಲ. ಮತ್ತು ಚಂಡಾಲನೊಬ್ಬನೇ ಅಸ್ಪೃಶ್ಯನಲ್ಲ. ಭಕ್ತಿಯಿಲ್ಲದವರೆಲ್ಲರೂ ಅಸ್ಪೃಶ್ಯರಾಗುವರು. ಅವರಲ್ಲಿ ಪೂರ್ವಕರ್ಮದ ಪರಿಪಾಕದಿಂದ ಭಕ್ತಿಯುಂಟಾದರೆ, ಅವರೆಲ್ಲರೂ ಲಿಂಗಧಾರಣಕ್ಕೆ ಅರ್ಹರಾಗುವರು. ಆದುದರಿಂದ ಅಸ್ಪೃಶ್ಯತೆಯೂ, ಅದರಿಂದುಂಟಾಗುವ ಅಶುದ್ಧಿಯೂ ಭವಿ-ಭಕ್ತ-ವಿಭಾಗದಲ್ಲಿ ಭಿನ್ನರೀತಿಯಿಂದಿರುವುದೆಂಬುದನ್ನು ಗ್ರಹಿಸಬೇಕು. (ಭವಿತ್ವದ ವಿಮರ್ಶೆಯು ಇನ್ನೂ ಬಹುಮುಖವಾಗಿರುವುದು)

### ಚಂಪಕಮಾಲಾವೃತ್ತಂ

೩೭ ವ್ರತನಿಯಮೋಪವಾಸವಿಧಿಮುಖ್ಯ ಸಮಸ್ತವಿಧಾನ ಸತ್ಕ್ರಿಯೋ-
ಚಿತವಿವಿಧಾಗಮಾಚರಣೆ ನೋಳ್ಪೊಡೆ ಲಿಂಗವಿಹೀನರಾವವ
ರ್ಗತಿಶಯ ಧರ್ಮಮಲ್ಲವೆ ಸದಾ ಶಿವಲಿಂಗಸಮಾಹಿತರ್ಗೆ ನಿ-
ಶ್ಚಿತವಹ ಧರ್ಮವಲ್ಲ ಪರಮಾರ್ಥನಿರೂಪಣದಿಂ ಶಿವಾಧವಾ

**ಟೀಕೆ :** ವ್ರತ ...... ಮಾಚರಣೆ - ವ್ರತ - ಚಾಂದ್ರಾಯಣಾದಿ ವ್ರತಂಗಳು, ನಿಯಮ - ಪ್ರಾಣಾಯಾಮ ಮೊದಲಾದುವು, ಉಪವಾಸವಿಧಿ - ಏಕಾದಶ್ಯುಪವಾಸ ವಿಧಾನ ಮೊದಲಾದುವು, ಮುಖ್ಯ - ಇವು ಮೊದಲಾದ, ಸಮಸ್ತವಿಧಾನ - ಸಕಲ ವಿಧಗಳ, ಸತ್ಕ್ರಿಯಾ - ಸತ್ಕರ್ಮಗಳಿಗೆ, ಉಚಿತ - ತಕ್ಕಂಥ, ವಿವಿಧ - ಹಲವು ತೆರನಾದ, ಆಗಮ - ಆಗಮಂಗಳ, ಆಚರಣೆ - ನಡೆವಳಿಯು, ನೋಳ್ಪೊಡೆ - ವಿಚಾರಿಸಲಾಗಿ, ಲಿಂಗವಿಹೀನರಾದವರ್ಗೆ - ಲಿಂಗಸಂಬಂಧವಿಲ್ಲದವರಿಗೆ, ಅತಿಶಯ ಧರ್ಮಮಲ್ಲವೆ - ಮಿಗಿಲಾದ ಧರ್ಮವಲ್ಲದೆ, ಸದಾ - ಯಾವಾಗಲೂ, ಶಿವಲಿಂಗಸಮಾಹಿತರ್ಗೆ - ಶಿವಲಿಂಗಸಂಬಂಧವುಳ್ಳವರ್ಗೆ, ಪರಮಾರ್ಥ ನಿರೂಪಣದಿಂ - ಯಥಾರ್ಥ ವಾಕ್ಯದಿಂ, ನಿಶ್ಚಿತವಹ - ನಿಶ್ಚಯಿಸಲ್ಪಟ್ಟ, ಧರ್ಮಮಲ್ಲ - ಆಚರಣೆಯಲ್ಲ.



**ಭಾವಾರ್ಥಬೋಧಿನಿ - ೨೭ :** ಚಾಂದ್ರಾಯಣಾದಿ ವ್ರತಗಳು, ಪ್ರಾಣಾಯಾಮಾದಿಗಳು, ಉಪವಾಸವೇ ಮೊದಲಾದ ಸಮಸ್ತ ವಿಧಕಾಮ್ಯಕರ್ಮಗಳು ಇವೆಲ್ಲವುಗಳನ್ನು ಕಥಿಸುವ ಬಹುವಿಧದ ಆಗಮಗಳ ಆಚರಣೆಗಳು ವಿಚಾರಮಾಡಿ ನೋಡಲಾಗಿ, ಲಿಂಗವಿಹೀನರಿಗೆ ಶ್ರೇಷ್ಠವಾದ ಧರ್ಮಾಚರಣೆಗಳೆನಿಸಬಹುದಲ್ಲದೆ, ಸರ್ವದಾ ಲಿಂಗಸಂಗಿಗಳಾದ ವೀರಶೈವರಿಗೆ ಯಥಾರ್ಥವಾಗಿ ವಿಚಾರ ಮಾಡಲಾಗಿ ಅವು ಧರ್ಮಾಚರಣೆಗಳಲ್ಲ. (ಆದುದರಿಂದಲೇ ಲಿಂಗಹೀನರಿಗೆ ಅಧಿಕಕ್ರಿಯೆಯು ಅಲ್ಪಫಲವು; ಲಿಂಗವಂತರಿಗೆ ಅಲ್ಪಕ್ರಿಯೆಯು ಅಧಿಕ ಫಲವೆಂಬುದು ರೂಢವಾಗಿರುವುದು.)

## ಉತ್ಪಲಮಾಲಾವೃತ್ತಂ

೨೮ ಆದೊಡೆ ನಿಲ್ಲು ತೀರ್ಥಜಲಮಜ್ಜನಮುಂಡನದಂತಧಾವನಾ
ಚ್ಛಾದನಧೋತ್ರ ದೇಹಪರಿಶುದ್ಧ್ಯುಪವಾಸಸಹಸ್ರಪಾರಣಾ
ಪಾದಿತ ನಿತ್ಯಕರ್ಮವಿಧಿ ನೋಳ್ಪೊಡೆ ಮುಂಡೆಗೆ ಯೋಗ್ಯಮೈಸೆ ಮು
ತ್ತೈದೆಗೆ ಯೋಗಮಲ್ಲ ಸತತಂ ಪತಿಭಕ್ತಿಯಿರಲ್ ಶಿವಾಧವಾ

**ಟೀಕೆ :** ಆದೊಡೆ - ಎಲೈ ವೈದಿಕಾ, ನೀನಾಚರಿಸುವ ಕರ್ಮಮಾರ್ಗಂ ನಿಶ್ಚಯವೆಂದೆಯಾದೊಡೆ, ನಿಲ್ಲು - ತಾಳು, ತೀರ್ಥಜಲ......ಕರ್ಮವಿಧಿ - ತೀರ್ಥಜಲ - ಪುಣ್ಯತೀರ್ಥೋದಕವಲ್ಲಿಯು, ಮಜ್ಜನ – ಸ್ನಾನ, ಮುಂಡನ - ವಪನ, ದಂತಧಾವನ - ಪಲ್ಗಳಶುದ್ಧಿ, ಆಚ್ಛಾದನ - ಹೊದಿಕೆಯು, ಧೋತ್ರ - ಉಟ್ಟವಸ್ತ್ರ, ದೇಹ - ಶರೀರವ, ಪರಿಶುದ್ಧಿ - ನಿರ್ಮಲೀಕರಣ, ಉಪವಾಸಸಹಸ್ರ - ಮಾಸೋಪವಾಸ ಸಹಸ್ರಂಗಳು, ಪಾರಣಾ - ದ್ವಾದಶಿಯ ಪಾರಣೆ ಇವುಗಳಿಂ, ಆಪಾದಿತ - ಸಂಪಾದಿಸಲ್ಪಟ್ಟ, ನಿತ್ಯಕರ್ಮ - ಸಂಧ್ಯಾವಂದನಾದಿ ನಿತ್ಯಕರ್ಮದ, ವಿಧಿ - ಅನುಷ್ಠಾನವು, ಮುಂಡೆಗೆ - ರಂಡೆಗೆ, ಯೋಗ್ಯಮೈಸೆ - ಯೋಗ್ಯವಪ್ಪೆ, ಸತತಂ - ಆವಾಗಳೂ, ಪತಿಭಕ್ತಿಯಿರಲ್ - ಪತಿಭಕ್ತಿಯಿರಲಾಗಿ ಮುತ್ತೈದೆಗೆ, ಯೋಗ್ಯಮಲ್ಲ - ತಕ್ಕುದಲ್ಲ. (ಶರಣಸತಿ ಲಿಂಗಪತಿಯೆಂಬ ಭಾವದಿಂದ ಆಚರಿಸುವ ಶರಣಂಗೆ ವೈದಿಕಕಾಮ್ಯಕರ್ಮಂ ಯೋಗ್ಯಮಲ್ಲವೆಂದು ತಾತ್ಪರ್ಯಂ)

**ಭಾವಾರ್ಥಬೋಧಿನಿ - ೨೮ : ಎಲೈ ವೈದಿಕ, ಕಾಮ್ಯಕರ್ಮವಾದಿಯೆ ನೀನಾಚರಿಸುವ ಕರ್ಮವೇ ಮುಖ್ಯವೆಂದು ಹೇಳುವೆಯಾದರೆ, ತಾಳು. ಪುಣ್ಯಜಲಸ್ನಾನ, ತಲೆಬೋಳಿಸುವುದು, ಉಪವಾಸ, ಪಾರಣೆ ಮೊದಲಾದ ಕರ್ಮಗಳು**

ಮುಂಡೆಯಾಚರಿಸತಕ್ಕ ಧರ್ಮಗಳು. ಪತಿಭಕ್ತಿಪರಾಯಣಳಾದ ಮುತ್ತೈದೆಗೆ ಆ ಧರ್ಮಗಳು ಆಚರಿಸಲು ಯೋಗ್ಯವಲ್ಲ. ಅದರಂತೆ ಲಿಂಗವೇ ಪತಿಯಾಗುಳ್ಳ ವೀರಶೈವರು ಲಿಂಗಾಂಗಸಾಮರಸ್ಯ ಸಾಧಕ ಭಕ್ತಿಗೆ ಸಂಬಂಧಿಸಿದ ಕ್ರಿಯೆಯನ್ನುಳಿದು ಇತರ ವ್ರತೋಪವಾಸಾದಿಗಳನ್ನು ಮಾಡುವುದು ಅಧರ್ಮವೆಂದು ತಾತ್ಪರ್ಯ.

**ಚಂಪಕಮಾಲಾವೃತ್ತಂ**

೨೯ ಅರಿಸಿನ ಗಂಧ ಚಂದ್ರ ಕಚಮಾಲ್ಯವಿಲೇಪನ ವಸ್ತ್ರಭೂಷಣೋ
ತ್ಕರರಚನಾವಿಲಾಸಮಯಶೋಭೆ ವಿಚಾರಿಸೆ ಗಂಡನುಳ್ಳ ಚೆ
ಲ್ವರಸಿಗೆ ಯೋಗ್ಯಮೋ ಬಣಗುಮುಂಡೆಗೆ ಯೋಗ್ಯಮೊ ಲಿಂಗಸಂಗತ
ತ್ಪರಶರಣಂಗೆ ಸರ್ವವಿಧಭೋಗಸುಖಂ ಪೆರತೇಂ ಶಿವಾಧವಾ

**ಟೀಕೆ :** ಅರಿಸಿನ.........ಮಯಶೋಭೆ - ಅರಿಸಿನ-ಅರಿಸಿನದ ತಿಗುರಿನ, ಗಂಧ - ಚಂದನದ, ಚಂದ್ರ - ಬೈತಲೆಚಂದ್ರದ, ಕಚಮಾಲ್ಯ - ಮುಡಿದಂಡೆಯ, ವಿಲೇಪನ - ಅಂಗರಾಗದ, ವಸ್ತ್ರ - ಉಡುಗೆಯ, ಭೂಷಣ - ತೊಡಿಗೆಯ, ಉತ್ಕರ - ಸಮೂಹಂಗಳ, ರಚನಾ - ಅಲಂಕಾರದ, ವಿಲಾಸಮಯ - ವಿಲಾಸದಿಂದ ವೆಗ್ಗಳವಾದ, ಶೋಭೆ - ಕಾಂತಿಯು, ವಿಚಾರಿಸೆ - ವಿಚಾರಿಸಲಾಗಿ, ಗಂಡನುಳ್ಳ - ಪುರುಷನುಳ್ಳ, ಚೆಲ್ವರಸಿಗೆ - ಸೊಬಗಿಯಾದ ಸ್ತ್ರೀಗೆ, ಯೋಗ್ಯಮೋ - ಉಚಿತವೋ? ಬಣಗುಮುಂಡೆಗೆ - ಲಜ್ಜೆಯಿಲ್ಲದ ಮುಂಡೆಗೆ ಯೋಗ್ಯಮೊ? (ಇಂತೆಂಬ ವಿಕಲ್ಪದಲ್ಲಿ ಮುತ್ತೈದೆಗೆ ಯೋಗ್ಯವಲ್ಲದೆ ಮುಂಡೆಗೆ ಯೋಗ್ಯವಲ್ಲವೆಂಬುದರ್ಥ) ಸರ್ವವಿಧ ಭೋಗಸುಖಂ - ಲಿಂಗಮುಖವಾದನೇಕ ವಿಷಯಸುಖವು, ಲಿಂಗಸಂಗತತ್ಪರ ಶರಣಂಗೆ - ಲಿಂಗಸಂಗದಲ್ಲಿ ಪಿರಕಪುಳ್ಳ ಶರಣಂಗೆ, ಪೆರತೇಂ - ಬೇರೆಯೇ? ಬೇರಲ್ಲವೆಂಬುದರ್ಥ.

**ಭಾವಾರ್ಥಬೋಧಿನಿ - ೨೯ :** ಅರಿಸಿನ, ಗಂಧ, ಕುಂಕುಮ, ಹೂವು, ಉಡಿಗೆ, ತೊಡಿಗೆ ಮೊದಲಾದಲಂಕರಣವಸ್ತುಗಳನಲಂಕರಿಸಿಕೊಂಡು, ಶೋಭಾಯುಕ್ತಳಾಗಿ ವಿಲಾಸಪಡುವುದು ಗಂಡನುಳ್ಳ ಸ್ತ್ರೀಗೆ ಯೋಗ್ಯವಲ್ಲದೆ ಮುಂಡೆಗೆ ಯೋಗ್ಯವಾದೀತೇ? ಅದರಂತೆ ಲಿಂಗಸಂಗತತ್ಪರವಾದ ಶರಣಗೆ ಲಿಂಗಮುಖೇಂದ್ರಿಯ ವಿಷಯಸುಖವು ಅನುಭವಿಸಲು ಯೋಗ್ಯವಾಗಿರುವುದು.

**ಅವತಾರಿಕೆ :** ಇಂತು ಸಿದ್ಧಾಂತಿಯ ಮತನುಂ ಖಂಡಿಸಿ, ಒಣ ವಾಗ ದ್ವೈತಿಯ ಮತವಮಂ ಖಂಡಿಸುತಿರ್ಪಂ

**ಚಂಪಕಮಾಲಾವೃತ್ತಂ**

೩೦ ಭ್ರಮಿಸದೆ ಮಾಣ್ಬರೇ ಬಯಲ ಮೊಮ್ಮದ ಬಿಮ್ಮು ಹತ್ತಿ ವಿ
ಶ್ರಮಿಸುವ ಭೇವಮಂ ತಿಳಿಯಲೊಲ್ಲದೆ ಯೋಗಿಗಳೆಂದು ದೃಷ್ಟಯೋ
ಗಮೆನಿಪ ಲಿಂಗಧಾರಣಸಮರ್ಚನ ಚಿಂತನ ನಿಶ್ಚಿತಕ್ರಿಯಾ
ಶ್ರಮಶಿವದೀಕ್ಷೆಯಿಲ್ಲದಿಹ ಮತ್ತಜನರ್ಭವದೋಳ್ ಶಿವಾಧವಾ

**ಟೀಕೆ :** ದೃಷ್ಟಯೋಗಮೆನಿಪ – ಪ್ರತ್ಯಕ್ಷಮಪ್ಪ ಶಿವಯೋಗವೆನಿಸುವ, ಲಿಂಗ ……… ದಿಹ – ಲಿಂಗಧಾರಣ – ಲಿಂಗಾಂಗಸಂಬಂಧದಿಂ, ಸಮರ್ಚನ– ಶಿವಪೂಜೆಯಿಂ, ಚಿಂತನ – ಶಿವಸ್ಮರಣೆಯಿಂ, ನಿಶ್ಚಿತ – ನಿರ್ಣಯಿಸಲ್ಪಟ್ಟ, ಕ್ರಿಯಾ– ಸತ್ಕ್ರಿಯೆಗಳ, ಆಶ್ರಮ – ಸ್ಥಾನವಾದ, ಶಿವದೀಕ್ಷೆಯಿಲ್ಲದಿಹ – ವೀರಶೈವದೀಕ್ಷೆ ಯಿಲ್ಲದಿರ್ಪ, ಮತ್ತಜನರ್ – ಸೊಕ್ಕಿದ ಜನರು, ವಿಶ್ರಮಿಸುವ – ಲಿಂಗಸುಖದಲ್ಲಿ ಪರಿಣಮಿಸುವ ಭೇವಮಂ, ತಿಳಿಯಲೊಲ್ಲದೆ – ಅರಿಯಲೊಲ್ಲದೆ, ಬಯಲ–ವ್ಯರ್ಥ ವಾದ, ಬೊಮ್ಮದ ಹಮ್ಮಿನ – ಬ್ರಹ್ಮವಿದನಾದೆನೆಂಬಹಂಕಾರದ, ಬಿಮ್ಮು –ಮರಪೆ, ಹತ್ತಿ – ತಲೆಗೇರಿ, ಯೋಗಿಗಳೆಂದು – ತಾವು ಯೋಗಿಗಳೆಂದು, ಭವದೋಳ್– ಸಂಸಾರದಲ್ಲಿ, ಭ್ರಮಿಸದೆ ಮಾಣ್ಬರೆ – ತಿರುಗದಿರ್ಪರೆ, ? ತಿರುಗುವರೆಂಬುವರ್ಥ.

**ಭಾವಾರ್ಥಬೋಧಿನಿ - ೩೦ :** ಪ್ರತ್ಯಕ್ಷವಾದ ಶಿವಯೋಗವೆನಿಸಿದ (ಅಂಗ ದಲ್ಲಿ ಸರ್ವದಾ ಲಿಂಗಸಂಯೋಗವಿರುವ) ಲಿಂಗಧಾರಣಕ್ಕೆ ಮತ್ತು ಆ ಲಿಂಗದ ಪೂಜಾಧ್ಯಾನಾದಿಗಳಿಗೆ ಆಶ್ರಯವಾದ ವೀರಶೈವ ದೀಕ್ಷೆಯನ್ನು ಹೊಂದದಿರುವ ಗರ್ವಿತಜನರು ವ್ಯರ್ಥವಾಗಿ ನಾನು ಬ್ರಹ್ಮನಾದೆನೆಂಬಹಂಕಾರದ ಮರವೆಯನ್ನು ತಲೆಯಲ್ಲಿ ತುಂಬಿಕೊಂಡು, ಲಿಂಗಸುಖಪರಿಣಾಮಿಗಳಾಗುವ ರೀತಿಯನ್ನು ತಿಳಿಯದೆ ಸಂಸಾರದಲ್ಲಿ ಬಳಲದೇ ಇರುವರೆ ? ಬಳಲುವರೆಂದು ತಾತ್ಪರ್ಯ.

## ಉತ್ಪಲಮಾಲಾವೃತ್ತಂ

೩೧ ದೃಷ್ಟದ ಲಿಂಗಧಾರಣಸಮರ್ಚನ ಚಿಂತನಮಿಲ್ಲದಾಗಮ
ಭ್ರಷ್ಟರಿಗಂತರಾನುಪಮ ಚಿದ್ಘನರೂಪ ಮಹಾತ್ಮಲಿಂಗಮ-
ಸ್ಪಷ್ಟಮದೃಶ್ಯಮಧ್ರುವಮಪೂಜ್ಯಮಗೋಚರಮಿಷ್ಟಲಿಂಗನಿ-
ರ್ದಿಷ್ಟ ಬಹಿಷ್ಕ್ರಿಯಾಪರರಿಗಂತರಸಿದ್ಧಿ ದಿಟಂ ಶಿವಾಧವಾ

**ಟೀಕೆ :** ಅಂತರಾ ......... ಲಿಂಗಂ – ಅಂತರ - ಅಂತಃಕರಣದಲ್ಲಿ, ಅನುಪಮ - ಸರಿಯಿಲ್ಲದಂಥ, ಚಿದ್ಘನರೂಪ–ಜ್ಞಾನದಿಂದಚ್ಚಿತ್ತಾದಸ್ವರೂಪವನುಳ್ಳ, ಮಹಾಲಿಂಗಂ - ದೊಡ್ಡಿತ್ತಾದ ಪ್ರಾಣಲಿಂಗವು, ದೃಷ್ಟದ - ಪ್ರತ್ಯಕ್ಷವಾದ, ಲಿಂಗ ಧಾರಣಸಮರ್ಚನಚಿಂತನಂ – ಲಿಂಗಧಾರಣ - ಲಿಂಗಾಂಗಸಂಬಂಧವು, ಅರ್ಚನ-ಶಿವಪೂಜೆಯು, ಚಿಂತನಂ - ಶಿವಲಿಂಗದ ಸ್ಮರಣೆಯು, ಇಲ್ಲದ-ರಹಿತರಾದ, ಆಗಮ ಭ್ರಷ್ಟರಿಗೆ – ಶಿವಾಗಮದತ್ತಣಿಂ ಜಗುಳ್ದವರಿಗೆ, ಅಸ್ಪಷ್ಟ – ವ್ಯಕ್ತವಲ್ಲ, ಅದೃಶ್ಯಂ-ಪ್ರತ್ಯಕ್ಷದಿಂ ಕಾಣಿಸಿಕೊಳ್ಳದು, ಅಧ್ರುವಂ - ನಿಶ್ಚಯವಾಗದು, ಅಪೂಜ್ಯಂ - ಪೂಜಿಸಿಕೊಳ್ಳದು, ಅಗೋಚರಂ – ಮನಸ್ಸಿಗೂ ಕಾಣಿಸಿಕೊಳ್ಳದು. ಅಂತರಸಿದ್ಧಿ-ಅಂತಃ ಕರಣದಲ್ಲಿ ಪ್ರಾಣಲಿಂಗಸಂಬಂಧ ನಿಷ್ಪತ್ತಿಯು, ಇಷ್ಟಲಿಂಗನಿರ್ದಿಷ್ಟಬಹಿಷ್ಕ್ರಿಯಾಪರರಿಗೆ - ಇಷ್ಟಲಿಂಗ-ಇಷ್ಟಲಿಂಗದಲ್ಲಿ, ನಿರ್ದಿಷ್ಟ-ಸಮರ್ಪಿಸಲ್ಪಟ್ಟ, ಬಹಿಷ್ಕ್ರಿಯಾ-ಬಾಹ್ಯಪೂಜೆಯಲ್ಲಿ, ಪರರಿಗೆ - ತಾತ್ಪರ್ಯವುಳ್ಳವರಿಗೆ, ದಿಟಂ ಸಾಧ್ಯವು. (ಇಷ್ಟ ಲಿಂಗದಲ್ಲಿ ಸತ್ಕ್ರಿಯಾಸಂಪನ್ನರಾದವರ್ಗಲ್ಲದೆ ಪ್ರಾಣಲಿಂಗಸಂಬಂಧವಿಲ್ಲೆಂಬುದ ಭಿಪ್ರಾಯಂ.)

**ಭಾವಾರ್ಥಬೋಧಿನಿ** – ೩೧ : ಪ್ರತ್ಯಕ್ಷವಾದ ಲಿಂಗಧಾರಣ ಮತ್ತು ಸಮರ್ಚನಚಿಂತನಗಳಿಲ್ಲದ ಶಿವಾಗಮದೂರರಾದವರಿಗೆ ಅಂತಃಕರಣದಲ್ಲಿರುವ ನಿರುಪಮವೂ ಜ್ಞಾನಘನವೂ ಆದ ಮಹಾಪ್ರಾಣಲಿಂಗವು ವ್ಯಕ್ತವಾಗಿ ಕಾಣಿಸದು, ಸ್ಥಿರವಾಗದು, ಪೂಜಿಸಲುಬಾರದು, ಮನಸ್ಸಿಗೂ ನಿಲುಕದು. ಇನ್ನು ಇಷ್ಟಲಿಂಗಕ್ಕೆ ಸಂಬಂಧಿಸಿದ ಬಾಹ್ಯಕ್ರಿಯೆಗಳನ್ನು (ಪೂಜಾಧ್ಯಾನಾದಿಗಳನ್ನು) ಆಚರಿಸುವವರಿಗೆ ಮಾತ್ರ ಆ ಪ್ರಾಣಲಿಂಗವು ಗೋಚರಿಸುವುದು.

## ಚಂಪಕಮಾಲಾವೃತ್ತಂ

೩೨ ಕನಸಿನೊಳೊರ್ವನಿಂದ್ರಪದಭೋಗವಿಶಿಷ್ಟಸುಖಾನುರಾಗದಿಂ
ಘನಪರಿಣಾಮಿಯಾಗಿರುತಿಹನ್ನಬರೊಯ್ಯನೆ ನಿದ್ರೆ ತೀರೆ ಮು-
ನ್ನಿನ ಪರಿಯಂತೆ ತಾನಿಹ ದರಿದ್ರತೆಯಂ ನೆರೆ ಕಂಡು ದುಃಖದಿಂ
ಪುನರಪಿ ನಿದ್ರೆಗೈಯಲದು ತಪ್ಪದೆ ಬರ್ಪುದೆ ಪೇಳ್ ಶಿವಾಧವಾ

**ಟೀಕೆ :** ಒರ್ವಂ - ಒಬ್ಬಮನುಷ್ಯನು, ಕನಸಿನೊಳ್ - ಸ್ವಪ್ನದಲ್ಲಿ, ಇಂದ್ರ ……… ರಾಗದಿಂ - ಇಂಗ್ರಪದ - ದೇವೇಂದ್ರಪದದಲ್ಲಿ, ಭೋಗವಿಶಿಷ್ಟ-ಮಹಾಭೋಗಗಳಿಂದಾದ, ಸುಖಾನುರಾಗದಿಂ - ಸುಖಾಸಕ್ತಿಯಿಂದ, ಘನಪರಿಣಾಮಿಯಾಗಿ - ಮಹಾಸುಖವುಳ್ಳವನಾಗಿ, ಇಹನ್ನಬರ - ಇರ್ಪಪರ್ಯಂತವೂ, ಒಯ್ಯನೆ – ಮೆಲ್ಲನೆ, ನಿದ್ರೆತೀರೆ - ಎಚ್ಚರಾಗಲಾಗಿ, ಮುನ್ನಿನ ಪರಿಯಂತೆ - ಮೊದಲಿದ್ದಹಾಗೆ, ತಾನಿಹ ದರಿದ್ರತೆಯಂ - ತಾನನುಭವಿಸುವ ದರಿದ್ರತ್ವವನ್ನು, ನೆರೆ-ಚೆನ್ನಾಗಿ, ನೋಡಿ, ದುಃಖದಿಂ - ಶೋಕದಿಂದ, ಪುನರಪಿ ನಿದ್ರೆಗೈಯಲು - ಮರಳಿ ನಿದ್ರೆಗೈಯಲಾಗಿ, ಅದು - ಆ ಇಂದ್ರಪದಭೋಗವು, ತಪ್ಪದೆ ಬರ್ಪುದೆ - ಬಿಡದೆ ಬರ್ಪುದೆ? ಬಾರದೆಂಬುದರ್ಥ. ಪೇಳ್ ಎಲೆವಾದಿ - ಇದಕ್ಕುತ್ತರಮಂ ಪೇಳು. (ಇಷ್ಟಲಿಂಗ ಸತ್ಕ್ರಿಯೋಪಚಾರಮಿಲ್ಲದೆ ಪ್ರಾಣಲಿಂಗಸಂಬಂಧದಿಂ ಸುಜ್ಞಾನಿಯಾಗಿರ್ಪೆನೆಂದೊಡೆ ಅದು ಸ್ಥಿರವಲ್ಲವೆಂಬುದಭಿಪ್ರಾಯಂ)

**ಭಾವಾರ್ಥಬೋಧಿನಿ - ೩೨ :** ಒಬ್ಬ ಮನುಷ್ಯನು ತನ್ನ ಕನಸಿನಲ್ಲಿ ಇಂದ್ರಪದವಿಯ ಮಹಾಸುಖವನ್ನನುಭವಿಸುವಂತಿರುವಷ್ಟರಲ್ಲಿಯೇ ನಿದ್ರೆಯಿಂದೆಚ್ಚತ್ತು ಮೊದಲಿನಂತೆ ತನಗಿರುವ ಬಡತನವನ್ನೇ ಕಂಡು ದುಃಖಿಸಿ, ಮತ್ತೆ ನಿದ್ರೆಗೈಯಲ್ಕೆ ಮೊದಲನುಭವಿಸಿದಂತೆ ಕಂಡ ಇಂದ್ರಪದವಿಯ ಸುಖವು ಬರುವುದೇ ? ಬರಲಾರದು. ಅದರಂತೆಯೇ ಇಷ್ಟಲಿಂಗದ ಬಾಹ್ಯಕ್ರಿಯೋಪಚಾರಗಳಿಲ್ಲದೆ ಮತ್ತು ಆ ಲಿಂಗಕ್ರಿಯೆಗಳಿಂದುಂಟಾದ ಆನಂದವನ್ನು ಪಡೆಯದೆಯೇ ಪ್ರಾಣಲಿಂಗವನ್ನರಿತು ಸುಖಿಸುವೆನೆಂಬುದು ದರಿದ್ರನ ಕನಸಿನಂತೆ ಅಸ್ಥಿರವೆಂಬುದಭಿಪ್ರಾಯ.

## ಚಂಪಕಮಾಲಾವೃತ್ತಂ

೩೩ ಚಿರಸುಖಿ ಜಾಗ್ರದೋಳ್ ನೆರೆ ಮನೋರಮೆಯಪ್ಪ ನಿಜಪ್ರಿಯಾಂಗನಾ
ಸರಸ ರತಿಪ್ರಸಂಗಪರಿಣಾಮದೊಳಿರ್ಪನೆಗಂ ತದೀಯ ನಿ
ರ್ಭರಸುಖತೃಪ್ತಿ ಸುಪ್ತಿಯೆಡೆಗೊಂಡಿರಲಲ್ಲಿಯ ವೇಧೆಯಿಂದವಾ
ಪರಿಯೆ ದಿಟಂ ಪ್ರಬುದ್ಧತೆಯೊಳಂತುಮದೇ ಸಹಜಂ ಶಿವಾಧವಾ

**ಟೀಕೆ :** ಚಿರಸುಖಿ - ಸ್ಥಿರವಾದ ಸುಖವುಳ್ಳಾತನು, ಜಾಗ್ರದೋಳ್ - ಜಾಗ್ರದವಸ್ಥೆಯಲ್ಲಿ, ನೆರೆ - ಮಿಗಿಲಾಗಿ, ಮನೋರಮೆಯುಪ್ಪ - ಮನದನ್ನೆಯಾಗಿರುವ, ನಿಜಪ್ರಿ.........ದೋಳ್ - ನಿಜ - ತನ್ನ, ಪ್ರಿಯಾಂಗನಾ - ಇಷ್ಟಳಾದ ಸ್ತ್ರೀಯು, ಸರಸ - ವಿನೋದದೊಡನೆ ಕೂಡಿದ, ರತಿಪ್ರಸಂಗ - ಸುರತ ಪ್ರಸಂಗದ, ಪರಿಣಾಮದೋಳ್ - ಸುಖದಲ್ಲಿ, ಇರ್ಪನೆಗಂ - ಇಹಪರ್ಯಂತವೂ, ತದೀಯನಿರ್ಭರಸುಖತೃಪ್ತಿ - ತದೀಯ - ಆ ಸುರತಸಂಬಂಧವಾದ, ನಿರ್ಭರ - ನಿಬಿಡವಾದ, ಸುಖ - ಆನಂದದಿಂದಾದ, ತೃಪ್ತಿ - ಸಂತುಷ್ಟಿಯು, ಸುಪ್ತಿಯೆಡೆಗೊಂಡಿರಲ್ - ನಿದ್ರೆ ಬರಲಾಗಿ, ಅಲ್ಲಿಯ ವೇಧೆಯಿಂದಂ - ಜಾಗ್ರದಲ್ಲಿಯ ಜ್ಞಾನದಿಂದ, ಆ ಪರಿಯೆ - ಆ ಸುಖದಿಂದಿರ್ಪುದೇ, ದಿಟಂ - ನಿಶ್ಚಯವಾಗಿರುರ್ಪುದು, ಪ್ರಬುದ್ಧತೆಯೋಳ್ - ಎಚ್ಚರದಲ್ಲಿ, ಅಂತುಂ - ಹಾಗೆಯೇ, ಅದೇ - ಆ ಕನಸಿನಲ್ಲಿರ್ದ ಪ್ರಕಾರವೇ, ಸಹಜಂ - ಸಹಜವಾಗಿರ್ಪುದು.

**ಭಾವಾರ್ಥಬೋಧಿನಿ - ೩೩ :** ಸ್ಥಿರಸುಖಿಯಾಗಿರುವ ಪುರುಷನು ಜಾಗ್ರತ್ಕಾಲದಲ್ಲಿ ತನ್ನ ಮನೋಹರ ಕಾಮಿನಿಯೊಡನೆ ರಮಿಸಿ, ಸುಖಪಡುವವನಾಗಿ, ನಿದ್ರಾವಸ್ಥೆಯನ್ನು ಹೊಂದಿದರೂ, ಆ ಜಾಗ್ರತ್ಕಾಲದ ಸುಖಾನುಭವದ ಸಂಸ್ಕಾರ ಬಲದಿಂದ ಆಗಲೂ ಸುಖಪರಿಣಾಮವುಳ್ಳವನಾಗಿಯೇ ಇರುವನು. ಪುನಃ ಎಚ್ಚರಗೊಂಡಾಗಲೂ ಆ ಸ್ವಪ್ನದ ಸುಖಾನುಭವವನ್ನೇ ಹೊಂದುತ್ತಿರುವುದು ಸಹಜ. (ಇದರಂತೆ ಹೊರಗೆ ಇಷ್ಟಲಿಂಗದ ಪೂಜಾಧ್ಯಾನಾದಿಜನ್ಯವಾದ ಆನಂದವನ್ನನುಭವಿಸುವ ಶರಣನು ಒಳಗೂ ಪ್ರಾಣಲಿಂಗಾನುಸಂಧಾನದ ಆನಂದವನ್ನು ಅನುಭವಿಸಿ, ಅವಸ್ಥಾತ್ರಯದಲ್ಲಿಯೂ ಲಿಂಗಸುಖಿಯಾಗಿರಲು ಸಾಧ್ಯ.)

**ಉತ್ಪಲಮಾಲಾವೃತ್ತಂ**

೩೪ ಗೋವಿನ ದೇಹದಲ್ಲಿ ಘೃತಮಿರ್ದೊಡವೇಂ ಫಲಮಾತ್ಮರೋಗವಿ-
ದ್ರಾವಣಪೋಷಣಪ್ರಬಲಶಕ್ತಿ ಬಹಿರ್ಗತಮಾದೊಡಲ್ಲದಿ-
ಲ್ಲೀ ವಿಧದಿಂ ಶಿವಂ ಸಕಲಜಂತುಶರೀರದೊಳಿರ್ಪನಿರ್ದೊಡೇಂ
ಪ್ರಾವಣಶಕ್ತಿ ಬಾಹ್ಯಸಮುಪಾಸ್ತಿಯೊಳೈಸೆ ಕಣಾ ಶಿವಾಧವಾ

**ಟೀಕೆ :** ಘೃತಂ - ತುಪ್ಪವು, ಗೋವಿನ - ಆಕಳದ, ದೇಹದಲ್ಲಿ-ಶರೀರದಲ್ಲಿ, ಇರ್ದೊಡೆ - ಇರುತಿರ್ದೊಡೆ, ಅದೇಂ ಫಲಂ - ಏನು ಪ್ರಯೋಜನವು ? ಆತ್ಮ



ಽೋಗವಿದ್ರಾವಣ ಪೋಷಣಪ್ರಬಲಶಕ್ತಿ - ಆತ್ಮ ಆಕಳಾದ ತನ್ನ, ಽೋಗವಿದ್ರಾವಣ-ಽೋಗಂಗಳ ಪರಿಹರಿಸುವುದರಲ್ಲಿಯೂ, ಪೋಷಣ - ಪುಷ್ಟಿಯಂ ಮಾಡುವಲ್ಲಿಯೂ, ಪ್ರಬಲಶಕ್ತಿ - ಘನತರವಾದ ಸಾಮರ್ಥ್ಯವು, ಬಹಿರ್ಗತಮಾದೊಡಲ್ಲದೆ - ಆಘೃತವು ಪೊರಮಟ್ಟಲ್ಲವೆ, ಇಲ್ಲ.(ಆ ಘೃತಕ್ಕೆ ಅಸಮರ್ಥ್ಯ ಇಲ್ಲ.)ಈ ವಿಧದಿಂ ಈ ಪ್ರಕಾರದಿಂ

"ಗವಾಂ ಸರ್ಪಿಃಶ್ಶರೀರಸ್ಥಂ ನಕರೋತ್ಯಾತ್ಮಪೋಷಣಂ
ನಿಸ್ಸೃತಂ ಕರ್ಮರಚಿತಂ ಪುರಸ್ತಾಸಾಂತು ಭೇಷಜಂ"

ಎಂದು ಶಿವರಹಸ್ಯವುಂಟಾಗಿ, ಶಿವಂ - ಗುಣಾತೀತನಪ್ಪ ಶಿವನು, ಸಕಲಜಂತು ಶರೀರದೊಳ್ - ಸಕಲಪ್ರಾಣಿದೇಹಂಗಳಲ್ಲಿ, ಇರ್ಪಂ - ಪರಿಪೂರ್ಣನಾಗಿರ್ಪನು, ಇರ್ದೊಡೇಂ - ಇದ್ದರೆ ಪ್ರಯೋಜನವೇನು? ಪ್ರಾವಣಶಕ್ತಿ-ಪೋಷಣಸಾಮರ್ಥ್ಯವು, ("ಅವರಕ್ಷಣೇ" ಎಂಬ ಧಾತುವಿನ ಮೇಲೆ ಲ್ಯುಟ್ಪ್ರತ್ಯಯುವಾಗಿಯೂ, "ಯುವೋರನಾಕೌ" ಎಂಬ ಸೂತ್ರದಿಂ ಅನಾದೇಶಂ ಬಂದು, 'ಪ್ರ' ಎಂಬುಪಸರ್ಗಂ ಕೂಡಿ ಪ್ರಾವಣವೆಂದಾಯಿತು) ಬಾಹ್ಯಸಮುಪಾಸ್ತಿಯೊಳೈಸೆ ಕಣಾ - ಬಾಹ್ಯೋಪಾಸನೆಯಲ್ಲಿ ಮಾತ್ರವೆ ತಾನೇ ಇರುವುದು.

**ಭಾವಾರ್ಥಬೋಧಿನಿ** - ೩೪ : ಆಕಳದ ದೇಹದಲ್ಲಿ ತುಪ್ಪವಿದ್ದರೆ ಪ್ರಯೋಜನವೇನು ? ಅದನ್ನು ಹೊರದೆಗೆಯದಿದ್ದರೆ ಆಕಳದ ರೋಗವನ್ನು ಪರಿಹರಿಸುವ ಮತ್ತು ಆಕಳಕ್ಕೆ ಪುಷ್ಟಿಯನ್ನುಂಟುಮಾಡುವ ಅಧಿಕಶಕ್ತಿಯು ಆ ತುಪ್ಪಕ್ಕೆ ಬರಲಾರದು. ಇದರಂತೆ ಶಿವನು ಅವ್ಯಕ್ತನಾಗಿ ಸಕಲ ಪ್ರಾಣಿಗಳ ಶರೀರದಲ್ಲಿದ್ದರೇನು ಪ್ರಯೋಜನ ? (ಅವ್ಯಕ್ತನಾದ ಶಿವನನ್ನು ಇಷ್ಟಲಿಂಗರೂಪದಿಂದ ವ್ಯಕ್ತನನ್ನಾಗಿ ಮಾಡಿಕೊಂಡು) ಆ ಲಿಂಗದ ಬಾಹ್ಯೋಪಾಸನೆಯನ್ನು ಮಾಡಿದರೆ ಮಾತ್ರ ಆತನಿಂದ ರಕ್ಷಣೆಯು ದೊರೆಯುವದು.

**ಅವತಾರಿಕೆ** : ಈ ಅರ್ಥಮಂ ಮತ್ತೆಯೂ ವಿವರಿಸುತ್ತಿರ್ಪಂ—

**ಚಂಪಕಮಾಲಾವೃತ್ತಂ**

೩೫ ಒಳಗೆ ಘೃತಸ್ವರೂಪಮಿರೆ ಭಾವಮದೇಂ ಬಹುಸಾಧನಕ್ರಿಯಾ-
ಬಳವಶಮಾಗಿ ಗೋವಿನ ಕಳೇವರದಿಂ ಪೊರಮಟ್ಟು ತಾನೆ ನಿ-
ಶ್ಚಳಸುಖಸಿದ್ಧಿದಪ್ರಬಲ ಭೇಷಜಮಾಗಿಹಪೋಲ್ ಸ್ವಕಾಂತರಾ
ಮಳಶಿವಲಿಂಗಮಿೂ ಪರಿ ಬಹಿಷ್ಕರಿಸಲ್ಕುಭದಂ ಶಿವಾಧವಾ

**ಟೀಕೆ** : ಘೃತಸ್ವರೂಪಂ - ತುಪ್ಪದ ಬಲ್ಮೆಯು, ಒಳಗೆ - ಗೋವಿನ ದೇಹದಲ್ಲಿ, ಇರೆ - ಇರಲಾಗಿ, ಭಾವಮದೇಂ - ಪ್ರಯೋಜನವೇನು ? ಗೋವಿನ - ಆಕಳದ, ಕಳೇವರದಿಂ - ದೇಹದತ್ತಣಿಂ, ಪೊರಮಟ್ಟು - ಹೊರಹೊರಟು ಬಂದು, ತಾನೆ - ಆ ಘೃತತಾನೇ, ಬಹು ...... ವಶಮಾಗಿ - ಬಹು - ಅನೇಕವಾದ, ಸಾಧನ - ಕಾರಣಂಗಳಿಗೂ, ಕ್ರಿಯಾ - ಕಾರ್ಯಂಗಳಿಗೂ, ಬಳ – ಪುಷ್ಟಿಕರಣಕ್ಕೂ ವಶಮಾಗಿ - ಅಧೀನವಾಗಿ, (ಕರೆದು, ಕಾಸಿ, ಹೆಪ್ಪನಿಕ್ಕಿ, ಮಥನಿಸಿ, ನವನೀತಮಂ ಮಾಡಿಯೆಂಬುದರ್ಥವು) ನಿಶ್ಚಳ ಸುಖಸಿದ್ಧಿದ ಪ್ರಬಲ ಭೇಷಜ ಮಾಗಿಹವೋಲ್ - ನಿಶ್ಚಳ - ಸ್ಥಿರವಾದ, ಸುಖ - ಸುಖದ, ಸಿದ್ಧಿ - ನಿಷ್ಪತ್ತಿಯನ್ನು, ದ - ಕೊಡುವಂಥ, ಪ್ರಬಲ - ಸತ್ವವನುಳ್ಳ, ಭೇಷಜಮಾಗಿಹವೋಲ್ - ಔಷಧವಾಗಿರುವ ಹಾಗೆ, ಸ್ವಂಕಾತರಾಮಳಶಿವಲಿಂಗಂ - ಸ್ವಕ - ತನ್ನ ಸಂಬಂಧವಾದ, ಅಂತರ - ಪ್ರಾಣ ಸ್ವರೂಪವಾದ, ಅಮಳ - ನಿರ್ಮಳವಾದ, ಶಿವಲಿಂಗಂ – ಶಿವಲಿಂಗವು, ಈ ಪರಿ - ಹಿಂದೆ ಹೇಳಿದ ರೀತಿಯಿಂದ, ಬಹಿಷ್ಕರಿಸಲ್ - ಬಾಹ್ಯಕ್ಕೆ ಬರಲಾಗಿ, ಶುಭಮಂ - ಸಂಸಾರವ್ಯಥೆಯಂ ಕೆಡಿಸಿ, ಶಿವಸಾಮರಸ್ಯಮಂ ಕೊಡುವುದು.

**ಭಾವಾರ್ಥಬೋಧಿನಿ** – **೩೫ :** ಹಸುವಿನ ಹೊಟ್ಟೆಯೊಳಗೆ ತುಪ್ಪವಿದ್ದ ರೇನು ಪ್ರಯೋಜನ ? ಹಸುವಿನಿಂದ ಹಾಲನ್ನು ಕರೆದು, ಕಾಸಿ, ಹೆಪ್ಪಿಟ್ಟು ಅದನ್ನು ಮಥಿಸಿ, ಬೆಣ್ಣೆಯನ್ನು ತೆಗೆದು, ಮತ್ತು ಕಾಸಿ ತುಪ್ಪವನ್ನು ಮಾಡಿ, ಆ ತುಪ್ಪದಿಂದ ಮಾಡಿದ ಔಷಧವನ್ನು ಹಸುವಿಗೆ ಕುಡಿಸಿದಾಗ ಅದು ಹಸುವಿನ ರೋಗನಿವಾರಣೆಗೂ ಪುಷ್ಟಿಯನ್ನುಂಟುಮಾಡುವುದಕ್ಕೂ ಅನುಕೂಲವಾಗುವದು. ಇದರಂತೆ ನಮ್ಮಂತ-ರ್ಗತವಾದ ಮತ್ತು ಪ್ರಾಣಸ್ವರೂಪವಾದ ಶಿವಲಿಂಗವನ್ನು ಗುರುವು ದೀಕ್ಷಾಸಂಸ್ಕಾರ ದಿಂದ ಹೊರದೆಗೆದು ನಮಗೆ ಕೊಟ್ಟಾಗ ಆ ಶಿವಲಿಂಗವು ತನ್ನುಪಾಸನೆಯ ಮೂಲಕ ವಾಗಿ ಲಿಂಗಾಂಗಸಾಮರಸ್ಯರೂಪವಾದ ಸುಖವನ್ನುಂಟುಮಾಡುವುದು.

**ಅವತಾರಿಕೆ** : ಇಷ್ಟಲಿಂಗ ಸಂಬಂಧದಿಂ ಜೀವಭಾವಂ ಕೆಡದೆಂಬ ವೇದಾಂತಿಯ ಶಂಕೆಯಂ ಪರಿಹರಿಸುತ್ತಿರ್ದಪಂ--

## ಉತ್ಪಲಮಾಲಾವೃತ್ತಂ

೩೬ ಕಾಷ್ಠದೊಳಿರ್ದ ವಹ್ನಿ ಮಥನೋದ್ಭವದಿಂ ತಲೆದೋರಿದಲ್ಲಿ ತ
ತ್ಕಾಷ್ಠದ ಭಾವಮುಂಟೆ ಬಳಿಕಾತ್ಮನೊಳಿರ್ದ ಪರಾಣುಲಕ್ಷಣಾ
ಧಿಷ್ಠಿತಲಿಂಗಮಾದಿಗುರುಸಂಸ್ಕೃತಿಯಿಂ ತಲೆದೋರಿದಲ್ಲಿ ತ
ನ್ನಿಷ್ಠುರಮಾತ್ಮಲೇಪ ಪಶುಭಾವಮದುಂಟೆ ಬಿಡಾ ಶಿವಾಥವಾ

**ಟೀಕೆ :** ಕಾಷ್ಠದೊಳ್ - ಕಟ್ಟಿಗೆಯಲ್ಲಿ, ಇರ್ದ್ದ, ಅಗ್ನಿ - ಬೆಂಕಿಯು ಮಥನೋದ್ಭವದಿಂ - ಮಥಿಸುವುದರಿಂದಾದ, ಉತ್ಪತ್ತಿಯಿಂದೆ, ತಲೆದೋರಿದಲ್ಲಿ-ಬಾಹ್ಯಕ್ಕೆ ಬಂದಲ್ಲಿ, ತತ್ಕಾಷ್ಠದ ಭಾವಂ - ಕಟ್ಟಿಗೆಯೆಂಬ ಭಾವನೆಯು, ಉಂಟೆ? ಇಲ್ಲ. ಬಳಿಕ - ಮರಳಿ, ಆತ್ಮನೊಳಿರ್ದ - ಆತ್ಮನಲ್ಲಿರ್ದಂಥ, ಪರಾಣುಲಕ್ಷಣಾಧಿಷ್ಠಿತಲಿಂಗಂ - ಪರ - ಉತ್ಕೃಷ್ಠವಾದ, ಅಣುಲಕ್ಷಣ - ಸೂಕ್ಷ್ಮರೂಪಿನಿಂ, ಅಧಿಷ್ಠಿತ - ಆಶ್ರಯಿಸಲ್ಪಟ್ಟ, ಲಿಂಗಂ - ಪ್ರಾಣಲಿಂಗವು, ಆದಿಗುರುಸಂಸೃತಿಯಿಂ-ಎಲ್ಲವಕ್ಕೂ ಮೊದಲಿಗನಾದ ಗುರುವಿನ ಸೇವೆಯಿಂದ, (ಸೃಗತೌ ಎಂಬ ಧಾತು) (ಅಥವಾ ಗುರುವಿನ ದೀಕ್ಷಾಸಂಸ್ಕಾರದಿಂದ) ತಲೆದೋರಿದಲ್ಲಿ - ಪ್ರಕಟವಾದಲ್ಲಿ, ತತ್ - ಆ, ನಿಷ್ಠುರಂ - ಕಠಿಣವಾದಂಥ, ಅಮು ಆತ್ಮಲೇಪಪಶುಭಾವಂ-ಸ್ವಸ್ವರೂಪಕ್ಕೆ ಆವರಣವಾದ ಆ ಜೀವಭಾವವು, ಉಂಟೆ? (ಇಲ್ಲವೆಂದರ್ಥ) ಬಿಡಾ - ಬಿಡು, (ಈಯರ್ಥದಲ್ಲಿ "ಯಥಾ ಕಾಷ್ಠೋದ್ಭವೋ ವಹ್ನಿಃ ಕಾಷ್ಠಮೇವ ವಿನಿರ್ದಹೇತ್ | ತಥಾ ಕರ್ಮೋದ್ಭವಂ ಜ್ಞಾನಂ ಕರ್ಮೈವ ಪ್ರವಿನಾಶಯೇತ್" ಎಂದು ವಿಶೇಷಾರ್ಥ ಪ್ರಕಾಶಿಕೆಯ ವಚನಮುಂಟು.)

**ಭಾವಾರ್ಥಬೋಧಿನಿ - ೩೬ :** ಕಟ್ಟಿಗೆಯಲ್ಲಿದ್ದ ಬೆಂಕಿಯನ್ನು ಮಥನ ಮಾಡಿ ಕಡೆಗೆ ತೆಗೆದಾಗ ಆ ಕಟ್ಟಿಗೆಯ ಸ್ವಭಾವವುಳಿಯುವುದೇ? ಕಡೆಗೆ ತೆಗೆದ ಬೆಂಕಿಯಿಂದ ಆ ಕಟ್ಟಿಗೆಯು ಸುಟ್ಟುಹೋಗಿ, ಅದೂ ಬೆಂಕಿಯೆ ಆಗಿಬಿಡುವುದು. ಅದರಂತೆ ಆತ್ಮನಲ್ಲಿರುವ ಅತ್ಯಂತ ಸೂಕ್ಷ್ಮವಾದ ಪ್ರಾಣಲಿಂಗವನ್ನು ಗುರುವು ದೀಕ್ಷಾಸಂಸ್ಕಾರದಿಂದ ಹೊರದೆಗೆದು, ಇಷ್ಟಲಿಂಗವನ್ನಾಗಿ ಮಾಡಿದಾಗ, ಇಷ್ಟಲಿಂಗ ಸಂಬಂಧಿಯಾದಾತ್ಮನಲ್ಲಿ ಮಲಸಂಬಂಧವಾದ ಪಶುಭಾವವು ಇರುವುದುಂಟೇ? ಇರಲಾರದೆಂದು ತಾತ್ಪರ್ಯ.

**ಚಂಪಕಮಾಲಾವೃತ್ತಂ**

೩೭ ಪೊರಗೊಳಗಾಯ್ತು ನೋಳ್ಪೊಡೊಳಗೇಪೊರಗಾಯ್ತು ಗುರೂಪದೇಶದಿಂ
ಪೊರಗೊಳಗೆಂಬ ಸಂಶಯಮದಿಲ್ಲದೆ ಹೋಯ್ತು ವಿಶುಷ್ಕ ಕಾಷ್ಠದೊಳ್
ಮರೆವಿಡಿದಿರ್ದ್ದ ವಹ್ನಿಯದುತಾಂ ಪೊರಗಾದೊಡೆ ತಾನೊಳಗಾಯ್ತು ಕಾಷ್ಠಮೊಂ
ದದೊಳಿರದೊಂದಡಂಗೆ ಪೊರಗಿಲ್ಲೊಳಗಿಲ್ಲ ಕಣಾ ಶಿವಾಧ್ವಾ

**ಟೀಕೆ :** ಗುರೂಪದೇಶದಿಂ - ಶ್ರೀ ಗುರೂಪದೇಶದಿಂದ, ನೋಳ್ಪೊಡೆ - ವಿಚಾರಿಸಲಾಗಿ, ಒಳಗೇ - ಅಂತರಂಗದಲ್ಲಿರ್ಪ ಚಿತ್ಕಳಾಲಿಂಗವೇ, ಪೊರಗಾಯ್ತು - ಇಷ್ಟಲಿಂಗವಾಯ್ತು, ಪೊರಗು - ಬಾಹ್ಯದಲ್ಲಿರ್ಪ ಇಷ್ಟಲಿಂಗವೇ, ಒಳಗಾಯ್ತು - ಪ್ರಾಣಲಿಂಗವಾಯ್ತು, ಪೊರಗು - ಒಳಗು ಎಂಬ - ಇದು ಬಾಹ್ಯವು ಇದು ಅಂತರವೆಂಬ, ಆದು ಸಂಶಯಂ - ಆ ಸಂದೇಹವು, ಇಲ್ಲದೆ ಪೋಯ್ತು - ಅಡಗಿತು, ಅದೆಂತೆಂದೊಡೆ, ವಿಶುಷ್ಕಕಾಷ್ಠದೊಳ್ - ಒಣಗಿದ ಕಟ್ಟಿಗೆಯಲ್ಲಿ, ಮರೆವಿಡಿದಿರ್ಪ - ಮರೆಯಾಗಿರ್ಪ, ವಹ್ನಿ - ಅಗ್ನಿಯು, ಪೊರಗಾದೊಡೆ - ಬಾಹ್ಯಕ್ಕೆ ಬಂದಲ್ಲಿ, ಕಾಷ್ಠಂ - ಕಟ್ಟಿಗೆಯು, ತಾಂ - ಅದು, ಒಳಗಾಯ್ತು - ಅಂತಸ್ಥವಾಯ್ತು, ಒಂದರೊಳೊಂದಡಂಗೆ :- ಹೀಗೆ ಒಂದರೊಳೊಂದು ಅಡಗಿ, ಪೊರಗಿಲ್ಲೊಳಗಿಲ್ಲ ಕಣಾ - ಹೊರಗೆಂಬ ಕಾಷ್ಠವೂ ಒಳಗೆಂಬ ಅಗ್ನಿಯೂ ಇಲ್ಲದೆ ಪೋದುದು. (ಗುರುಕೃಪೆಯಿಂದ ಚಿತ್ಕಲಾಲಿಂಗಮಂ ಬಾಹ್ಯಕ್ಕೆ ತಂದುಕೊಂಡು, ಆ ಬಾಹ್ಯಲಿಂಗದಲ್ಲಿ ಸತ್ಕ್ರಿಯೋಪಚಾರಮಂ ಮಾಡಿ, ಪ್ರಾಣಲಿಂಗ ಸಂಬಂಧಿಯಾದ ಶರಣನು ಇಷ್ಟಪ್ರಾಣವೆಂಬ ಭಾವವಿಲ್ಲದೆ ಮಹಾಲಿಂಗಸ್ವರೂಪನಾಗಿರ್ಪನೆಂಬುದಭಿಪ್ರಾಯಂ)

**ಭಾವಾರ್ಥಬೋಧಿನಿ - ೩೭ :** ಗುರೂಪದೇಶದಿಂದ ಅಂತರ್ಗತವಾದ ಮತ್ತು ಚಿತ್ಕಲಾಸ್ವರೂಪವಾದ ಪ್ರಾಣಲಿಂಗವೇ ಹೊರಗಿನ ಇಷ್ಟಲಿಂಗವಾಯ್ತು. ಮತ್ತು ಆ ಇಷ್ಟಲಿಂಗವೇ ಒಳಗಿನ ಪ್ರಾಣಲಿಂಗವಾಯ್ತು. ಎಂದರೆ ಇದು ಒಳಗಿನದು, ಇದು ಹೊರಗಿನದು ಎಂಬ ಸಂದೇಹವಿಲ್ಲದಂತಾಯ್ತು. ಹೇಗೆಂದರೆ :

ಒಣ ಕಟ್ಟಿಗೆಯ ಮರೆಯಲ್ಲಿದ್ದ ಬೆಂಕಿಯನ್ನು ಮಥಿಸಿ ಹೊರದೆಗೆದಾಗ ಆ ಕಟ್ಟಿಗೆಯು ಬೆಂಕಿಯೊಳಗೆ ಸೇರುವುದು. ಎಲ್ಲವೂ ಸುಟ್ಟುಹೋದ ಮೇಲೆ ಇದು ಹೊರಗಿನ ಕಟ್ಟಿಗೆಯೂ, ಇದು ಒಳಗಿನ ಬೆಂಕಿಯೂ ಎಂಬ ಭೇದವಿಲ್ಲದಂತಾಗುವುದು. ಇದರಂತೆ ಗುರುವು ಕರುಣದಿಂದ ಅಂತರ್ಗತ ಪ್ರಾಣಲಿಂಗವನ್ನು ಬಹಿರ್ಗತಲಿಂಗವನ್ನಾಗಿ ಮಾಡಿಕೊಟ್ಟ ಮೇಲೆ ಅದನ್ನು ಧರಿಸಿ, ತದುಪಾಸನೆಯನ್ನು ಮಾಡುವ ಶರಣನು ಇದು ಇಷ್ಟಲಿಂಗ ಇದು ಪ್ರಾಣಲಿಂಗವೆಂಬ ಭೇದವಿಲ್ಲದಾತನಾಗಿ ಮಹಾಲಿಂಗಸ್ವರೂಪಿಯಾಗಿ ಕಂಗೊಳಿಸುವನು.

## ಉತ್ಪಲಮಾಲಾವೃತ್ತಂ

೩೮ ಅಂತರಸಾಕ್ಷಿ ಚಿದ್ಘನಪರಾತ್ಪರಲಿಂಗಮನಾದಿ ದೇಶಿಕಂ
ಚಿಂತಿಸಿ ತಂದು ಬಾಹ್ಯಕರಣಕ್ಕುಪದೇಶಮನೊಲ್ದು ಮಾಡೆ ಮು
ನ್ನೆಂತಿರುತಿರ್ದುದಂತುಭಯ ಸಂಗಶರೀರದೊಳೈಕ್ಯವಾಗಿ ವಿ
ಶ್ರಾಂತಿಯನೆಯ್ದುದಲ್ಲಿ ಬಳಿಕೇನೆನಬರ್ಪುದದಂ ಶಿವಾಧವಾ

**ಟೀಕೆ :** ಆದಿವೇಶಿಕಂ – ಎಲ್ಲಕ್ಕೂ ಮೊದಲಿಗನಾದ ಶ್ರೀಗುರುವು, ಅಂತರ ......ಲಿಂಗಮಂ – ಅಂತರಸಾಕ್ಷಿ – ಪ್ರಾಣಕ್ಕೆ ಸಾಕ್ಷಿಯಾಗಿರ್ಪಂಥ, ಜೀವ್ವನ – ಜ್ಞಾನದಿಂ ದಟ್ಟತ್ತಾದಂಥ, ಪರಾಹ್ವಯಲಿಂಗಮಂ – ಪರಮಾತ್ಮನೆಂಬ ಪೆಸರನುಳ್ಳ ಲಿಂಗವನ್ನು, ಜಂತಿಸಿ – ನೆನೆದು, ಬಾಹ್ಯಕರಣಕ್ಕೆ – ಬಾಹ್ಯಕ್ರಿಯೆಗೆ, ತಂದು – ತಂದಾತನಾಗಿ, ಒಲ್ದು – ಪ್ರೀತಿಸಿ, ಉಪದೇಶಮಂ ಮಾಡೆ – ಕ್ರಿಯಾದೀಕ್ಷೆಯಂ ಮಾಡಲಾಗಿ, ಮುನ್ನ – ಮೊದಲು, ಎಂತಿರುತಿರ್ದುದು – ಹೇಗಿರುತ್ತಿರ್ದುದೋ, ಅಂತೆ – ಹಾಗೆ, ಉಭಯಸಂಗ ಶರೀರದೊಳ್ – ಜ್ಞಾನಕ್ರಿಯಾತ್ಮಕವಾದ ಶರೀರ ದಲ್ಲಿ, ಐಕ್ಯಮಾಗಿ - ಏಕತ್ವವನ್ನೈದಿ, ವಿಶ್ರಾಂತಿಯನ್ನೈದಿದಲ್ಲಿ - ಕ್ರಿಯಾನಿಷ್ಪತ್ತಿಯ ನ್ನೈದಿದಲ್ಲಿ, ಬಳಿಕ - ಮರಳಿ, ಅದಂ – ಆ ಮಾರ್ಗವನ್ನು, ಏನೆನಬರ್ಪುದು – ಏನೆಂದು ಹೇಳಬಹುದು ?

**ಭಾವಾರ್ಥಬೋಧಿನಿ - ೩೮ :** ಶ್ರೀಗುರುವು ಶಿಷ್ಯನಲ್ಲಿರುವ ಜ್ಞಾನಘನ ವಾದ ಪರಮಾತ್ಮಸಾಮಕವಾದ ಅಂತರ್ಗತ ಪ್ರಾಣಲಿಂಗವನ್ನು ತನ್ನ ಭಾವಮನೋ ದೃಷ್ಟಿಗಳಿಂದ ಹೊರಗೆ ತಂದು, ಬಾಹ್ಯಕ್ರಿಯೋಪಚಾರಯೋಗ್ಯವನ್ನಾಗಿ (ಇಷ್ಟಲಿಂಗ ವನ್ನಾಗಿ) ಮಾಡಿ, ಕ್ರಿಯಾದೀಕ್ಷೆಯಂ ಮಾಡುವನು. ಬಳಿಕ ಆ ಜ್ಞಾನಲಿಂಗವು (ಪ್ರಾಣಲಿಂಗವು) ಮೊದಲಿನಂತೆಯೇ ಜ್ಞಾನಕ್ರಿಯಾಮಯವಾದ ಅಂತರ್ಬಾಹ್ಯ ಶರೀರಗಳಲ್ಲಿ ಏಕತ್ವವನೊಂದಿ ಎಂದರೆ ಜ್ಞಾನಲಿಂಗ (ಪ್ರಾಣಲಿಂಗ) ಕ್ರಿಯಾಲಿಂಗ (ಇಷ್ಟಲಿಂಗ)ವೆಂಬ ಭೇದವಳಿಯುವುದು. ಈ ರೀತಿಯಾಗಿ ಭೇದವಳಿದು ಕ್ರಿಯಾ ವಿಶ್ರಾಂತಿಯನ್ನೊಂದುವ ಶರಣನ ಮಾರ್ಗವನೇನೆಂದು ಹೇಳಬಹುದು. ಎಂದರೆ, ಶರಣನ ಕ್ರಿಯೆಗಳೆಲ್ಲವೂ ಲಿಂಗಾರ್ಪಿತವಾಗಿಯೇ ಇರುವುದರಿಂದ ಅವು (ಶುಭಾಶುಭ ಫಲದ ಸೋಂಕಿಲ್ಲದೆ) ತಾವಾಗಿಯೇ ಆ ಶರಣನಲ್ಲಿ ಸುಖಲಕ್ಷಣದಿಂದ ಲಕ್ಷಿತವಾದ ವಿಶ್ರಾಂತಿಯನ್ನು ಹೊಂದುವವು. ಇಂತಹ ವಿಶ್ರಾಂತಿಯೇ ಕ್ರಿಯಾವಿಶ್ರಾಂತಿ ಯೆನಿಸುವದು. ಈ ಬಗೆಯ ಕ್ರಿಯಾವಿಶ್ರಾಂತಿಯ ಶರಣಮಾರ್ಗವು ಅಸದೃಶವೆಂದು ತಾತ್ಪರ್ಯ.

**ಚಂಪಕಮಾಲಾವೃತ್ತಂ**

೩೯ ನೆನೆವುದರಿಂ ನಿರೀಕ್ಷಿಸುವುದತ್ಯಧಿಕಂ ನೆನಹಿಂ ನಿರೀಕ್ಷೆಯಿಂ
ದನುದಿವಸಂ ಸಮರ್ಚಿಸುವುದತ್ಯಧಿಕಂ ನೆನಹಿಂ ನಿರೀಕ್ಷೆಯಿಂ
ದನುದಿವಸಂ ಸಮರ್ಚಿಪುದರಿಂ ಶಿವಲಿಂಗಮನಂಗದಲ್ಲಿ ಸು-
ಮ್ಮನೆ ಧರಿಸಿರ್ಪುದತ್ಯಧಿಕಮತ್ಯಧಿಕಂ ಪಿರುತಂ ಶಿವಾಧವಾ

**ಟೀಕೆ :** ನೆನೆವುದರಿಂ - ಸ್ಮರಿಸುವುದಕ್ಕಿಂತಲೂ,ನಿರೀಕ್ಷಿಸುವುದು - ನೋಡುವುದು, ಅತ್ಯಧಿಕಂ - ಬಲುದೊಡ್ಡದು, ನೆನಹಿಂ ನಿರೀಕ್ಷೆಯಿಂ - ಸ್ಮರಣದರ್ಶನಗಳಿಗಿಂತಲೂ, ಅನುದಿವಸಂ - ಆವಾಗಳೂ, ಸಮರ್ಚಿಸುವುದು - ಪೂಜಿಸುವುದು, ಅತ್ಯಧಿಕಂ - ಮಿಗೆ ವೆಗ್ಗಳವು, ನೆನಹಿಂ ನಿರೀಕ್ಷೆಯಿಂದನುದಿವಸಂ ಸಮರ್ಚಿಪುದರಿಂ - ಸ್ಮರಣನಿರೀಕ್ಷಣ ಪ್ರತಿದಿವಸ ಪೂಜೆಗಳಿಗಿಂತಲೂ, ಶಿವಲಿಂಗಮಂ - ಪರಮಮಂಗಲಸ್ವರೂಪವಾದ ಲಿಂಗವನ್ನು, ಅಂಗದಲ್ಲಿ - ಶರೀರದಲ್ಲಿ, ಸುಮ್ಮನೆ ಧರಿಸಿರ್ಪುದು - ಸಂದೇಹವಿಲ್ಲದೆ ಧರಿಸಿರುವುದು, ಅತ್ಯಧಿಕಮತ್ಯಧಿಕಂ - ಮಿಗೆ ದೊಡ್ಡಿತ್ತು ಮಿಗೆ ದೊಡ್ಡಿತ್ತು, ನಿರುತಂ - ಇದು ನಿಶ್ಚಯವು (ವೇದಾಂತಿಗಳೂ ಕರ್ಮಯೋಗಿಗಳೂ ಸಿದ್ಧಾಂತಿಗಳೂ ಮನನನಿರೀಕ್ಷಣಯಜನಾದಿಗಳಿಂ ವಸ್ತುವ ಸಾಧಿಸುವೆವೆಂಬರು. ಶಿವಶರಣರಾದೊಡೆ ಪ್ರತ್ಯಕ್ಷವಾಗಿ ಆ ವಸ್ತುವನೇ ಅಂಗದ ಮೇಲೆ ಧರಿಸಿ, ಆ ವಸ್ತುಸ್ವರೂಪರಾಗಿರುವ ಕಾರಣ, ಆ ಮನನನಿರೀಕ್ಷಣಯಜನಾದಿಗಳಿಗಿಂತ ಲಿಂಗಧಾರಣವೇ ವಿಶೇಷವೆಂದಭಿಪ್ರಾಯಂ)

**ಭಾವಾರ್ಥಬೋಧಿನಿ - ೩೯ :** ಶಿವಲಿಂಗದ ಸ್ಮರಣಕ್ಕಿಂತಲೂ ದರ್ಶನವು ಅಧಿಕ. ಆ ಸ್ಮರಣದರ್ಶನಗಳಿಗಿಂತಲೂ ಆ ಲಿಂಗವನ್ನು ಸದಾ ಪೂಜಿಸುವುದು ಅಧಿಕವಾದುದು. ಆ ಸ್ಮರಣದರ್ಶನಪೂಜೆಗಳಿಗಿಂತಲೂ ಆ ಮಂಗಳ ಲಿಂಗವನ್ನು ದೇಹದಲ್ಲಿ ಸಂಶಯವಿಲ್ಲದೆ ಸರ್ವದಾ ಧರಿಸಿರುವುದು ಅತ್ಯಂತ ಶ್ರೇಷ್ಠವು.

## ಚಂಪಕಮಾಲಾವೃತ್ತಂ

೪೦ ಮನನದ ಕಾಂಕ್ಷೆ ದರ್ಶನಕಳಾಪರಿಣಾಮವಿಲೀನಮಾಗಿ ದ-
ರ್ಶನದ ಕಳಾಭಿವಾಂಛೆ ಪರಿಮರ್ಶನಪೂಜನ ಲೀನಮಾಗಿ ಪೂ-
ಜನಪರಿಮರ್ಶನ ಕ್ರಿಯೆಯೆ ಸಂಸ್ಪೃಶಧಾರಣಲೀನಮಾಗಿ ತಾ
ನೆನಿಸಿದ ಲಿಂಗಸಂಗದ ಗುಣಂ ಪರಮೈಕ್ಯಪದಂ ಶಿವಾಥವಾ

**ಟೀಕೆ :** ಮನನದ - ಸ್ಮರಣೆಯಲ್ಲಿಯ, ಕಾಂಕ್ಷೆ – ಬಯಕೆಯು, ದರ್ಶನ... ವಿಲೀನಮಾಗಿ - ದರ್ಶನ - ನೋಟದ, ಕಳಾ - ಸೊಬಗಿನ, ಪರಿಣಾಮ - ಸುಖದಲ್ಲಿ, ವಿಲೀನಮಾಗಿ - ಅಡಗಿ, ದರ್ಶನಕಳಾಭಿವಾಂಛೆ - ಆ ನೋಟದ ಒಪ್ಪುವ ಬಯಕೆಯು, ಪರಿಮರ್ಶನಪೂಜನಲೀನಮಾಗಿ - ಮುಟ್ಟಿ ಪೂಜಿಸುವಲ್ಲಿ ಅಡಗಲಾಗಿ, ಪೂಜನಪರಿಮರ್ಶನ ಕ್ರಿಯೆಯೆ - ಆ ಮುಟ್ಟಿ ಪೂಜಿಸುವ ಕ್ರಿಯೆಯೆ, ಸಂಸ್ಪೃಶಧಾರಣಲೀನ

ವಾಗಿ–ಅಂಗದಲ್ಲಿ ಸೋಂಕಿ ಧರಿಸುವಲ್ಲಿ ಅಡಗಿ, ತಾನೆನಿಸಿದ – ಆ ಲಿಂಗಧಾರಣವು ತಾನೆನಿಸಿವ, ಅಂಗಸಂಗವ ಗುಣಂ - ಲಿಂಗಾಂಗ ಸಂಯೋಗದ ಮಾರ್ಗವು, ಪರಮೈಕ್ಯಪದಂ – ಉತ್ಕೃಷ್ಟವಾದ ಘನಲಿಂಗವು.

**ಭಾವಾರ್ಥಬೋಧಿನಿ** – ೪೦ : ಲಿಂಗದ ಸ್ಮರಣದಲ್ಲಿರುವ ಅಪೇಕ್ಷೆಯು ಆ ಲಿಂಗದರ್ಶನವಾದಲ್ಲಿ ಅಡಗುವುದು. ದರ್ಶನಾಪೇಕ್ಷೆಯು ಆ ಲಿಂಗವನ್ನು ಮುಟ್ಟಿ ಪೂಜಿಸಿದಲ್ಲಿ ಅಡಗುವುದು. ಈ ಪ್ರಕಾರವಾದ ಸ್ಮರಣದರ್ಶನ ಸ್ಪರ್ಶನ ಪೂಜೆಗಳು ಲಿಂಗಧಾರಣದಲ್ಲಿ ಅಡಗಿರುವವು – ಎಂದರೆ – ಲಿಂಗಧಾರಣ ಮಾತ್ರ ದಿಂದ ಆ ಲಿಂಗದ ಸ್ಮರಣವೂ, ದರ್ಶನವೂ, ಸ್ಪರ್ಶನವೂ, ಪೂಜೆಯೂ ಅನಾಯಸ ವಾಗಿ ಸಿದ್ಧಿಸುವವು. ಆದುದರಿಂದ ಈ ಲಿಂಗಾಂಗ ಸಂಯೋಗದ ಮಾರ್ಗವು ಉತ್ಕೃಷ್ಟವಾದ ಲಿಂಗಾಂಗೈಕ್ಯ ಮಾರ್ಗವಾಗಿರುವುದು.

**ಚಂಪಕಮಾಲಾವೃತ್ತಂ**

೪೧ ಇದು ಶಿವಧರ್ಮಮಾರ್ಗಮಿದು ವೀರಶಿವಾಗಮತಂತ್ರದರ್ಥಮಿಂ-
ತಿದು ಸಕಲಶ್ರುತಿಸ್ಮೃತಿಪುರಾಣರಹಸ್ಯದ ಸಾರಭೂತಮೆಂ–
ದೊದರಿ ಗುರೂಪದೇಶ ವಚನಂಗಳೊಡಂಬಡೆ ಪೇಳ್ದ ಲಿಂಗಸಂ-
ಗದ ಪರಮೈಕ್ಯಮಂ ತಿಳಿವುದೇ ಘನಮುಕ್ತಿಪದಂ ಶಿವಾಧವಾ

**ಟೀಕೆ** : ಇದು - ಶಿವಲಿಂಗಧಾರಣವೆಂಬುದು, ಶಿವಧರ್ಮಮಾರ್ಗಂ - ಶಿವಾ ಚಾರಪಥವು, ಇದು - ಈ ಶಿವಲಿಂಗಧಾರಣವು, ವೀರಶಿವಾಗಮತಂತ್ರದ - ವೀರಶೈವಾ ಗಮಸಿದ್ಧಾಂತದ, ಅರ್ಥಂ - ಅಭಿಪ್ರಾಯವು, ("ತಂತ್ರಂ ಪ್ರಧಾನೇ ಸಿದ್ಧಾಂತೇ" ಎಂದು ನಾನಾರ್ಥಕೋಶವು) ಇಂತಿದು - ಇಂತಪ್ಪ ಲಿಂಗಧಾರಣವು, ಸಕಲಶ್ರುತಿ ಸ್ಮೃತಿ ಪುರಾಣ ರಹಸ್ಯದ – ಸಮಸ್ತವಾದ ಶ್ರುತಿಸ್ಮೃತಿ ಪುರಾಣಗಳ ಗೂಢವಾದ, ಸಾರಭೂತಂ – ಸಾರವು, ಎಂದು - ಇಂತೆಂದು, ಗುರೂಪದೇಶವಚನಂಗಳ್ - ಶ್ರೀ ಗುರುನಿರೂಪವಾಕ್ಯಂಗಳು, ಒಡಂಬಡೆ - ಸಮ್ಮತವಾಗುವಂತೆ, ಒದರಿ–ಬೊಬ್ಬಿಟ್ಟು, ಪೇಳ್ದ – ಹೇಳಿದಂಥ, ಲಿಂಗಸಂಗದ - ಲಿಂಗಾಂಗಸಂಬಂಧದ, ಪರಮೈಕ್ಯಮಂ– ಉತ್ಕೃಷ್ಟವಾದೇಕತ್ವವನು, ತಿಳಿವುದೇ – ಅರಿವುದೇ, ಘನಮುಕ್ತಿಪದಂ - ದೊಡ್ಡಿ ತ್ತಾದ ಮೋಕ್ಷಪದವು.

**ಭಾವಾರ್ಥಬೋಧಿನಿ** - ೪೧ : ಈ ಶಿವಲಿಂಗಧಾರಣವೇ ಶಿವಾಚಾರ ಮಾರ್ಗವು. ಇದೇ ವೀರಶೈವಾಗಮ ಸಿದ್ಧಾಂತಾರ್ಥವು. ಇದೇ ಸಕಲವೇದ ಸ್ಮೃತಿ ಪುರಾಣಗಳ ರಹಸ್ಯಾರ್ಥದ ಸಾರವು - ಎಂಬುದಾಗಿ ಶ್ರೀಗುರುವು ಮನಸ್ಸು ಒಡಂಬಡುವಂತೆ ಘಂಟಾಘೋಷವಾಗಿ ನಿರೂಪಿಸುವ ಲಿಂಗಾಂಗಸಂಬಂಧದ ಸಮರಸ ಸ್ಥಿತಿಯನ್ನು ತಿಳಿದುಕೊಳ್ಳುವುದೇ ಶ್ರೇಷ್ಠವಾದ ಮೋಕ್ಷಮಾರ್ಗವು.

**ಚಂಪಕಮಾಲಾವೃತ್ತಂ**

೪೨ ಗುರುವಚನಂಪ್ರಮಾಣ ಮಖಿಲಾರ್ಯ ಪುರಾತನದಿವ್ಯಸೂಕ್ತಿಗಳ್
ನಿರವಧಿಕಂ ಪ್ರಮಾಣಮಮಲಾಗಮಶೈವರಹಸ್ಯವಾಕ್ಯ ತ
ತ್ಪರ ಮತವೇ ಪ್ರಮಾಣಮನುಮಾಸರಮಂಗವ ಲಿಂಗದೈಕ್ಯ ನಿ-
ರ್ಭರ ಮತವೇ ಪ್ರಮಾಣಮೆರಡೆಂಬುದು ಬಂಧಕರಂ ಶಿವಾಥವಾ

**ಟೀಕೆ :** ಗುರುವಚನಂ - ಶ್ರೀಗುರುನಿರೂಪಣವು, ಪ್ರಮಾಣಂ - ಲಿಂಗ ಧಾರಣವೇ ಮುಖ್ಯವೆಂಬುದಕ್ಕೆ ಪ್ರಮಾಣವು, ಅಖಿಲಾರ್ಯ ಪುರಾತನ ದಿವ್ಯಸೂಕ್ತಿಗಳ್ - ಅಖಿಲ - ಸಮಸ್ತವಾದ, ಆರ್ಯ - ಹಿರಿಯರುಗಳಾದ, ಪುರಾತನ - ಬಸವಾದಿ ಪುರಾತನರ, ದಿವ್ಯ - ಮನೋಹರವಾದ, ಸೂಕ್ತಿಗಳ್-ಶುಭವಾದ ವಾಕ್ಯಗಳು, ನಿರವಧಿಕಂ - ವೆಗ್ಗಳವಾಗಿ, ಪ್ರಮಾಣಂ ಪ್ರಮಾಣವು, ಅಮಲಾ... ...ತತ್ಪರ ಮತವೇ - ಅಮಲ - ನಿರ್ಮಲವಾದ, ಆಗಮ - ಶಿವಾಗಮಗಳಲ್ಲಿಯು, ಶೈವರಹಸ್ಯ- ಶಿವರಹಸ್ಯದಲ್ಲಿಯು, ವಾಕ್ಯತತ್ಪರಮತವೇ - ವಾಕ್ಯನಿರೂಪಣದಲ್ಲಿ ಏಕಪ್ರುಕ್ಕವರ ಮಾರ್ಗವೇ, ಪ್ರಮಾಣಂ - ಪ್ರಮಾಣವು, ಅನುಮಾಸರಂ - ಅವಾಗಳೂ, ಅಂಗದ ಲಿಂಗದೈಕ್ಯನಿರ್ಭರಮತವೇ - ಲಿಂಗಾಂಗಸಂಬಂಧದಲ್ಲಿ ನಿಷ್ಠೆಯುಳ್ಳವರ ಮತವೇ, ಪ್ರಮಾಣಂ - ಪ್ರಮಾಣವು, ಎರಡೆಂಬುದು - ಈ ಲಿಂಗಧಾರಣವಲ್ಲದೆ ಬೇರೊಂದುಂಟೆಂಬುದು, ಬಂಧಕರಂ - ಸಂಸಾರಬಂಧಮಂ ಮಾಳ್ಪುದು.

**ಭಾವಾರ್ಥಬೋಧಿನಿ** - ೪೨ : ಲಿಂಗಧಾರಣವೆ ಮುಖ್ಯವೆಂಬ ವಿಷಯದಲ್ಲಿ ಶ್ರೀಗುರುವಚನವೂ ಹಿರಿಯರಾದ ಬಸವಾದಿ ಪುರಾತನರ ವಚನಗಳೂ ಪ್ರಮಾಣ. ಇದಲ್ಲದೆ ಶಿವಾಗಮಗಳ ಮತ್ತು ಶಿವರಹಸ್ಯದ ಉಕ್ತಿಗಳಲ್ಲಿ ನಿಷ್ಠೆಯುಳ್ಳವರ ಮಾರ್ಗವೂ, ಲಿಂಗಾಂಗಸಂಬಂಧದಲ್ಲಿ ಶ್ರದ್ಧೆಯಿಟ್ಟು ನಡೆಯುವವರ ಮತವೂ ಶ್ರೇಷ್ಠವಾದ ಪ್ರಮಾಣವು. ಈ ಲಿಂಗಧಾರಣ ಮಾರ್ಗಕ್ಕಿಂತಲೂ ಬೇರೊಂದು

ಮಾರ್ಗವುಂಟೆಂದು ಹೇಳುವುದು ಸಂಸಾರದ ಬಂಧನವನ್ನುಂಟುಮಾಡುವುದಾಗಿದೆ. ( ಮುಕ್ತಿಯನ್ನು ಪಡೆವುದಕ್ಕೆ ಲಿಂಗಧಾರಣಕ್ರಮವೇ ಅತ್ಯಂತ ಯೋಗ್ಯವಾದುದೆಂದಭಿಪ್ರಾಯ )

**ಅವತಾರಿಕೆ :** ತತ್ವಮಸ್ಯಾದಿ ಮಹಾವಾಕ್ಯಂಗಳು ಲಿಂಗಾಂಗಸಂಬಂಧವನ್ನೇ ಪ್ರತಿಪಾದಿಸುತಿರ್ಪವೆಂದು ಪೇಳುತ್ತಿರ್ದಪಂ—

## ಉತ್ಪಲಮಾಲಾವೃತ್ತಂ

೪೩ ಆದಿಗುರೂಪದೇಶವಚನಾರ್ಥಮನೊರ್ಮೆ ವಿವೇಕದೃಷ್ಟಿಯಿಂ
ಭೇದಿಸಿ ನೋಡೆ ತತ್ವಮಸಿಯೆಂದುವಲಾ ವ್ಯತಿರೇಕಬುದ್ಧಿಯಿಂ
ವಾದಿಸಿ ಕಾಣ್ಬ ನಿಶ್ಚಯಮಿದೇಂ ಸ್ವಯಮೇವ ಶಿವಾತ್ಮಲಿಂಗಮೆಂ
ದೋದುವುದೇ ನಿಜೈಕ್ಯಪದಸಿದ್ಧಿಗೆ ಕಾರಣಿಕಂ ಶಿವಾಧವಾ

**ಟೀಕೆ :** ಆದಿ……ರ್ಥಮಂ - ಆದಿಗುರು - ಎಲ್ಲಕ್ಕೂ ಮೂಲನಾದ ಶ್ರೀಗುರುವಿನ, ಉಪದೇಶ ವಚನಾರ್ಥಮಂ - ನಿರೂಪಣ ವಾಕ್ಯಾರ್ಥವನ್ನು, ಒರ್ಮೆ - ಒಂದುವೇಳೆ, ವಿವೇಕದೃಷ್ಟಿಯಿಂ - ಜ್ಞಾನದೃಷ್ಟಿಯಿಂದೆ, ಭೇದಿಸಿ ನೋಡೆ - ಆರೈದು ನೋಡಲಾಗಿ, ತತ್ತ್ವಮಸಿಯೆಂದುದಲಾ - ಆ ಪರಬ್ರಹ್ಮವೇ ನೀನೆಂದು ಹೇಳಿತ್ತಲ್ಲವೆ? ಎಲೈ ದ್ವೈತವಾದಿ - ವ್ಯತಿರೇಕಬುದ್ಧಿಯಿಂ - ವಿಪರೀತ ಜ್ಞಾನದಿಂದೆ, ವಾದಿಸಿ - ತತ್ಪದಸ್ವರೂಪಬ್ರಹ್ಮದಧೀನಂ ತ್ವಂ ಪದಮೆಂದು ವಾದಿಸಿ, ಕಾಣ್ಬ ನಿಶ್ಚಯಂ - ನೋಡುವಂಥ ನಿರುಗೆಯು, ಇದೇಂ - ಇದೇನು ಪ್ರಯೋಜನವು? ( ಮತ್ತಂ, ಎಲೈ ಅದ್ವೈತವಾದಿ ! ಬಾಹ್ಯಾಂತರಕ್ರಿಯೆ ದೊರತಾಗಿ ತತ್ಪದ ರೂಪವಾದ ಬ್ರಹ್ಮವೇ ತ್ವಂ ಪದವೆಂಬೆ, ಇದೇನು ಪ್ರಯೋಜನ?) ಸ್ವಯಮೇವ - ತಾನೇ, ಶಿವಾತ್ಮಲಿಂಗಮೆಂದು - ಜ್ಞಾನಕ್ರಿಯಾಸಂಯುಕ್ತ ಶಿವ ಸ್ವರೂಪಲಿಂಗವೆಂದು, ಓದುವುದೇ - ಪೇಳ್ವುದೇ, ನಿಜೈಕ್ಯಪದಸಿದ್ಧಿಗೆ - ಸ್ವಸ್ವರೂಪಸಾಕ್ಷಾತ್ಕಾರಸಿದ್ಧಿಗೆ, ಕಾರಣಿಕಂ - ಕಾರಣವಾದುದು.

**ಭಾವಾರ್ಥಬೋಧಿನಿ - ೪೩ :** ಎಲ್ಲಕ್ಕೂ ಮೊದಲಿಗನಾದ ಶ್ರೀಗುರುವು ಉಪದೇಶಿಸಿದ ವಾಕ್ಯದ ಅರ್ಥವನ್ನು ಒಂದುಸಲ ಜ್ಞಾನದೃಷ್ಟಿಯಿಂದ ವಿಚಾರಿಸಿ ನೋಡಿದರೆ, ತತ್-ತ್ವಂ-ಅಸಿ, (ಆ ಪರಬ್ರಹ್ಮವೇ-ನೀನು-ಇರುವೆ) ಎಂಬುದಾಗಿರುವುದಲ್ಲವೆ ? ದ್ವೈತವಾದಿಗಳು ವಿಪರೀತ ಜ್ಞಾನದಿಂದ ತತ್ಪದ ವಾಚ್ಯನಾದ ಬ್ರಹ್ಮನಿಗೆ

ತ್ವಂ ಪದವಾಚ್ಯನಾದ ಜೀವನು ಅಧೀನನೆಂದು ವಾದಿಸಿ ಕಾಣುವ ನಿಶ್ಚಯವೇನಿದೆ ? (ಯಾವ ನಿಶ್ಚಿತ ಪ್ರಯೋಜನವೂ ಇಲ್ಲ) ಮತ್ತು ಅದ್ವೈತಿಗಳು ಕ್ರಿಯಾರಹಿತರಾಗಿ ಜ್ಞಾನವೊಂದರಿಂದ ಬ್ರಹ್ಮನಿಗೂ ಜೀವನಿಗೂ ಅಭೇದನೆಂದು ವಾದಿಸುವುದರಿಂದೇನು ಪ್ರಯೋಜನ ? ತಾನು ಜ್ಞಾನಕ್ರಿಯಾಮಯವಾದ ಶಿವಲಿಂಗದ ಸ್ವರೂಪವೆಂದು ಹೇಳುವ ಲಿಂಗಧಾರಣಮಾರ್ಗವೇ ಸ್ವರೂಪಸಾಕ್ಷಾತ್ಕಾರವಾಗುವುದಕ್ಕೆ ಕಾರಣ ವಾಗಿರುವುದು.

## ಚಂಪಕಮಾಲಾವೃತ್ತಂ

೪೪ ಗುರುಕರುಣಾಳು ತತ್ತ್ವಮಸಿಯೆಂದುಪದೇಶಿಸಿದಿಷ್ಟಲಿಂಗಮಾಂ
ತರಶಿವಲಿಂಗಮುತ್ತರಪದಸ್ಥಿತತೃಪ್ತಿಕಳಾಖ್ಯ ಲಿಂಗಮಾ
ಗುರುಚಿರತತ್ಪದತ್ವಮಿತಿಶಬ್ದಪದಾಸಿಪದತ್ರಯಂ ಪ್ರವಿ
ಸ್ತರಗುಣನಾಮರೂಪವಿಡಿದಿರ್ಪುದೆ ದೀಕ್ಷೆ ಕಣಾ ಶಿವಾಧವಾ

**ಟೀಕೆ :** ಕರುಣಾಳು - ಕೃಪಾಶಾಲಿಯಾದ, ಗುರು - ಶ್ರೀಗುರುವು, ತತ್ತ್ವಮಸಿಯೆಂದು - ತತ್ - ತ್ವಂ - ಅಸಿಯೆಂದು, ಉಪದೇಶಿಸಿದ - ಹೇಳಿದಂಥ, ಇಷ್ಟಲಿಂಗಂ - ಸ್ಥೂಲತನುವಿನಲ್ಲಿರ್ಪ ಇಷ್ಟಲಿಂಗವು, ಆಂತರಶಿವಲಿಂಗಂ - ಪ್ರಾಣದಲ್ಲಿರ್ಪ (ಸೂಕ್ಷ್ಮತನುವಿನಲ್ಲಿರ್ಪ) ಶಿವಲಿಂಗವು, ಉತ್ತರಪದಸ್ಥಿತತೃಪ್ತಿಕಳಾಖ್ಯಲಿಂಗಂ - ಉತ್ತರಪದಸ್ಥಿತ - ಕಾರಣತನುವಿನಲ್ಲಿರ್ಪ, ತೃಪ್ತಿಕಳಾಖ್ಯಲಿಂಗಂ - ಪರಿಣಾಮಸ್ವರೂಪವಾದ ಭಾವಲಿಂಗವು, ಉರು - ದೊಡ್ಡದಾದ, ಚಿರ - ನಿತ್ಯವಾದ, ತತ್ಪದತ್ವಮಿತಿಶಬ್ದಪದಾಸಿಪದತ್ರಯಂ - ತತ್ಪದ- ತ್ವಂಪದ, ಅಸಿಪದವೆಂಬಮೂರು, ಆಗಿ - ಸಿದ್ಧವಾಗಿ, ಪ್ರವಿಸ್ತರಗುಣನಾಮರೂಪವಿಡಿದಿರ್ಪುದೆ - ಪ್ರವಿಸ್ತರಗುಣ- ಸಕಲಶಾಸ್ತ್ರಪ್ರಸಿದ್ಧವಾದ ಲಿಂಗತ್ರಯಂಗಳ ಕ್ರಿಯೆಯು, ನಾಮ - ಆ ಲಿಂಗತ್ರಯಗಳ ಪೆಸರು, ರೂಪ - ಆ ಲಿಂಗಂತ್ರಯಗಳ ಕುರುಹು, ಇವುಗಳನ್ನು ಪಿಡಿದಿರ್ಪುದೆ, ತಾಳಿರ್ಪುದೇ, ದೀಕ್ಷೆಕಣಾ - ದೀಕ್ಷೆ ಯಲಾ.

**ಭಾವಾರ್ಥಬೋಧಿನಿ - ೪೪ :** ಕೃಪಾಮಯನಾದ ಗುರುವು ಉಪದೇಶಿಸಿದ ತತ್, ತ್ವಂ, ಅಸಿ, ಎಂಬ ಮೂರು ಪದಗಳಿಗೆ ಕ್ರಮವಾಗಿ - ಎಂದರೆ - ತತ್ಪದಕ್ಕೆ ಸ್ಥೂಲಶರೀರದಲ್ಲಿರುವ ಇಷ್ಟಲಿಂಗವೆಂದೂ, ತ್ವಂಪದಕ್ಕೆ ಸೂಕ್ಷ್ಮಶರೀರದಲ್ಲಿರುವ ಪ್ರಾಣಲಿಂಗವೆಂದೂ, ಅಸಿಪದಕ್ಕೆ ಕಾರಣಶರೀರದಲ್ಲಿರುವ ತೃಪ್ತಿಮಯ ಭಾವಲಿಂಗವೆಂದೂ ತಿಳಿದುಕೊಂಡು, ಆ ಲಿಂಗತ್ರಯಗಳಿಗೆ ಸಂಬಂಧಿಸಿದ ನಾಮರೂಪ ಕ್ರಿಯೆಗಳಾವವು ಎಂಬುದನ್ನು ತಿಳಿದುಕೊಳ್ಳುವುದೇ ಶಿವದೀಕ್ಷೆಯಾಗಿರುವುದು.

## ಉತ್ಪಲಮಾಲಾವೃತ್ತಂ

೪೫ ಅನ್ಯಮನನ್ಯಮಾತ್ಮಪದಮೆಂಬ ತನುತ್ರಯಮಿಶ್ರಮಾಗಿ ನಿ
ಷ್ಪನ್ನಮೆನಿಪ್ಪ ತತ್ತ್ವಮಸಿವಾಕ್ಯಪದಾರ್ಥಮೆ ಸದ್ಗುರೂಕ್ತಿಯಿಂ
ಭಿನ್ನಸಮಾನರೂಪಪದಲಕ್ಷಣಭಾವಮನೆಯ್ದೆ ತೋರ್ಪುದಂ
ತನ್ನೊಳು ತಾನೆ ನೋಡೆ ಬಳಿಕಾವುದಸಾಧ್ಯತರಂ ಶಿವಾಧವಾ

**ಟೀಕೆ :** ಅನ್ಯಂ - ತ್ಯಾಗಾಂಗವು, ಅನನ್ಯಂ - ಭೋಗಾಂಗವು, ಆತ್ಮಪದ ಮೆಂಬ - ಯೋಗಾಂಗವೆಂಬ, ತನುತ್ರಯಮಿಶ್ರಮಾಗಿ - ತನುತ್ರಯದೊಡನೆ ಕೂಡಿ, ನಿಷ್ಪನ್ನಮೆನಿಪ್ಪ - ಆದುದೆಂಬ, ತತ್ತ್ವಮಸಿವಾಕ್ಯಪದಾರ್ಥಮೆ - ತತ್ವಮಸಿ ಯೆಂಬ ಮಹಾವಾಕ್ಯದರ್ಥವೆ, ಸದ್ಗುರೂಕ್ತಿಯಿಂ - ಶ್ರೀಗುರೂಪದೇಶದಿಂದ, ಭಿನ್ನ......ಭಾವಮಂ - ಭಿನ್ನ - ಭೇದಸ್ವರೂಪವಾದ, ಸಮಾನರೂಪ - ಅಭೇದ ರೂಪವಾದ, ಪದಲಕ್ಷಣ ಭಾವಮಂ - ಶಬ್ದಸ್ವರೂಪವಹತನವನ್ನು, ಎಯ್ದೆ - ಪೊಂದಿ, ತೋರ್ಪುದಂ - ಕಾಣಿಸುವುದನ್ನು, ತನ್ನೊಳು - ತನ್ನಂತರಂಗದಲ್ಲಿ, ತಾನೆ, ನೋಡೆ - ವಿಚಾರಿಸಿ ತಿಳಿಯಲು, ಬಳಿಕ - ಮರಳಿ, ಅಸಾಧ್ಯತರಂ - ಅಸಾಧ್ಯ ವಾದುದು, ಆವುದು - ಏನಿದ್ದೀತು? (ತತ್ವಮಸ್ಯಾದಿ ಮಹಾವಾಕ್ಯಂಗಳು ಕೇವಲ ಭೇದಪರವೂ ಅಲ್ಲ, ಅಭೇದಪರವೂ ಅಲ್ಲ. ಭೇದಾಭೇದಸ್ವರೂಪವಾದ ವಿಶಿಷ್ಟಾ ದ್ವೈತಪರವೆಂಬುದಭಿಪ್ರಾಯಂ)

ಭಾವಾರ್ಥಬೋಧಿನಿ - ೪೫ : ತ್ಯಾಗಾಂಗ, ಭೋಗಾಂಗ, ಯೋಗಾಂಗ ವೆಂಬ ಅಂಗತ್ರಯದಲ್ಲಿರುವ ಇಷ್ಟ, ಪ್ರಾಣ, ಭಾವವೆಂಬ ಲಿಂಗತ್ರಯದ ವಾಚ್ಯಾರ್ಥ ದೊಡನೆ ಕೂಡಿಕೊಂಡುಂಟಾದುದೆಂಬ ತತ್ವಮಸಿರೂಪ ಮಹಾವಾಕ್ಯದ ಅರ್ಥವೇ ಭಿನ್ನ (ಭೇದ) ಸಮಾನ (ಅಭೇದ) ರೂಪದಿಂದಿರುವುದೆಂದು ಶ್ರೀಗುರೂಕ್ತಿಯಿಂದ ತನ್ನಲ್ಲಿ ತಾನೆ ವಿಚಾರಿಸಿ ತಿಳಿದುಕೊಂಡ ಬಳಿಕ, ಹಾಗೆ ತಿಳಿದವನಿಗೆ ಅಸಾಧ್ಯ ವಾವುದೂ ಇಲ್ಲ. (ತತ್ವಮಸಿ ವಾಕ್ಯಾರ್ಥವು ಭೇದಾಭೇದಪರವಾಗಿರುವುದೆಂದು ತಾತ್ಪರ್ಯ. ಅದು ಹೇಗೆಂಬುದು ೪೬ ನೆಯ ಪದ್ಯದಲ್ಲಿ ವ್ಯಕ್ತವಾಗುವುದು.)

## ಉತ್ಪಲಮಾಲಾವೃತ್ತಂ

೪೬ ತತ್ಪದಮನ್ಯಮಾಗಿ ಮಿಗೆ ತೋರ್ಪುದರಿಂ ಬಹಿರಿಷ್ಟಲಿಂಗಮು
ದ್ಯತ್ಪ್ರಥಿತಾಂತರಂಗಶಿವಲಿಂಗಮನನ್ಯಪದತ್ವಮರ್ಥಸಂ
ವಿತ್ಪರಿಣಾಮಮೂರ್ತಿ ವಿಮಳಾತ್ಮಪದಾಹ್ವಯ ತೃಪ್ತಿಭಾವಶ
ಶ್ವತ್ಪರಮಾಣುರೂಪಘನಲಿಂಗಮಸಿಪ್ರಪದಂ ಶಿವಾಧವಾ

**ಟೀಕೆ :** ತತ್ಪದಂ - ತತ್ಪದವೇ, ಅನ್ಯಮಾಗಿ - ಕ್ರಿಯಾನಿಮಿತ್ತದಿಂ ಬೇರಾಗಿ, ಮಿಗೆ - ಚೆನ್ನಾಗಿ, ತೋರ್ಪುದರಿಂ, ಬಹಿರಿಷ್ಟಲಿಂಗಂ - ಸ್ಥೂಲಾಂಗದಲ್ಲಿ ಇಷ್ಟಲಿಂಗವಾದುದು, ಉದ್ಯತ್......ಲಿಂಗಂ - ಉದ್ಯತ್ - ಪ್ರಕಾಶಿಸುತಿರ್ಪ, ಪ್ರಥಿತ - ಪ್ರಸಿದ್ಧವಾದ, ಅಂತರಂಗ - ಪ್ರಾಣವಲ್ಲಿಯ, ಶಿವಲಿಂಗಂ - ಶಿವಲಿಂಗವು, ಅನನ್ಯ......ಮೂರ್ತಿ - ಅನನ್ಯಪದ - ಬೇರೊಂದು ಶಬ್ದವಲ್ಲೆಂಬ, ತ್ವಮರ್ಥ - ತ್ವಂ ಪದಾರ್ಥದಲ್ಲಿಯು, ಸಂವಿತ್ಪರಿಣಾಮ - ಜ್ಞಾನದಲ್ಲಿ ಪರಿಣಮಿಸುವ, ಮೂರ್ತಿ - ಮೂರ್ತಿಯು, ವಿಮಳಾ......ಘನಲಿಂಗಂ - ವಿಮಳ - ನಿರ್ಮಳವಾದ, ಆತ್ಮ ಪದಾಹ್ವಯ - ಪರಮಾತ್ಮನೆಂಬ ಪೆಸರುಳ್ಳ, ತೃಪ್ತಿಭಾವ - ಪರಿಣಾಮಸ್ವರೂಪವಾದ, ಶಶ್ವತ್ - ನಿತ್ಯಮಾದ, ಪರಮಾಣುರೂಪ - ಅತಿ ಸೂಕ್ಷ್ಮವಾದ, ಘನಲಿಂಗಂ - ಭಾವಲಿಂಗವು, ಅಸಿ ಪ್ರಪದಂ - ಅಸಿ ಎಂಬ ಶಬ್ದಾರ್ಥವು.

**ಭಾವಾರ್ಥಬೋಧಿನಿ – ೪೬ :** ಸ್ಥೂಲಾಂಗದಲ್ಲಿರುವ ಇಷ್ಟಲಿಂಗವು (ಕ್ರಿಯಾಲಿಂಗ) ಪೂಜಾಕ್ರಿಯಾನಿಮಿತ್ತದಿಂದ ಅನ್ಯವಾಗಿ ಎಂದರೆ, ಪೂಜೆ ಮಾಡುವವನಿಗಿಂತಲೂ ಭಿನ್ನವಾಗಿ ತೋರುವುದರಿಂದ ತತ್ಪದವಾಚ್ಯವಾದುದು. ಸೂಕ್ಷ್ಮಾಂಗದಲ್ಲಿರುವ ಪ್ರಾಣಲಿಂಗವು (ಜ್ಞಾನಲಿಂಗ) ತನಗಿಂತ ಬೇರೊಂದಿಲ್ಲವೆಂಬ ಜ್ಞಾನದಲ್ಲಿ ಪರಿಣಮಿಸುವ ಕಾರಣ ಅನನ್ಯರೂಪ ತ್ವಂ ಪದವಾಚ್ಯವಾದುದು. ಕಾರಣಾಂಗದಲ್ಲಿರುವ ನಿರ್ಮಲಪರಮಾತ್ಮನಾಮಕವಾದ ಮತ್ತು ಅತ್ಯಂತ ಸೂಕ್ಷ್ಮವೂ ನಿತ್ಯವೂ ಆದ ಭಾವಲಿಂಗವು (ತೃಪ್ತಿಲಿಂಗ) ಅಸಿಪದವಾಚ್ಯವಾಗಿರುವುದು. ( ಸ್ಥೂಲ, ಸೂಕ್ಷ್ಮ, ಕಾರಣವೆಂಬ ಅಂಗತ್ರಯದಲ್ಲಿರುವ ಕ್ರಿಯಾ-ಜ್ಞಾನ-ತೃಪ್ತಿ ನಾಮಕಗಳಾದ ಇಷ್ಟ-ಪ್ರಾಣ-ಭಾವಲಿಂಗಗಳು ಕ್ರಮವಾಗಿ ತತ್, ತ್ವಂ, ಅಸಿಯೆಂಬ ತ್ರಿಪದಗಳ ವಾಚ್ಯಾರ್ಥಗಳಾಗಿ, ಅನ್ಯ, ಅನನ್ಯ, ಆತ್ಮಪದವೆಂದು ಹೇಳಿಸಿಕೊಳ್ಳುವವೆಂಬುದಭಿಪ್ರಾಯಂ)



## ಉತ್ಪಲಮಾಲಾವೃತ್ತಂ

೪೭ ಲಿಂಗಮೆ ತತ್ಪದಂ ತ್ವಮಿತಿ ಶಬ್ದಪದಂ ವಿಮಳಾಂಗಮಾ ದ್ವಿಧಾ-
ಸಂಗಮಸಿಪ್ರಮಾಣಪದಮೆಂದು ವಿವೇಕಪರಾನುಭೂತಿಯಿಂ-
ದಂ ಗುರು ಪೇಳ್ದ ತತ್ವಮಸಿವಾಕ್ಯಪದಾರ್ಥಮನಿಂತು ಯೋಜಿಪಾ
ತಂಗುಳಿದಾಗಮಂ ಬಯಲ ಮಾತಿನ ಮಾಲೆ ಕಣಾ ಶಿವಾಧವಾ

**ಟೀಕೆ :** ತತ್ಪದಂ - 'ತತ್'ಪದವು, ಲಿಂಗಮೆ - ಇಷ್ಟಲಿಂಗವೇ, (ಆಗಿರು ವುದು) ತ್ವಮಿತಿಶಬ್ದಪದಂ - 'ತ್ವಂ' ಎಂಬ ಶಬ್ದಾರ್ಥವು, ವಿಮಳಾಂಗಂ - ನಿರ್ಮಲ ವಾದ ಅಂಗಸ್ಥಲವು, (ಆಗಿರುವುದು) ಅಸಿಪ್ರಮಾಣಪದಂ - ಅಸಿಯೆಂದು ಕುರು ಹಿಡುವ ಪದವು, ಆದ್ವಿಧಾಸಂಗಂ-ಆ ಯೆರಡರ ಸಂಬಂಧವು, ಎಂದು-ಹೀಗೆಂದು, ಗುರು - ಶ್ರೀಗುರುವು, ಪೇಳ್ದ - ನಿರೂಪಿಸಿದ, ತತ್ತ್ವಮಸಿವಾಕ್ಯಪದಾರ್ಥಮಂ- ತತ್ತ್ವಮಸಿಯೆಂಬ ಮಹಾವಾಕ್ಯದರ್ಥಮಂ, ಇಂತು ಈ ಪ್ರಕಾರದಿಂದ ವಿವೇಕ ಪರಾನುಭೂತಿಯಿಂದಂ - ವಿಂಗಡಿಸುವಲ್ಲಿ ಮಹಾಜ್ಞಾನದಿಂದ, ಯೋಜಿಪಾತಂಗೆ- ತಿಳಿಸುವಾತಂಗೆ, ಉಳಿದಾಗಮಂ - ಭಿನ್ನಾಗಮಂಗಳು, ಬಯಲ ಮಾತಿನ ಮಾಲೆ ಕಣಾ - ವ್ಯರ್ಥವಾಲಾಪ ಮಾತ್ರವಲಾ. ಈ ಅರ್ಥದಲ್ಲಿ-

"ಲಿಂಗಂ ತತ್ಪದಮಾಖ್ಯಾತಮಂಗಂ ತ್ವಂಪದಮೀರಿತಂ |
ಸಂಯೋಗೋಸಿಪದಂ ಪ್ರೋಕ್ತಮನಯೋರಂಗಲಿಂಗಯೋಃ"

ಎಂದು ಶಿವಸಿದ್ಧಾಂತ ತಂತ್ರವುಂಟು.

**ಭಾವಾರ್ಥಬೋಧಿನಿ - ೪೭ :** 'ತತ್'ಪದದ ಅರ್ಥವೇ ಇಷ್ಟಲಿಂಗವು, 'ತ್ವಂ' ಪದದ ಅರ್ಥವೇ ಅಂಗನು (ದೀಕ್ಷಿತನಾದ ಜೀವನು) 'ಅಸಿ' ಪದಾರ್ಥವೇ ಈ ಲಿಂಗಾಂಗಗಳ ಸಂಯೋಗವೆಂಬುದಾಗಿ ಶ್ರೀ ಗುರುವು ನಿರೂಪಿಸಿದ ತತ್, ತ್ವಂ, ಅಸಿ ಎಂಬ ಮಹಾವಾಕ್ಯದರ್ಥವನ್ನು ವಿವೇಚನಪೂರ್ವಕವಾಗಿ ಸ್ವಾನುಭವಮಾಡಿ ಕೊಂಡುದಾದರೆ, ಉಳಿದಾಗಮಗಳು ನಿಷ್ಪ್ರಯೋಜನವಾದ ಆಲಾಪಗಳಾಗುವವಲ್ಲವೆ?

## ಉತ್ಪಲಮಾಲಾವೃತ್ತಂ

೪೮ ಲಿಂಗಮಿದಂಗರೂಪಮಿದು ಸಂಗಮಿದೆಂದು ಗುರೂಪದಿಷ್ಟವಾ-
ಕ್ಯಂಗಳನೋದಿ ಕೇಳಿ ತದನೂನ ಸಮಾನಪದಂಗಳಂ ಪದಾ-
ರ್ಥಂಗಳನಾ ಪ್ರಸಾದಪರಿಪೂರ್ಣನಿಜಾನುಭವೋಕ್ತಬುದ್ಧಿಯಿಂ
ದಂಗಳವಾಗಿ ಖಂಡಿಸಲಖಂಡಿತನಪ್ಪನಲಾ ಶಿವಾಧವಾ

**ಟೀಕೆ** : ಲಿಂಗಮಿದು - ಲಿಂಗಸ್ವರೂಪವಿದು, ಅಂಗರೂಪಮಿದು - ಅಂಗಸ್ಥಳವಿದು, ಸಂಗವಿದು - ಸಂಬಂಧವಿದು, ಎಂದು - ಹೀಗೆಂದು, ಗುರೂಪದಿಷ್ಟವಾಕ್ಯಂಗಳಂ - ಶ್ರೀ ಗುರುಸ್ವಾಮಿಯಿಂ ನಿರೂಪಿಸಲ್ಪಟ್ಟ ವಚನಂಗಳನ್ನು, ಓದಿ-ಪಠಿಸಿ, ಕೇಳಿ-ಆಲಿಸಿ, ತದನೂನ ಸಮಾನಪದಂಗಳಂ-ತತ್-ಲಿಂಗಾಂಗಸಂಬಂಧದಲ್ಲಿ ಅನೂನ - ಕೊರತೆಯಿಲ್ಲದ, ಸಮಾನಪದಂಗಳಂ - ಅಭೇದಮಂ ಪೇಳ್ವ ತತ್ವಮಸಿ ವಾಕ್ಯಂಗಳನು, ಪದಾರ್ಥಂಗಳಂ - ತತ್ತ್ವಮಸಿ ಪದಂಗಳ ವಾಚ್ಯಾರ್ಥಲಕ್ಷ್ಯಾರ್ಥಂಗಳನ್ನು, ಆ ಪ್ರಸಾದ ……… ಬುದ್ಧಿಯಿಂ - ಆ ಪ್ರಸಾದ - ಆ ಆಚಾರ್ಯಾನುಗ್ರಹದಿಂದ, ಪರಿಪೂರ್ಣ - ತುಂಬಲ್ಪಟ್ಟ, ನಿಜಾನುಭವ - ಸಹಜ ಜ್ಞಾನದಿಂದ, ಉಕ್ತ - ಪೇಳಲ್ಪಟ್ಟ, ಬುದ್ಧಿಯಿಂ - ನಿಶ್ಚಯದಿಂದ, ಮುಂಗಳನಾಗಿ-ಮುಕ್ತಸ್ವರೂಪನಾಗಿ, ಖಂಡಿಸಲ್ - ಭೇದಿಸಲು, ಅಖಂಡಿತಂ - ಅಭೇದ್ಯನಾಗಿ, ಅಪ್ಪನಲಾ - ಇರುವನಲ್ಲವೆ?

**ಭಾವಾರ್ಥಬೋಧಿನಿ - ೪೮** : ಅಂಗವಿದು, ಅಂಗಸ್ಥಲವಿದು, ಅವುಗಳ ಸಂಬಂಧವಿದು ಎಂದು ಶ್ರೀ ಗುರುಸ್ವಾಮಿ ನಿರೂಪಿಸಿದ ವಾಕ್ಯಂಗಳನ್ನು ಓದಿ, ಲಕ್ಷ್ಯಗೊಟ್ಟು ಕೇಳಿ, ಆ ಲಿಂಗ - ಅಂಗ - ಸಂಬಂಧದಲ್ಲಿ ಅಭೇದವಂ ಪ್ರತಿಪಾದಿಸುವ ತತ್, ತ್ವಂ, ಅಸಿ - ಎಂಬ ಮಹಾವಾಕ್ಯದರ್ಥವನ್ನು, ಶ್ರೀ ಗುರುವಿನ ಅನುಗ್ರಹದಿಂದ ಪೂರ್ಣವಾದ ಸಹಜಾನುಭವದಿಂದ ವ್ಯಕ್ತವಾದ ತತ್ವನಿಶ್ಚಯದಿಂದರಿದು, ಮುಕ್ತಸ್ವರೂಪನಾಗಿ ಅಭೇದ್ಯನೆನಿಸುವನು.

## ಉತ್ಪಲಮಾಲಾವೃತ್ತಂ

೪೯ ತತ್ತ್ವಮಸೀತಿವಾಕ್ಯಪದಮಪ್ಪ ಮಹಾಘನಮೂಲಲಿಂಗಮೊಂ
ದೇ ತ್ರಿವಿಧಪ್ರಭಿನ್ನಮುಖಮಾಗಿ ಲಸದ್ಗುರುದೀಕ್ಷೆಯಿಂ ಶರೀ-
ರತ್ರಯದೊಳ್ ಪ್ರವರ್ತಿಸಿ ವಿಭೇದದ ತೀರ್ಕೆಯೊಳ್ಪುಳಿಕ್ಕವಾ
ತತ್ತ್ವಮಸೀತಿವಾಕ್ಯಪದಮಪ್ಪುದು ತಪ್ಪದಲಾ ಶಿವಾಧವಾ

**ಟೀಕೆ** : ತತ್ತ್ವಮಸೀತಿವಾಕ್ಯಪದಮಪ್ಪ - ತತ್, ತ್ವಂ, ಅಸಿಯೆಂಬ ವಾಕ್ಯದಿಂ ಪೇಳಲ್ಪಟ್ಟ, ಮಹಾಘನಮೂಲಲಿಂಗಂ - ಮಹಾಪೂಜ್ಯವಾದ ಅನಾದಿ ಲಿಂಗವು, ಒಂದೇ - ತಾನೇಕಸ್ವರೂಪವಾಗಿಯೆ, ತ್ರಿವಿಧಪ್ರಭಿನ್ನಮುಖಮಾಗಿ-ಮೂರಾಗಿ ಬೇರ್ಪಟ್ಟ ತೆರನುಳ್ಳುದಾಗಿ, ಲಸದ್ಗುರುದೀಕ್ಷೆಯಿಂ-ಲಸತ್-ಒಪ್ಪುತಿರ್ಪ, ಗುರು - ಶ್ರೀಗುರುವಿನ, ದೀಕ್ಷೆಯಿಂ - ವೇಧಾಮಂತ್ರಕ್ರಿಯೆಗಳೆಂಬ ದೀಕ್ಷೆಗಳಿಂದ,

ಶರೀರತ್ರಯದೊಳ್ - ಅಂಗತ್ರಯದಲ್ಲಿ, ಪ್ರವರ್ತಿಸಿ - ಸಂಬಂಧವಾದುದಾಗಿ, ವಿಭೇದದ ತೀರ್ಕಡೆಯೊಳ್ - ಭೇದವಡಗಿದ ಕಡೆಯಲ್ಲಿ, ಬಳಿಕ್ಕಂ - ಮರಳಿ, ಆ ತತ್ತ್ವಮಸೀತಿವಾಕ್ಯಪದಮಪ್ಪುದು - ಆ ತತ್ವಮಸಿ ಎಂಬ ಮಹಾವಾಕ್ಯಮಪ್ಪುದು, ತಪ್ಪದಲಾ - ಓಸರಿಸುವುದಿಲ್ಲಲಾ.

**ಭಾವಾರ್ಥಬೋಧಿನಿ - ೪೯ :** 'ತತ್ತ್ವಮಸಿ' ಎಂಬ ಮಹಾವಾಕ್ಯದಿಂದ ಉಕ್ತವಾದ ಪೂಜ್ಯಮಹಾಲಿಂಗವೊಂದೇ ಭಾವ - ಪ್ರಾಣ - ಇಷ್ಟವೆಂಬ ಲಿಂಗತ್ರಯವಾಗಿ ಪರಿಣಮಿಸಿ, ಶ್ರೀಗುರುವಿನ ವೇಧಾ - ಮಂತ್ರ - ಕ್ರಿಯೆಗಳೆಂಬ ದೀಕ್ಷಾತ್ರಯದಿಂದ ಕಾರಣ - ಸೂಕ್ಷ್ಮ - ಸ್ಥೂಲವೆಂಬ ಅಂಗತ್ರಯದಲ್ಲಿ ಸಂಬಂಧಿಸಿದುದಾಗಿ (ಉಪಾಸ್ಯಮೂರ್ತಿಯೆನಿಸಿಕೊಂಡು) ಕೊನೆಗೆ (ಸಾಮರಸ್ಯಸ್ಥಿತಿಯಲ್ಲಿ) ಭೇದಭಾವವಳಿದು, ಏಕರೂಪವಾಗಿ ಆ 'ತತ್ತ್ವಮಸಿ' ಎಂಬ ಮಹಾವಾಕ್ಯದರ್ಥವೇ ಆಗಿರುವ ಮಹಾಲಿಂಗವೇ ಆಗಿರುವುದು.

**ವಿಚಾರ :** ಮಾಯಿದೇವನು ೪೩ ನೆಯ ಪದ್ಯದಲ್ಲಿ ತತ್, ತ್ವಂ, ಅಸಿ ಎಂಬ ಛಾಂದೋಗ್ಯಮಹಾವಾಕ್ಯದ ಮೂರು ಪದಗಳಿಗೆ ಕ್ರಮವಾಗಿ ತತ್-ಆ ಜ್ಞಾನಕ್ರಿಯಾಸಂಯುಕ್ತ (ದೃಕ್ಕ್ರಿಯಾಶಕ್ತಿವಿಶಿಷ್ಟವಾದ) ಶಿವಲಿಂಗವೇ ತ್ವಂ - ಅಂಗಪದವಾಚ್ಯನಾದ ನೀನು, ಅಸಿ - ಇರುವಿಯೆಂದು ಶಿವಾದ್ವೈತಪರವಾದರ್ಥವನ್ನು ಹೇಳಿರುವನೆಂದು ಟೀಕೆಯಿಂದ ತಿಳಿದುಬರುವುದು. ಮುಂದೆ ೪೪, ೪೫, ೪೬ ನೆಯ ಪದ್ಯಗಳಲ್ಲಿ ತತ್, ತ್ವಂ, ಅಸಿ ಎಂಬ ಪದಗಳಿಗೆ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗವೆಂಬರ್ಥವನ್ನು ಹೇಳಿರುವನು. ೪೭ ನೆಯ ಪದ್ಯದಲ್ಲಿ ತತ್, ತ್ವಂ, ಅಸಿ ಎಂಬ ಪದಗಳಿಗೆ ಕ್ರಮವಾಗಿ ಲಿಂಗ, ಅಂಗ, ಸಂಗವೆಂಬರ್ಥವು ಉಕ್ತವಾಗಿರುವುದು. ೪೮ ನೆಯ ಪದ್ಯದಲ್ಲಿಯೂ ತತ್ತ್ವಮಸಿ ವಾಕ್ಯಾರ್ಥವು ಲಿಂಗಾಂಗಸಂಬಂಧಪರವಾಗಿಯೇ ಇರುವುದು. ಇನ್ನು ೪೯ ನೆಯ ಪದ್ಯದಲ್ಲಿ 'ತತ್ತ್ವಮಸಿ' ಎಂಬ ವಾಕ್ಯವರ್ಥವೇ ಮಹಾಘನಲಿಂಗವೆಂದೂ, ಆ ಲಿಂಗವೇ ಇಷ್ಟ, ಪ್ರಾಣ, ಭಾವವೆಂಬ ಲಿಂಗತ್ರಯವಾಗಿ ಪರಿಣಮಿಸಿ,ವೇಧಾದಿ ದೀಕ್ಷಾತ್ರಯಮೂಲಕವಾಗಿ ಸ್ಥೂಲಕಾರಣಾದಿ ಶರೀರತ್ರಯದಲ್ಲಿ ನೆಲಸಿ. ಕೊನೆಯಲ್ಲಿ ಮೂಲಸ್ವರೂಪವಾದ ಮಹಾಲಿಂಗವಾಗಿ ಬಿಡುವುದೆಂತಲೂ ಗ್ರಂಥಕರ್ತನು ಹೇಳಿರುವನು. ಈ ಹೇಳಿಕೆಯಲ್ಲಿ "ತ್ವಂ" ಪದವು ಒಮ್ಮೆ ಲಿಂಗಪರವಾಗಿಯೂ, ಮತ್ತೊಮ್ಮೆ ಅಂಗಪರವಾಗಿಯೂ ಬಂದಿರುವುದರಿಂದ ಸಹಜವಾಗಿ ಸಂಶಯವು ಬರಬಹುದು. ಆದರೆ, ಇದಕ್ಕೆ ಸಮಾಧಾನವು ಹೀಗಿರುವುದು :

ಮಾಯಿದೇವರು ತಮ್ಮ ಶಿವಾನುಭವಸೂತ್ರ ಗ್ರಂಥದಲ್ಲಿ "ತತ್ವಮಸಿ" ಎಂಬ ವಾಕ್ಯದ ಅರ್ಥವನ್ನು ಇನ್ನೂ ಅನೇಕ ರೀತಿಯಿಂದ ವಿವರಿಸಿರುವುದುಂಟು. ಷಟ್‌ಸ್ಥಲಸಿದ್ಧಾಂತಕ್ಕನುಸರಿಸಿ, ಶಕ್ತಿವಿಶಿಷ್ಟನಾದ ಶಿವನೇ ಲಿಂಗ - ಅಂಗವೆಂಬ ದ್ವಿವಿಧರೂಪದಿಂದ ರೂಪುಗೊಳ್ಳುವನೆಂದಿರುವುದರಿಂದ ಗ್ರಂಥಕಾರನು ಲಿಂಗಾಂಗ ಗಳಲ್ಲಿಟ್ಟ ಅಭೇದದೃಷ್ಟಿಯಿಂದ "ತತ್ವಮಸಿ" ಎಂಬ ವಾಕ್ಯದಲ್ಲಿರುವ 'ತ್ವಂ' ಪದಕ್ಕೆ ಒಮ್ಮೆ ಲಿಂಗಪರವಾಗಿಯೂ, ಮತ್ತೊಮ್ಮೆ ಅಂಗಪರವಾಗಿಯೂ ಅರ್ಥಮಾಡಿರುವ ನೆಂದು ಗ್ರಹಿಸಬೇಕು.

**ಅವತಾರಿಕೆ :** ಇಂತು ತತ್ತ್ವಮಸ್ಯಾದಿ ಮಹಾವಾಕ್ಯಾರ್ಥಂಗಳಂ ಪ್ರತಿ ಪಾದಿಸಿದನಂತರದಲ್ಲಿ ಕರ್ಮಮಾರ್ಗವಾದ ಪೂರ್ವಯೋಗಪಂಚಕಮಂ ಖಂಡಿಸಿ, ಉತ್ತರಮಾರ್ಗಮಪ್ಪ ಯೋಗತ್ರಯಂಗಳಂ ಪ್ರತಿಪಾದಿಸುತ್ತಿರ್ದಂ-

**ಚಂಪಕಮಾಲಾವೃತ್ತಂ**

೫೦ ಯಮನಿಯಮಾದಿಕಾಷ್ಟವಿಧಯೋಗದೊಳುತ್ತರಭಾಗ ಪೂರ್ವಭಾ
ಗಮನನುಮಾನದೃಷ್ಟವಿಮಳಶ್ರುತದಿಂದರಿದಲ್ಲಿ ಪೂರ್ವಭಾ
ಗಮನುಳಿದುತ್ತರಾರ್ಥಶಿವಯೋಗಸಮಾಹಿತಭಕ್ತಿಸತ್ಕ್ರಿಯಾ
ಶ್ರಮ ಪರಮಾರ್ಥಮಂ ಪಿಡಿದು ವರ್ತಿಸುವರ್ ಶರಣರ್ ಶಿವಾಧವಾ

**ಟೀಕೆ :** ಶರಣರ್ - ಶಿವಶರಣರು, ಯಮ ...... ಯೋಗದೋಳ್ - ಯಮ ನಿಯಮಾದಿಕ - ಯಮನಿಯಮ ಮೊದಲಾಗುಳ್ಳ, ಅಷ್ಟವಿಧ - ಎಂಟು ತೆರನಾದ ಯೋಗದೋಳ್ - ಯೋಗಂಗಳಲ್ಲಿ, ಉತ್ತರಭಾಗ ಪೂರ್ವಭಾಗಮಂ - ಇದು ಉತ್ತರಭಾಗ, ಇದು ಪೂರ್ವಭಾಗವೆಂಬುದನ್ನು, ಅನುಮಾನ - ದೃಷ್ಟ - ವಿಮಳಶ್ರುತದಿಂದೆ - ಶ್ರುತಿದೃಷ್ಟಾನುಮಾನಂಗಳಿಂ, ಅರಿದು - ತಿಳಿದು, ಅಲ್ಲಿ - ಅವೆರಡರಲ್ಲಿ, ಪೂರ್ವಭಾಗಮಂ - ಕರ್ಮಪರವಾಗಿ ಪೂರ್ವಭಾಗವಾದ ಯಮ ನಿಯಮ - ಆಸನ - ಪ್ರಾಣಾಯಾಮ - ಪ್ರತ್ಯಾಹಾರಂಗಳನ್ನು, ಉಳಿದು - ಬಿಟ್ಟು, ಉತ್ತರಾರ್ಥ .........ಪರಮಾರ್ಥಮಂ - ಉತ್ತರಾರ್ಥ - ಉತ್ತರಭಾಗವಾದ, ಶಿವಯೋಗ - ಧ್ಯಾನ - ಧಾರಣ - ಸಮಾಧಿಯೆಂಬ ಶಿವಯೋಗಂಗಳಲ್ಲಿ, ಸಮಾ ಹಿತ - ಸಮಾಧಾನಿಯಾಗಿ, ಭಕ್ತಿ-ಶಿವಭಕ್ತಿಯೆಂಬ, ಸತ್ಕ್ರಿಯಾ-ಸತ್ಕ್ರಿಯೆಯೇ, ಆಶ್ರಮ - ನೆಲೆಯಾಗುಳ್ಳ, ಪರಮಾರ್ಥಮಂ - ಸಹಜಮಾರ್ಗವನ್ನು, ಪಿಡಿದು - ಅಂಗೀಕರಿಸಿ, ವರ್ತಿಸುವರ್ - ಆಚರಿಸುವರು.

**ಭಾವಾರ್ಥಬೋಧಿನಿ - ೫೦ :** ಶಿವಶರಣರು ಯಮಾದಿಯಾದಷ್ಟಾಂಗ ಯೋಗದಲ್ಲಿ ಮೊದಲ ಯಮ - ನಿಯಮ - ಆಸನ - ಪ್ರಾಣಾಯಾಮ - ಪ್ರತ್ಯಾಹಾರವೆಂಬೈದು ಪೂರ್ವಭಾಗವೆಂದೂ, ಧ್ಯಾನ - ಧಾರಣ - ಸಮಾಧಿಯೆಂಬ ಮೂರು ಉತ್ತರ ಭಾಗವೆಂದೂ ಶ್ರುತಿ - ಪ್ರತ್ಯಕ್ಷ - ಅನುಮಾನವೆಂಬ ಪ್ರಮಾಣತ್ರಯದಿಂದ ತಿಳಿದುಕೊಂಡು, ಮೊದಲಿನ ಐದನ್ನು ಬಿಟ್ಟು, ಮುಂದಿನ ಧ್ಯಾನ - ಧಾರಣ - ಸಮಾಧಿಗಳಿಗೆ ಸಂಬಂಧಿಸಿದ ಭಕ್ತಿಕ್ರಿಯೆಗೆ ಆಶ್ರಯವಾದ ಸಹಜಮಾರ್ಗದಲ್ಲಿ ನಡೆಯುವರು.

## ಉತ್ಪಲಮಾಲಾವೃತ್ತಂ

೫೧ ಉತ್ತರಪೂರ್ವಮೆಂಬುಭಯ ಭಾಗಮನಷ್ಟವಿಧಾಂಗಯೋಗದೊ
ಳ್ತಾತ್ವಿಕಮಾಗಿ ನಿಶ್ಚಯಿಸಿ ಪೇಳ್ದ ಗುರೂಕ್ತಿಗಳಲ್ಲಿ ಧಾರಣಾ
ದಿತ್ರಯಮುತ್ತರಂ ಯಮಪುರೋಗಮ ಪಂಚಕಮಿಗ ಪೂರ್ವಮಿ
ನ್ನೆತ್ತಣ ಮಾತು ವೀರಶಿವಯೋಗಪರಾಯಣರೋಳ್ ಶಿವಾಧ್ವಾ

**ಟೀಕೆ :** ಅಷ್ಟವಿಧಾಂಗಯೋಗದೋಳ್ - ಎಂಟು ತೆರನಾದ ಯೋಗಂಗಳಲ್ಲಿ, ಉತ್ತರಪೂರ್ವಮೆಂಬ - ಇದು ಪೂರ್ವ, ಇದು ಉತ್ತರವೆನಿಸುವ, ಉಭಯ ಭಾಗಮಂ - ಎರಡು ಭಾಗವನ್ನು, ತಾತ್ವಿಕವಾಗಿ - ಯಥಾರ್ಥವಾಗಿ, ನಿಶ್ಚೈಸಿ - ನಿರ್ಧರಿಸಿ, ಪೇಳ್ದ - ನಿರೂಪಿಸಿದ, ಗುರೂಕ್ತಿಗಳ್ಲಿ - ಗುರುವಾಕ್ಯಂಗಳಲ್ಲಿ, ಧಾರಣಾದಿತ್ರಯಂ - ಧಾರಣ, ಧ್ಯಾನ, ಸಮಾಧಿಗಳೆಂಬ ಮೂರು, ಉತ್ತರಂ - ಉತ್ತರ ಭಾಗವು, ಯಮಪುರೋಗಮಪಂಚಕಮಿಗ - ಯಮ ಮೊದಲಾದೈದು ಯೋಗಂಗಳ್, ಪೂರ್ವಂ-ಪೂರ್ವ ಭಾಗಂಗಳು, ವೀರಶಿವಯೋಗಪರಾಯಣರೋಳ್ - ವೀರಶಿವ ಯೋಗತತ್ಪರರಲ್ಲಿ, ಇನ್ನೆತ್ತಣ ಮಾತು - ಯಮಾದಿಯೋಗಪಂಚಕಪ್ರಸಂಗವಿನ್ನೆಲ್ಲಿ ಯದು.

**ಭಾವಾರ್ಥಬೋಧಿನಿ - ೫೧ :** ಅಷ್ಟಾಂಗಯೋಗದಲ್ಲಿ ಪೂರ್ವಭಾಗವೆಂದೂ ಉತ್ತರಭಾಗವೆಂದೂ ಯಥಾರ್ಥವಾಗಿ ನಿಶ್ಚಯಿಸಿ, ಗುರುವು ನಿರೂಪಿಸಿರುವುದರಿಂದ ಉತ್ತರಭಾಗವಾದ ಧಾರಣ - ಧ್ಯಾನ, ಸಮಾಧಿಗಳನ್ನು ಮಾತ್ರ ಅಂಗೀಕರಿಸಿರುವ ವೀರಶೈವಯೋಗತತ್ಪರರಲ್ಲಿ, ಪೂರ್ವಭಾಗವಾದ ಯಮಾದಿಪಂಚಕವನ್ನು ಅಂಗೀಕರಿಸುವ ಆವಶ್ಯಕತೆಯಿಲ್ಲ.

**ಅವತಾರಿಕೆ :** ವೀರಶೈವನು ಆಚರಿಸುವ ಧ್ಯಾನ - ಧಾರಣ - ಸಮಾಧಿಯೆಂಬ ತ್ರಿವಿಧ ಶಿವಯೋಗಗಳ ಲಕ್ಷಣಮಂ ಪೇಳುವಂ—

**ಉತ್ಪಲಮಾಲಾವೃತ್ತಂ**

೫೩ ಧ್ಯಾನಮದಂತರಂಗಯಜನಂ ಬಹಿರಂಗದ ಪೂಜೆ ಧಾರಣಂ
ತಾನೆ ಸಮಾಧಿಯುಜ್ಜ್ವಲತರ ಪ್ರಥಿತಾರ್ಚನಮಾತ್ಮಲಿಂಗಸಂ-
ಧಾನಸಮಾಹಿತಕ್ರಿಯೆ ಯಥಾಕ್ರಮಮಿೞ ಪರಿಯೆಂದು ಶಾಂಭವ
ಜ್ಞಾನದಿ ನಿಟ್ಟಿಸಲ್ ನಿಜಪದಂ ಕರಬಿಲ್ವಫಲಂ ಶಿವಾಧವಾ

**ಟೀಕೆ :** ಅಂತರಂಗಯಜನಂ - ಪ್ರಾಣಲಿಂಗಪೂಜೆಯು, ಅದು-ಅದುತಾನೆ, ಧ್ಯಾನಂ - ಧ್ಯಾನಯೋಗವು, ಬಹಿರಂಗಪೂಜೆ - ಇಷ್ಟಲಿಂಗದಲ್ಲಿಯ ಪೂಜೆಯು, ಧಾರಣಂ - ಧಾರಣಯೋಗವು, ಉಜ್ಜ್ವಲತರಪ್ರಥಿತಾರ್ಚನಂ - ಉಜ್ಜ್ವಲತರ-ಅತ್ಯಂತಪ್ರಕಾಶಿಸುತ್ತಿರ್ಪ, ಪ್ರಥಿತ - ಪ್ರಸಿದ್ಧವಾದ, ಅರ್ಚನಂ - ಪೂಜಾರೂಪವಾದ, ಆತ್ಮಲಿಂಗಸಂಧಾನಸಮಾಹಿತಕ್ರಿಯೆ - ಆತ್ಮಲಿಂಗ - ಭಾವಲಿಂಗದ, ಸಂಧಾನ-ಸ್ಮರಣೆಯಲ್ಲಿ, ಸಮಾಹಿತ - ಸಾವಧಾನವಾದ, ಕ್ರಿಯೆ - ವ್ಯಾಪಾರವು, ತಾನೆ - ಅದು ತಾನೆ, ಸಮಾಧಿ - ಸಮಾಧಿಯೋಗವು, ಯಥಾಕ್ರಮಂ - ಇವರ ಪರಿವಿಡಿಯು, ಈ ಪರಿಯೆಂದು - ಈರೀತಿಯೆಂದು, ಶಾಂಭವಜ್ಞಾನದಿಂ - ಶಿವಸಂಬಂಧವಾದ ಜ್ಞಾನದಿಂದ, ನಿಟ್ಟಿಸಲ್ - ನೋಡಲಾಗಿ, ನಿಜಪದಂ - ಮುಕ್ತಿಪದವು, ಕರಬಿಲ್ವಫಲಂ-ಅಂಗೈಯೊಳಗಣ ಬೆಲ್ಲಪತ್ತ್ರದ ಕಾಯಿಯ ಹಾಗೆ. (ಎಲ್ಲರ್ಗೆಯುಂ ತಿಳಿಯಬರ್ಪುದೆಂಬುದರ್ಥ) ಈ ಅರ್ಥದಲ್ಲಿ—

“ಅಥಾಪ್ಯಧಾರ್ಚನಂ ಕುರ್ಯಾದಿಷ್ಟಲಿಂಗಸ್ಯ ಪೂಜನಂ |
ತಲ್ಲಿಂಗಂ ಮನುತೇಯಸ್ತು ಪ್ರಾಣಲಿಂಗಸ್ಯ ಪೂಜನಂ |
ಮನೋಲಯಂತು ನಿರ್ಲೇಪಭಾವಲಿಂಗಸ್ಯ ಪೂಜನಂ ||

ಇಂತೆಂದು ಶಿವರಹಸ್ಯವುಂಟು.

**ಭಾವಾರ್ಥಬೋಧಿನಿ - ೫೩ :** ಒಳಗಿನ ಪ್ರಾಣಲಿಂಗಪೂಜೆಯೇ ಧ್ಯಾನಯೋಗವು. ಹೊರಗಿನ ಇಷ್ಟಲಿಂಗದ ಅರ್ಚನೆಯೇ ಧಾರಣಯೋಗವು. ಭಾವಲಿಂಗದ ಸ್ಮರಣವನ್ನು ಅವಧಾನಪೂರ್ವಕವಾಗಿ ಮಾಡುವ ಕ್ರಿಯೆಯೇ ಆ ಲಿಂಗದ ಪ್ರಕಾಶಮಯವೂ ಪ್ರಸಿದ್ಧವೂ ಆದ ಅರ್ಚನೆಯೆನಿಸುವುದು; ಇದೇ ಸಮಾಧಿಯೋಗವು. ಈ ರೀತಿಯಿಂದ ಯಥಾಕ್ರಮವಾಗಿ ಈ ಧ್ಯಾನ-ಧಾರಣ-ಸಮಾಧಿ-ಯೋಗಗಳ ಸ್ವರೂಪವನ್ನು ಶಿವಸಂಬಂಧಿಜ್ಞಾನದಿಂದ ತಿಳಿದು ಆಚರಿಸುವವನಿಗೆ ಮೋಕ್ಷವು ಕರಗತವಾದ ಬಿಲ್ವಫಲದಂತೆ ಸುಸಾಧ್ಯವು.

## ಉತ್ಪಲಮಾಲಾವೃತ್ತಂ

೫೩ ಧ್ಯಾನಮಿದಿಷ್ಟ ಲಿಂಗಮನಹರ್ನಿಶಮುಂ ನೆನೆವೇಕನಿಷ್ಠೆ ತದ್
ಜ್ಞಾನಪರಾಯಣಾಮಳಮನೋಲಯಮೇ ಸುಸಮಾಧಿ ತಲ್ಲಯ
ಸ್ಥಾನಮೆನಿಪ್ಪ ಲಿಂಗಮನನಾರತಮಂಗದ ಮೇಲೆ ಭಕ್ತಿಸ-
ನ್ಮಾನ ವಿಧಾನದಿಂ ಧರಿಸೆ ಧಾರಣಮೆಂಬ ಪದಂ ಶಿವಾಧವಾ

**ಟೀಕೆ :** ಇಷ್ಟಲಿಂಗಮಂ - ಇಷ್ಟಲಿಂಗವನ್ನು, ಅಹರ್ನಿಶಮುಂ - ಪಗಲಿರುಳೂ, ನೆನೆವ-ಸ್ಮರಿಸುವ, ಏಕನಿಷ್ಠೆ - ಏಕಭಾವನೆ, ಧ್ಯಾನಂ - ಧ್ಯಾನಯೋಗವು. ತದ್‌ಜ್ಞಾನಪರಾಯಣಾಮಳಮನೋಲಯಮೇ - ತತ್ - ಆ ಇಷ್ಟಲಿಂಗದಲ್ಲಿಯು, ಜ್ಞಾನ - ಜ್ಞಾನದಲ್ಲಿ, ಪರಾಯಣ - ಎರಕವುಳ್ಳ, ಅಮಳ - ನಿರ್ಮಳವಾದ, ಮನೋಲಯಮೇ - ಮನವ ಲಯಿಸುವುದೇ, ಸುಸಮಾಧಿ - ಒಳ್ಳಿತ್ತಾದ ಸಮಾಧಿಯೋಗವು. ತಲ್ಲಯಸ್ಥಾನಮೆನಿಪ್ಪ - ಆ ಮನೋಲಯಕ್ಕೆ ಸ್ಥಾನವೆನಿಸುವಂಥ, ಲಿಂಗಮಂ - ಇಷ್ಟಲಿಂಗವನ್ನು, ಅನಾರತಂ - ಎಡೆಬಿಡದೆ, ಅಂಗದ ಮೇಲೆ, ಭಕ್ತಿಸನ್ಮಾನವಿಧಾನದಿಂ - ಭಕ್ತಿಯ ಉಪಚಾರಕ್ರಿಯೆಗಳಿಂ ಧರಿಸೆ - ಧರಿಸಲಾಗಿ, ಧಾರಣಮೆಂಬ ಪದಂ - ಧರಿಸುವಂಥಯೋಗವು ( ಧಾರಣಯೋಗವು ).

**ಭಾವಾರ್ಥಬೋಧಿನಿ - ೫೩ :** ಇಷ್ಟಲಿಂಗವನ್ನು ಯಾವಾಗಲೂ ಸ್ಮರಿಸುವ ಏಕನಿಷ್ಠೆಯೇ ಧ್ಯಾನಯೋಗವೆನಿಸುವುದು. ಆ ಇಷ್ಟಲಿಂಗದ ಜ್ಞಾನದಲ್ಲೊಂದುಗೂಡುವಂತೆ ಮನವನ್ನು ಅಡಗಿಸುವುದೇ ಸಮಾಧಿಯೋಗವೆನಿಸುವುದು. ಲಿಂಗಜ್ಞಾನದಲ್ಲಿ ಮನವನಡಗಿಸುವುದಕ್ಕೆ ಆಧಾರವಾದ ಇಷ್ಟಲಿಂಗಕ್ಕೆ ಭಕ್ತಿಮಯ ಪೂಜೋಪಚಾರಗಳನ್ನು ಮಾಡುತ್ತ ಸದಾ ಆ ಲಿಂಗವನ್ನು ಅಂಗದ ಮೇಲೆ ಧರಿಸಿರುವುದೇ ಧಾರಣಯೋಗವೆನಿಸುವುದು.

## ಉತ್ಪಲಮಾಲಾವೃತ್ತಂ

೫೪ ಸೂನೃತಮಿಷ್ಟಲಿಂಗಮುಮಂತರ ಜೀವಕಳಾಖ್ಯಲಿಂಗಮಾ
ಹ್ವಾನವಿಸರ್ಜನಾಗಮ ಸಮಾಧಿ ವಿಕಲ್ಪ ವಿಹೀನತೃಪ್ತಿ ಭಾ-
ವಾನುಭವ ಪ್ರಸಿದ್ಧ ಘನಲಿಂಗಮನೀಕ್ಷಿಸೆ ತಾನೆ ಧಾರಣ
ಧ್ಯಾನಸಮಾಧಿಗಳ್ ತ್ರಿವಿಧಲಕ್ಷಣ ಸಮ್ಮತಿಯಿಂ ಶಿವಾಧವಾ

**ಟೀಕೆ :** ಸೂನೃತಂ - ಸತ್ಯಸ್ವರೂಪವಾದ, ಇಷ್ಟಲಿಂಗಂ - ಇಷ್ಟಲಿಂಗವು, ಅಮಳಾಂತರಜೀವಕಳಾಖ್ಯಲಿಂಗಂ - ಅಮಳ - ನಿರ್ಮಳವಾದ, ಅಂತರ - ಪ್ರಾಣ ವೆಂಬ, . ಜೀವಕಳಾಖ್ಯ - ಜೀವಚೈತನ್ಯವೆಂಬ ಪೆಸರುಳ್ಳ, ಲಿಂಗಂ - ಲಿಂಗವು, ಆಹ್ವಾನ......... ಘನಲಿಂಗಮುಂ - ಆಹ್ವಾನವಿಸರ್ಜನ - ಆಹ್ವಾನವಿಸರ್ಜನೆಗಳು, ಆಗಮು - ಭಿನ್ನಕ್ರಿಯೆಗಳು, ಸಮಾಧಿ - ಮನಸ್ಸಮಾಧಾನವು, ವಿಕಲ್ಪ - ಸಂಕಲ್ಪ ವಿಕಲ್ಪವೆಂಬ ಇವುಗಳು, ವಿಹೀನ - ಇಲ್ಲದಂಥ, ತೃಪ್ತಿಭಾವ - ಪರಿಣಾಮಸ್ವರೂಪ ವಾದ, ಅನುಭವ - ಜ್ಞಾನದಿಂದ, ಪ್ರಸಿದ್ಧ - ಪ್ರಕಟವಾದ, ಘನ - ದೊಡ್ಡದಾದ, ಲಿಂಗಮುಂ - ಭಾವಲಿಂಗ - ಈ ಮೂರನ್ನು, ತ್ರಿವಿಧಲಕ್ಷಣಸಮ್ಮತಿಯಿಂ - ಪೂಜನ ಸ್ಮರಣಮನೋಲಯಗಳೆಂಬ ಮೂರು ತೆರವಾದ ಲಕ್ಷಣಂಗಳ ಕೂಟದಿಂದ, ಈಕ್ಷಿಸೆ- ನೋಡಲಾಗಿ, ತಾನೆ - ಅದು ತಾನೆ, ಧಾರಣಧ್ಯಾನಸಮಾಧಿಗಳ್ - ಧಾರಣ-ಧ್ಯಾನ- ಸಮಾಧಿಗಳೆಂಬ ತ್ರಿವಿಧಯೋಗಂಗಳು.

**ಭಾವಾರ್ಥಬೋಧಿನಿ - ೫೪ :** ಸತ್ಯವಾದ ಇಷ್ಟಲಿಂಗದ ಅರ್ಚನೆಯೇ ಧಾರಣಯೋಗಲಕ್ಷಣ. ಒಳಗಿರುವ ಜೀವಚೈತನ್ಯವಾದ ಪ್ರಾಣಲಿಂಗದ ಸ್ಮರಣೆಯೇ ಧ್ಯಾನಯೋಗದ ಲಕ್ಷಣ. ಆಹ್ವಾನವಿಸರ್ಜನಗಳೂ, ಬಹಿಃಕ್ರಿಯೆಗಳೂ, ಮನಸ್ಸಿನ ಸ್ಥಿತಿಗತಿಗಳೂ, ಸಂಕಲ್ಪವಿಕಲ್ಪಗಳೂ - ಇವು ಯಾವುಗಳನ್ನೂ ಸೋಂಕದ ತೃಪ್ತಿ ಭಾವದ ಅನುಭವದಿಂದ ಪ್ರಕಟವಾದ ಘನಭಾವಲಿಂಗದಲ್ಲಿ ಮನವನಡಗಿಸುವುದೇ ಸಮಾಧಿಯೋಗದ ಲಕ್ಷಣವೆನಿಸುವುದು.

**ಚಂಪಕಮಾಲಾವೃತ್ತಂ**

೫೫ ಧ್ಯಾನಮೆ ಧಾರಣಂ ವಿಮಲಧಾರಣಮೇ ಸುಸಮಾಧಿಯಾ ಸಮಾ
ಧಾನಮೆ ತಾನೆ ಧಾರಣಮದೇವಪುರಂತರಮಪ್ಪ ನಿರ್ಮಳ
ಧ್ಯಾನಮಿದೊಂದನೊಂದು ಬಿಡದಾಶ್ರಯಿಸಿರ್ಪುದೆ ಯೋಗಮೆಂಬ ಸು-
ಜ್ಞಾನವಿಚಾರವೇ ಗುರುಸಮುಕ್ತ್ಯುಪದೇಶ ಗುಣಂ ಶಿವಾಧವಾ

**ಟೀಕೆ :** ಧ್ಯಾನಮೆ - ಧ್ಯಾನಯೋಗವೆ, ಧಾರಣಂ - ಧಾರಣಯೋಗವು, ವಿಮಲಧಾರಣಮೇ - ಆ ನಿರ್ಮಲವಾದ ಧಾರಣಯೋಗವೇ, ಸುಸಮಾಧಿ - ಶೋಭನ ವಾದ ಸಮಾಧಿಯೋಗವು ( ಇದು ಅನುಲೋಮದಿಂದ ನೋಡುವ ಕ್ರಮವು. ) ಆ ಸಮಾಧಾನಮೆ - ಆ ಸಮಾಧಿಯೋಗವೇ, ತಾನೆ, ಧಾರಣಂ - ಧಾರಣಯೋಗವು,

ಅವೇ - ಆ ಧಾರಣಯೋಗವೇ, ವಪುರಂತರಮಪ್ಪ - ಪ್ರಾಣಲಿಂಗಸಂಬಂಧವಾದ, ನಿರ್ಮಳ - ಕಳಂಕಿಲ್ಲದ, ಧ್ಯಾನಂ - ಧ್ಯಾನಯೋಗವು ( ಇದು ಪ್ರತಿಲೋಮ ) ಇವು-ಈ ಯೋಗಂಗಳ್, ಒಂದನ್ನೊಂದು ಬಿಡದೆ - ಒಂದಕ್ಕೊಂದನ್ಯೋನ್ಯವಾಗಿ, ಆಶ್ರಯಿಸಿರ್ಪುದೆ - ಬೆರಸಿರ್ಪುದೇ, ಯೋಗಮೆಂಬ - ಶಿವಯೋಗವೆನಿಸುವ, ಸುಜ್ಞಾನವಿಚಾರವೇ - ಮಹಾಜ್ಞಾನದ ವಿವೇಕವೇ, ಗುರು……… ಗುಣಂ-ಗುರು-ಶ್ರೀ ಗುರುವಿನ, ಸದುಕ್ತಿ - ಒಳ್ಳಿತಾದ ವಚನದ, ಉಪದೇಶಗುಣಂ - ಬೋಧೆಯ ಗುಣವು.

**ಭಾವಾರ್ಥಬೋಧಿನಿ – ೫೫ :** ಧ್ಯಾನಯೋಗವೇ ಧಾರಣಯೋಗವಾಗಿ ಪರಿಣಮಿಸುವುದು. ಆ ಧಾರಣಯೋಗವೇ ಸಮಾಧಿಯೋಗವಾಗಿ ಪರಿಣಮಿಸುವುದು. ಹೀಗಲ್ಲದೆ ಮತ್ತು - ಸಮಾಧಿಯೇ ಧಾರಣವಾಗಿಯೂ, ಧಾರಣವೇ ಪ್ರಾಣಲಿಂಗ ಸಂಬಂಧವಾದ ಧ್ಯಾನವಾಗಿಯೂ ಪರಿಣಮಿಸುವುದು. ಹೀಗೆ ಈ ಮೂರು ಯೋಗಗಳು ಒಂದನ್ನೊಂದಗಲದೆ, ಆಶ್ರಯಿಸಿಕೊಂಡಿದ್ದು, ಶಿವಯೋಗವೆನಿಸಿರುವುದೆಂಬನುಭವದ ವಿಚಾರವೇ ಶ್ರೀಗುರುವಿನುಪದೇಶದ ಸಾರವಾಗಿರುವುದು.

**ವಿಚಾರ :** ಲಿಂಗಾಂಗಸಾಮರಸ್ಯರೂಪವಾದ ಶಿವಯೋಗದಲ್ಲಿ ಧಾರಣ-ಧ್ಯಾನ - ಸಮಾಧಿ - ಇವುಗಳು ಕ್ರಮವಾಗಿ ಇಷ್ಟಲಿಂಗ - ಪ್ರಾಣಲಿಂಗ - ಭಾವಲಿಂಗ - ಇವುಗಳಿಗೆ ಸಂಬಂಧಿಸಿರುವವು. ಇಷ್ಟಲಿಂಗವು, ಅರ್ಚನಾದಿ ಕ್ರಿಯಾರೂಪವಾಗಿಯೂ, ಪ್ರಾಣಲಿಂಗವು ಲಿಂಗಸ್ಮೃತಿ (ಧ್ಯಾನ) ಯೆಂಬ ಜ್ಞಾನರೂಪವಾಗಿಯೂ, ಭಾವಲಿಂಗವು, ಲಿಂಗಸ್ಮೃತಿ (ಧ್ಯಾನ) ಯಿಂದ ಜನ್ಯವಾದ ತೃಪ್ತಿರೂಪವಾಗಿಯೂ ಇರುವವು. ಹೀಗೆ ಲಿಂಗಸಂಬಂಧದ ಕ್ರಿಯಾಜ್ಞಾನಗಳಿಂದ ಉಂಟಾದ ತೃಪ್ತಿಯೇ ಲಿಂಗತೃಪ್ತಿಯೆನಿಸುವುದು. ಈ ತೃಪ್ತಿಯೇ ಲಿಂಗಾಂಗಸಂಯೋಗರೂಪ ಶಿವಯೋಗದ ಫಲವಾಗಿರುವುದು. ಆದುದರಿಂದ ಈ ಯೋಗದಲ್ಲಿ ಧಾರಣಧ್ಯಾನಸಮಾಧಿ ಎಂಬಿವುಗಳು ಪರಸ್ಪರ ಸಂಬಂಧಿಗಳಾಗಿ ಒಂದುಗೂಡಿರುವವೆಂದು ಗ್ರಹಿಸಬೇಕು.

**ಅವತಾರಿಕೆ :** ಶಿವಶರಣಂ ಸಂಸಾರದೊಳಿರ್ದೊಡಂ ಆತಂಗಾ ಸಂಸಾರವು ಬಂಧಕವಾಗಲರಿಯದೆಂದು ಪೇಳುತಿರ್ದಪಂ —

**ಚಂಪಕಮಾಲಾವೃತ್ತಂ**

೫೬ ಸ್ಫಟಿಕಮಣಿ ಸ್ವಭಾವವಿಮಲಂ ಪರಮಾರ್ಥದಿನೀಕ್ಷಿಪಲ್ಲಿ ಸಂ
ಘಟಿಸಿದುಪಾಧಿಯಿಂ ಮಲಿನವಾಸನೆಯಾದೊಡೆ ದೋಷಮೇಂ ಪರಿ-
ಸ್ಫುಟತರ ಚಿತ್ಪ್ರಕಾಶಘನಮೂರ್ತಿಯೆನಿಪ್ಪ ಶಿವಾತ್ಮಯೋಗಿಯುಂ
ಪಟು ಬಹಿರಾವೃತ ಪ್ರಚುರಸಂಸ್ಕೃತಿ ಪೊರ್ದಿದೊಡೇಂ ಶಿವಾಧವಾ

**ಟೀಕೆ :** ಸ್ಫಟಿಕಮಣಿ - ಪಳುಕಿನ ಮಣಿಯು, ಸ್ವಭಾವವಿಮಲಂ - ಸ್ವಭಾವದಿಂದಲೇ ನಿರ್ಮಲವು, ಪರಮಾರ್ಥದಿಂ - ಯಥಾರ್ಥದಿಂದ, ಈಕ್ಷಿಪಲ್ಲಿ - ನೋಡುವಲ್ಲಿ, ಸಂಘಟಿಸಿದ - ಪ್ರಾಪ್ತವಾದ, ಉಪಾಧಿಯಿಂ, ಮಲಿನ ವಾಸನೆಯಾಮೊಡೆ - ಮುಸುಳಿಸಿದ ನಿಜಸ್ವರೂಪವನುಳ್ಳುದಾದೊಡೆ, ದೋಷಮೇಂ - ದೂಷ್ಯವೇನು ? ಪರಿಸ್ಫುಟ.........ಮೂರ್ತಿಯೆನಿಪ್ಪ - ಪರಿಸ್ಫುಟತರ - ಅತ್ಯಂತ ವ್ಯಕ್ತವಾದ, ಚಿತ್ಪ್ರಕಾಶ - ಜ್ಞಾನಪ್ರಕಾಶದಿಂ, ಘನಮೂರ್ತಿಯೆನಿಪ್ಪ - ದಿವ್ಯವಿಗ್ರಹನುಳ್ಳಾತನೆನಿಸುವ, ಶಿವಾತ್ಮಯೋಗಿಯುಂ - ಶಿವಸ್ವರೂಪನಾದ ಯೋಗೀಶ್ವರನನು, ಪಟು......ಸಂಸೃತಿ - ಪಟು - ಸಮರ್ಥವಾದ, ಬಹಿರಾವೃತ - ಬಾಹ್ಯದಲ್ಲಿ ಮುಸುಕಿದ, ಪ್ರಚುರ - ಬಹಳವಾದ, ಸಂಸೃತಿ - ಸಂಸಾರವು, ಪೊರ್ದಿದೊಡೇಂ - ಸಂಬಂಧಿಸಿದೊಡೇನು ? (ಆ ಸ್ಫಟಿಕದಂತೆ ನಿರ್ಲೇಪನೆಂಬುದರ್ಥ) ಈ ಅರ್ಥದಲ್ಲಿ—

"ಸಮಸ್ತ ಜಗದಾತ್ಮಾಪಿ ಸಂವಿದ್ರೂಪೋ ಮಹಾಮತಿಃ |
ಲಿಪ್ಯತೇ ನೈವ ಸಂಸಾರೈರ್ಯಥಾ ಧೂಮಾದಿಭಿರ್ನಭಃ ||"

ಎಂಬುದು ಪ್ರಮಾಣ.

**ಭಾವಾರ್ಥಬೋಧಿನಿ - ೫೬ :** ಸ್ಫಟಿಕಮಣಿಯು ಸ್ವಭಾವದಿಂದಲೇ ಪರಿಶುದ್ಧವಾಗಿರುವುದು. ಅದು ಉಪಾಧಿಯ (ಬೇರೊಂದು ವಸ್ತುವಿನ) ಸಂಬಂಧವುಳ್ಳುದಾದಾಗ ಮುಸುಕಾದ ರೂಪವುಳ್ಳುದಾದರೂ ದೂಷ್ಯವಾಗದು. ಎಂದರೆ, ಅದರ ಪರಿಶುದ್ಧತೆಯು ಹೋಗಲಾರದು. ಅದರಂತೆ ಸುವ್ಯಕ್ತವಾದ ಜ್ಞಾನಪ್ರಕಾಶದ ಮೂರ್ತಿಯಾಗಿರುವ ಶಿವಯೋಗಿಯು ಬಲವತ್ತರವಾಗಿ ಹೊರಗೆ ಅಂಟಿದ ಸಂಸಾರದ ಸಂಬಂಧವುಳ್ಳವನಾಗಿದ್ದರೂ ಸ್ವಭಾವತಃ ನಿರ್ಮಲನಾಗಿಯೇ ಇರುವನು.

## ಉತ್ಪಲಮಾಲಾವೃತ್ತಂ

೫೭ ಜ್ಞಾನಿಯೊ ಕರ್ಮಿಯೋ ಭವಿಯೊ ಭಕ್ತನೊ ಬದ್ಧನೊ ಮುಕ್ತನೋ ಶಿವಂ
ತಾನೊ ವಿವೇಕದಿಂ ತಿಳಿದು ನೋಡೆ ಮಹಾಘನಲಿಂಗಯೋಗಿಯು-
ನ್ನೇನಹನೋ ನಿರೂಪಿಸುವೊಡಾನರಿಯೆಂ ಪರಮೈಕ್ಯ ತತ್ತ್ವವಿ
ದ್ಯಾನಿಧಿ ತಾನೆ ಬಲ್ಲನಿತರರ್ಗರಿಯಲ್ಬಹುದೇ ಶಿವಾಧವಾ

**ಟೀಕೆ :** ಮಹಾಘನಲಿಂಗಯೋಗಿ - ಅಧಿಕವಾದ ಶಿವಲಿಂಗದಲ್ಲಿ ಐಕತ್ವವನುಳ್ಳ ಶರಣನು, ಜ್ಞಾನಿಯೊ - ಜ್ಞಾನವುಳ್ಳವನೊ? ಕರ್ಮಿಯೋ - ಕ್ರಿಯೆಯುಳ್ಳವನೋ? ಭವಿಯೊ - ಲಿಂಗವಿಲ್ಲದ ಭವಿಯೊ ?, ಭಕ್ತನೊ - ಶಿವಭಕ್ತನೊ ?, ಬದ್ಧನೊ - ಸಂಸಾರಪಾಶಬದ್ಧನೊ ?, ಮುಕ್ತನೋ - ಸಂಸಾರಪಾದದಿಂ ಮುಕ್ತನಾದಾತನೋ ?, ಶಿವಂ ತಾನೊ - ಶಿವನೇ ತಾನೊ ?, ವಿವೇಕದಿಂ ತಿಳಿದು ನೋಡೆ - ವಿಚಾರದಿಂದಾಸ್ಥೆಯು ನೋಡಲಾಗಿ, ಇನ್ನೇನಹನೊ - ಇನ್ನೇನು ರೂಪಾಗುವನೊ ?, ನಿರೂಪಿಸುವೊಡೆ - ಹೇಳುವೊಡೆ, ಆನರಿಯೆಂ - ನಾನರಿಯೆನು, ಪರಮೈಕ್ಯ ತತ್ತ್ವವಿದ್ಯಾನಿಧಿ - ಪರಮೈಕ್ಯ - ಲಿಂಗೈಕ್ಯದ, ತತ್ವ - ಸ್ವರೂಪದ, ವಿದ್ಯಾ - ಜ್ಞಾನಕ್ಕೆ, ನಿಧಿ - ಸ್ಥಾನವಾದ ಶರಣನು, ತಾನೆ ಬಲ್ಲಂ - ತಾನೆ ತಿಳಿದವನು, ಇತರರ್ಗರಿಯಲ್ಬಹುದೆ - ಬೇರೊಬ್ಬರಿಂದ ತಿಳಿಯಲಾಗುವುದೆ ? ತಿಳಿಯಲಾಗದೆಂಬುದರ್ಥಂ. (ಶರಣಂ ಸಂಸಾರಿಯಾಗಿರ್ದೂ ನಿರ್ಲೇಪನಾಗಿರ್ಪುದು ಆರಿಗೂ ತಿಳಿಯದೆಂಬುದಭಿಪ್ರಾಯಂ)

**ಭಾವಾರ್ಥಬೋಧಿನಿ . ೫೨ :** ಲಿಂಗಾಂಗಸಂಗಿಯಾದ ಶರಣನು ಜ್ಞಾನಯುಕ್ತನೋ ? ಕ್ರಿಯಾಯುಕ್ತನೊ ? ಲಿಂಗಹೀನ ಭವಿಯೊ ? ಲಿಂಗಯುತ ಭಕ್ತನೊ ? ಸಂಸಾರಪಾಶದಿಂ ಬದ್ಧನೊ ? ಅಥವಾ ಆ ಪಾಶದಿಂದ ಮುಕ್ತನೊ ? ತಾನೆ ಶಿವನಾಗಿರುವನೊ ? ಮತ್ತಾವರೂಪದಿಂದಿರುವನೊ ? ಅದನ್ನು ಹೇಳಲು ನಾನರಿಯೆನು. ಲಿಂಗಾಂಗಸಾಮರಸ್ಯ ತತ್ತ್ವಜ್ಞಾನನಿಧಿಯಾದ ಆ ಶರಣನೇ ಆ ವಿಷಯವನ್ನು ಬಲ್ಲನಲ್ಲದೆ ಅನ್ಯರಿಗರಿಯಲಸಾಧ್ಯವು.

**ಅವತಾರಿಕೆ** : ಶರಣನು ಸರ್ವಾಂಗಲಿಂಗಸಂಬಂಧಿಯಾಗಿರ್ಪನೆಂಬುದಂ ಪೇಳುತಿರ್ದಪಂ —

**ಉತ್ಪಲಮಾಲಾವೃತ್ತಂ**

೫೩ ಅಂಗಮೆ ಲಿಂಗಮಿಂದ್ರಿಯಮೆ ಜಂಗಮಮೆಂಬ ಕೃತಾರ್ಥಬುದ್ಧಿಪಾ
ರಂಗತಮಾಗಿ ತಾತ್ತ್ವಿಕವಿಚಾರವಿವೇಕಮನೆಯ್ದಿ ನಿಷ್ಠೆಯಿಂ
ಹಿಂಗದೆ ತದ್ವಿಭ್ರಾರ್ಪಣಕಳಾಮಣಿಯಾಗಿಹ ಶಕ್ತಿ ದೇಶಿಕಾ-
ಪಾಂಗಕೃಪಾ ಸುಧಾರಸಪರಿಪ್ಲುತಯುಕ್ತಿ ಕಣಾ ಶಿವಾಧವಾ

**ಟೀಕೆ :** ಅಂಗಮೆ - ಅಂಗಸ್ಥಲವೇ, ಲಿಂಗಂ - ಲಿಂಗವು, ಇಂದ್ರಿಯಮೆ - ಪಂಚೇಂದ್ರಿಯಂಗಳೇ, ಜಂಗಮಮೆಂಬ - ಪ್ರಾಣಲಿಂಗಮೆಂಬ, ಕೃತಾರ್ಥಬುದ್ಧಿ - ಧನ್ಯವಾದ ಬುದ್ಧಿಯು, ಪಾರಂಗತಮಾಗಿ - ಸಾಂಗವಾಗಿ, ತಾತ್ವಿಕವಿಚಾರವಿವೇಕಮ ನೆಯ್ದಿ - ತಾತ್ವಿಕ - ಯಥಾರ್ಥವಾದ, ವಿಚಾರ - ಜ್ಞಾನವೆಂಬ, ವಿವೇಕಮನೆಯ್ದಿ - ಪೃಥಕ್ಕರಿಸುವ ಭಾವನೆಯನ್ನು ಹೊಂದಿ, ನಿಷ್ಠೆಯಿಂ - ದೃಢತ್ವದಿಂದ, ಪಿಂಗದೆ - ತೊಲಗದೆ, ತದ್ದ್ವಿಧಾರ್ಪಣಕಳಾಮಣಿಯಾಗಿಹ - ತತ್ - ಆ ಇಷ್ಟಪ್ರಾಣಲಿಂಗ ಗಳಲ್ಲಿಯು, ದ್ವಿಧಾರ್ಪಣ - ರೂಪರುಚ್ಯರ್ಪಣಂಗಳ ಕಳಾ - ಕಳಾಜ್ಞಾನದಿಂದ, ಮಣಿಯಾಗಿಹ - ಪ್ರಕಾಶಮಯವಾದಂಥ, ಶಕ್ತಿ - ಆ ಶರಣಸಾಮರ್ಥ್ಯವು, ದೇಶಿಕಾ ...... ಯುಕ್ತಿಕಣಾ - ದೇಶಿಕ - ಶ್ರೀಗುರುವಿನ, ಅಹಾಂಗ - ಕಡೆಗಣ್ಣ ನೋಟದ, ಕೃಪಾಸುಧಾರಸ - ಕರುಣಾಮೃತರಸದಲ್ಲಿ, ಪರಿಪ್ಲುತ - ನೆನೆಯಲ್ಪಟ್ಟ, ಯುಕ್ತಿಕಣಾ - ಬುದ್ಧಿಯಲಾ ?

**ಭಾವಾರ್ಥಬೋಧಿನಿ - ೫೮ :** ಅಂಗಸ್ಥಲವೇ ಇಷ್ಟಲಿಂಗವು, ಇಂದ್ರಿಯ ಗಳೇ ಪ್ರಾಣಲಿಂಗಸ್ವರೂಪವಾದ ಜಂಗಮವೆಂಬ ಶ್ರೇಷ್ಠ ಜ್ಞಾನವನ್ನು ಸಂಪೂರ್ಣ ವಾಗಿ ಪಡೆದು ಈ ರೂಪವಾದ ಜ್ಞಾನದ ವಿವೇಚನೆಯಲ್ಲಿ ನಿಷ್ಠೆಯೊಂದಿ, ಆ ಇಷ್ಟ ಪ್ರಾಣಲಿಂಗಗಳಿಗೆ ರೂಪರುಚಿಗಳನ್ನರ್ಪಿಸುವ ಕಲೆಯ ತಿಳುವಳಿಕೆಯಿಂದ ಕೂಡಿದ ಶಿವಶರಣನ ಶಕ್ತಿಯು ಶ್ರೀಗುರುವಿನ ಕಡೆನೋಟದ ಕೃಪಾಮೃತರಸದಿಂದ ಲಬ್ಧ ವಾಗುವುದಾಗಿರುವುದು.

**ವಿಚಾರ :** ಈ ಪದ್ಯದಲ್ಲಿ ಅಂಗವೇ ಲಿಂಗವಾದಾಗ ಭೋಗ್ಯಸ್ಥಾನಗಳಾದ ಇಂದ್ರಿಯಗಳೇ ಲಿಂಗಮುಖವಾದ ಜಂಗಮಲಿಂಗರೂಪದಿಂದಿರುವವೆಂದು ಹೇಳುವುದು ಸಮುಚಿತವೆಂದೂ, ಇಂದ್ರಿಯಂಗಳಿಗೆ ಪ್ರಾಣಲಿಂಗವೆಂದು ಟೀಕಾ ಕಾರನು ಹೇಳುವುದು ಸಮುಚಿತವಲ್ಲವೆಂದೂ ಕೆಲವರ ಅಭಿಪ್ರಾಯವಿರುವುದು. ಇದು ವಿಚಾರಣೀಯವಾಗಿರುವುದು.

**ಉತ್ಪಲಮಾಲಾವೃತ್ತಂ**

೫೯ ಇಂದ್ರಿಯಮಿಂದ್ರಿಯ ಪ್ರಕರದಲ್ಲಿ ಮನಂ ಮನವಲ್ಲಿ ಬುದ್ಧಿ ತತ್-
ಸಾಂದ್ರಸುಬುದ್ಧಿಯಲ್ಲಿ ವಿಷಯಂ ವಿಷಯವ್ರಜವಲ್ಲಿ ಸಂದು ನಿ-
ಸ್ತಂದ್ರನಿರಂಗ ನಿರ್ಮಳನಿರಾವರಣತ್ವಮನೆಯ್ದಿ ಭಕ್ತಿಯೋ-
ಗೀಂದ್ರ ಪದಪ್ರಸಿದ್ಧಶರಣಂ ಪರಿರಂಜಿಸುವಂ ಶಿವಾಧವಾ

**ಟೀಕೆ :** ಇಂದ್ರಿಯಂ - ಶರಣನ ಅಂಗೇಂದ್ರಿಯಂಗಳು, ಇಂದ್ರಿಯ ಪ್ರಕರ ದಲ್ಲಿ - ಲಿಂಗೇಂದ್ರಿಯ ಸಮೂಹದಲ್ಲಿ, ಮನಂ - ಶರಣನ ಮನವು, ಮನದಲ್ಲಿ- ಲಿಂಗದ ಮನದಲ್ಲಿ, ಬುದ್ಧಿ - ಶರಣನ ಬುದ್ಧಿಯು, ತತ್ಸಾಂದ್ರಸುಬುದ್ಧಿಯಲ್ಲಿ- ಆ ಲಿಂಗದ ವಚ್ಚಿತ್ತಾದ ಬುದ್ಧಿಯಲ್ಲಿ, ವಿಷಯಂ - ಶರಣನ ವಿಷಯಂಗಳು, ವಿಷಯ ವ್ರಜದಲ್ಲಿ - ಲಿಂಗವಿಷಯ ಸಮೂಹದಲ್ಲಿ, ಸಂದು - ಬೆರೆದು, ಭಕ್ತಿ......ಶರಣಂ- ಭಕ್ತಿಯೋಗೀಂದ್ರ - ಭಕ್ತಿಯ ಕೂಟದಲ್ಲಿ ಶ್ರೇಷ್ಠರಾದ ಶರಣರ, ಪದ - ಪದದಲ್ಲಿ, ಪ್ರಸಿದ್ಧ - ಪ್ರಖ್ಯಾತನಾದ, ಶರಣಂ - ಶರಣನು, ನಿಸ್ತಂದ್ರ......ತ್ವಮಂ-ನಿಸ್ತಂದ್ರ- ಮಾಯಾಜಾಡ್ಯವಿಲ್ಲದಂಥ, ನಿರಂಗ - ನಿರ್ದೇಹವಾದ, ನಿರ್ಮಳ - ಸ್ವಚ್ಛವಾದ, ನಿರಾವರಣತ್ವಮಂ - ಮಾಯಾವರಣವಿಲ್ಲದಿಹ ತನುವನು, ಎಯ್ದಿ - ಪೊರ್ದಿ, ಪರಿ ರಂಜಿಸುವಂ - ಮಿಗೆ ಒಪ್ಪುತ್ತಿರ್ಪನು.

**ಭಾವಾರ್ಥಬೋಧಿನಿ . ೫೯ :** ಶರಣನ ಇಂದ್ರಿಯ, ಮನ, ಬುದ್ಧಿ, ವಿಷಯ, ಇವೆಲ್ಲವುಗಳೂ ಲಿಂಗದ ಇಂದ್ರಿಯ, ಮನ, ಬುದ್ಧಿ, ವಿಷಯ ಇವುಗಳಲ್ಲಿ ಬೆರೆತಿರುವವಲ್ಲವೆ ? ಈ ರೀತಿಯಾಗಿ ಬೆರಸಿ ಬೇರಿಲ್ಲದಿರುವ ಭಕ್ತಿ ಶ್ರೇಷ್ಠನಾದ ಶರಣನು ಮಾಯಾಜಾಡ್ಯವಿಲ್ಲದ ಮತ್ತು ನಿರ್ದೇಹವಾದ - ನಿರ್ಮಲವಾದ, ನಿರಾವರ ಣತ್ವವನ್ನು ( ಮಲದ ಆವರಣದ ರಾಹಿತ್ಯವನ್ನು ) ಪಡೆದು ಪರಿಶೋಭಿಸುವನು.

## ಚಂಪಕಮಾಲಾವೃತ್ತಂ

೬೦ ನುಡಿವೆಡೆಯಲ್ಲಿ ನೋಡುವೆಡೆಯಲ್ಲಿ ರಮಿಪ್ಪೆಡೆಯಲ್ಲಿ ವಸ್ತುವಂ
ಪಿಡಿವೆಡೆಯಲ್ಲಿ ಭೋಗಿಪೆಡೆಯಲ್ಲಿ ಸುಖಂಬಡೆವಲ್ಲಿ ದೇಹಮಂ
ಬಿಡುವೆಡೆಯಲ್ಲಿ ಲಿಂಗಕಳೆ ಲಿಂಗಗುಣಂ ಘನಲಿಂಗಯೋಗಮಾ
ದೊಡೆ ಬಳಿಕಾ ಮಹಾತ್ಮನನದೇನೆನಬರ್ಪುದದಂ ಶಿವಾಧವಾ

**ಟೀಕೆ :** ನುಡಿವೆಡೆಯಲ್ಲಿ-ಮಾತನಾಡುವೆಡೆಯಲ್ಲಿಯೂ, ನೋಡುವೆಡೆಯಲ್ಲಿ- ನೋಡುವ ಕಾಲದಲ್ಲಿಯೂ, ರಮಿಪ್ಪೆಡೆಯಲ್ಲಿ - ಸುರತಗೋಷ್ಠಿಯಲ್ಲಿಯೂ, ವಸ್ತುವಂ ಪಿಡಿವೆಡೆಯಲ್ಲಿ - ಒಂದು ಪದಾರ್ಥಮಂ ಪಿಡಿವಬಳಿಯಲ್ಲಿಯೂ, ಭೋಗಿ ಪೆಡೆಯಲ್ಲಿ - ವಿಷಯಭೋಗದಲ್ಲಿಯೂ, ಸುಖಂಬಡೆವಲ್ಲಿ - ಪರಿಣಮಿಸುವಲ್ಲಿಯೂ, ದೇಹಮಂ ಬಿಡುವೆಡೆಯಲ್ಲಿ - ದೇಹಾವಸಾನಕಾಲದಲ್ಲಿಯೂ, ಲಿಂಗಕಳೆ - ಲಿಂಗ

ಚೈತನ್ಯವು, ಲಿಂಗಗುಣಂ - ಲಿಂಗಸನ್ಮಾರ್ಗವು, ಘನಲಿಂಗಯೋಗಂ - ಆ ಮಹಾ ಲಿಂಗದಲ್ಲಿ ಸಂಬಂಧವು, ಆದೊಡೆ - ಉಂಟಾದೊಡೆ, ಬಳಿಕ - ಮರಳಿ, ಆ ಮಹಾತ್ಮನಂ - ಆ ಶರಣನನ್ನು, ಅದಂ - ಆ ಶರಣನ ಮಾರ್ಗವನ್ನು, ಅದೇನೆಸ ಬರ್ಪುದು-ಅದೇನೆಂದು ಪೇಳಬಹುದು! ಅಶಕ್ಯವೆಂಬುದರ್ಥಂ. (ಈ ಅರ್ಥದಲ್ಲಿ—

"ಇಂದ್ರಿಯಾದಾಗತಂ ಕಿಂಚಿದ್ಯತ್ಸುಖಂ ತಚ್ಛಿವಾರ್ಪಿತಂ
ತತ್ಪ್ರಸಾದಂ ಚ ಭೋಕ್ತವ್ಯಂ ತದಿಂದ್ರಿಯ ಮುಖೇನ ಚ"

ಎಂದು ವಾತುಲತಂತ್ರವಚನವುಂಟು)

**ಭಾವಾರ್ಥಬೋಧಿನಿ - ೬೦ :** ನುಡಿಯುವಾಗ, ನೋಡುವಾಗ, ರಮಿಸು ವಾಗ, ಪದಾರ್ಥಗಳನ್ನು ಹಿಡಿಯುವಾಗ, ವಿಷಯಗಳನ್ನು ಭೋಗಿಸುವಾಗ, ತದ್ವಿಷಯ ಸುಖವನ್ನು ಪಡೆಯುವಾಗ, ದೇಹವನ್ನು ಬಿಡುವಾಗ - ಈ ಬಗೆಯಾದ ಎಲ್ಲಾ ಕಾಲಗಳಲ್ಲಿಯೂ ಶರಣನಲ್ಲಿ ಲಿಂಗಕಳೆಯೂ, ಲಿಂಗಗುಣವೂ, ಲಿಂಗಸಾಮ ರಸ್ಯವೂ ಉಂಟಾಗಿದ್ದರೆ, ಅಂತಹ ಮಹಾತ್ಮನಾದ ಶರಣನನ್ನು ಏನೆಂದು ಬಣ್ಣಿಸ ಲಾದೀತು! (ಸರ್ವವೂ ಲಿಂಗಪ್ರಸಾದವೆಂದು ತಿಳಿದು ಲಿಂಗಭೋಗೋಪಭೋಗಿ ಯಾದ ಶರಣನ ಮಹತ್ವವು ವರ್ಣನಾತೀತವೆಂಬುದಭಿಪ್ರಾಯಂ)

**ಚಂಪಕಮಾಲಾವೃತ್ತಂ**

೬೧ ತ್ರಿವಿಧಪದಾರ್ಥಮಂ ತ್ರಿವಿಧಲಿಂಗಮುಖಾರ್ಪಿತಮಂ ಗುರೂಪದೇ
ಶವಿಧಿವಿಧಾನದಿಂದರಿದು ಮಾಡಿ ತದೀಯ ಪದಾರ್ಥಜಾತವಾ-
ಸ್ತವನಿಜಮಪ್ಪ ರೂಪರುಚಿತೃಪ್ತಿ ವಿಶೇಷಮಹಾಪ್ರಸಾದಮಂ
ಸವಿದು ತದೈಕ್ಯಸೌಖ್ಯಪದದೋಳ್ ಮೆರೆವರ್ ಶರಣರ್ ಶಿವಾಧವಾ

**ಟೀಕೆ :** ಶರಣರ್ - ಶಿವಶರಣರು, ಗುರು ...... ದಿದೆ - ಗುರೂಪದೇಶವಿಧಿ- ಶ್ರೀಗುರುವಚನವೆಂಬ ವಿಧಿವಾಕ್ಯದ, ವಿಧಾನದಿಂದೆ - ನಡೆಸುವುದರಿಂದೆ, ತ್ರಿವಿಧ ಪದಾರ್ಥಮಂ - ಅಂಗ - ಪ್ರಾಣ - ಭಾವವೆಂಬ ಮೂರು ಪದಾರ್ಥವನ್ನು, ತ್ರಿವಿಧ ಲಿಂಗಮುಖಾರ್ಪಿತಮಂ - ಇಷ್ಟ - ಪ್ರಾಣ - ಭಾವವೆಂಬ ಮೂರು ಲಿಂಗದ ಮುಖ ದಲ್ಲಿ ಅರ್ಪಿತವನ್ನು, ಅರಿದು - ತಿಳಿದು, ಮಾಡಿ - ಸಮರ್ಪಣೆಯಂ ಮಾಡಿ,



ತದೀಯ ............ ನಿಜಮಪ್ಪ - ತದೀಯ - ಆ ಲಿಂಗಸಂಬಂಧವಾದ, ಪದಾರ್ಥಜಾತ - ಪದಾರ್ಥಸಮೂಹದ, ವಾಸ್ತವ - ವಸ್ತುಸಂಬಂಧವಾದ, ನಿಜಮಪ್ಪ - ಸಹಜವಹ, ರೂಪ ...... ದಮಂ - ರೂಪ - ರುಚಿ - ತೃಪ್ತಿ - ರೂಪ-ರುಚಿ - ತೃಪ್ತಿಯೆಂಬ, ವಿಶೇಷಮಹಾಪ್ರಸಾದಮಂ - ನಿರತಿಶಯವಾದ ಮಹಾ ಪ್ರಸಾದವನು, ಸವಿದು - ಭೋಗಿಸಿ, ತದೈಕ್ಯಸೌಖ್ಯಪದದೊಳ್ - ಆ ಪ್ರಸಾದವಲ್ಲಿ ಕೂಡಿರ್ಪ ಪರಿಣಾಮ ಪದದಲ್ಲಿ, ಮೆರೆವರ್ - ಪ್ರಕಾಶಿಸುವರು. (ಈ ಅರ್ಥದಲ್ಲಿ-

"ಇಷ್ಟಲಿಂಗಾರ್ಪಿತಂ ಚಾಂಗಂ ಪ್ರಾಣಲಿಂಗಾರ್ಪಿತಂ ಮನಃ |
ಭಾವಲಿಂಗಾರ್ಪಿತಂ ತೃಪ್ತಿರಿತಿಭೇದಂ ವರಾನನೇ ||"

ಎಂದು ಶಿವರಹಸ್ಯಮುಂಟು)

**ಭಾವಾರ್ಥಬೋಧಿನಿ - ೬೧ :** ಶಿವಶರಣರು ಗುರೂಪದೇಶ ವಿಧಿಗನುಸರಿಸಿ, ಅಂಗ - ಪ್ರಾಣ - ಮನವೆಂಬ ತ್ರಿವಿಧ ಪದಾರ್ಥಗಳನ್ನು, ಕ್ರಮವಾಗಿ - ಇಷ್ಟ-ಪ್ರಾಣ - ಭಾವವೆಂಬ ತ್ರಿವಿಧಲಿಂಗಗಳ ಮುಖದಲ್ಲಿ ಅರ್ಪಿಸುವ ರೀತಿಯನ್ನರಿತು, ಅರ್ಪಣಮಾಡಿ, ಅರ್ಪಿತವಸ್ತುಗಳಿಗೆ ಸಂಬಂಧಿಸಿದ ಸಹಜವಾದ - ರೂಪ - ರುಚಿ-ತೃಪ್ತಿಯೆಂಬ ನಿರತಿಶಯ ಮಹಾಪ್ರಸಾದವನ್ನು ಭೋಗಿಸಿ, ಆ ಪ್ರಸಾದದಲ್ಲಿ ಘಟಿಸಿದ ಸೌಖ್ಯದಿಂದ ಮೆರೆಯುವರು.

**ಅವತಾರಿಕೆ :** ಶರಣನ ಲಿಂಗಸಂಬಂಧವು ಸ್ವಭಾವಸಿದ್ಧವೆಂದು ಪೇಳುತ್ತಿರ್ದಪಂ—

**ಚಂಪಕಮಾಲಾವೃತ್ತಂ**

೬೨ ಶರನಿಧಿ ರತ್ನಮಂ ಧರಿಸಿದಂತೆ ಮಹಾನಗಮೌಷದೌಘಮಂ
ಧರಿಸಿದಮಾಳ್ಕೆ ಲಿಂಗಮನನಾದಿಮಯಂ ಶರಣಂ ಸ್ವಭಾವದಿಂ
ಧರಿಸಿಹನೈಸೆ ತನ್ನ ಮಹಿಮಾಗುಣ ವೈಭವಮಂ ಪ್ರಕಾಶಿಸಲ್
ಶರಣನ ಲಿಂಗದಂತರಮನಿನ್ನು ವಿಚಾರಿಪುದೇಂ ಶಿವಾಧವಾ

**ಟೀಕೆ :** ಅನಾದಿಮಯಂ ಶರಣಂ - ಅನಾದಿಲಿಂಗಸ್ವರೂಪನಾದ ಶರಣನು, ಲಿಂಗಮಂ – ಶಿವಲಿಂಗವನು, ತನ್ನ ಮಹಿಮಾಗುಣವೈಭವಮಂ – ತನ್ನ

ಮಹತ್ವವೆಂಬ ಗುಣವ ಪೆರ್ಚುಗೆಯನು, ಪ್ರಕಾಶಿಸಲ್ - ಪ್ರಕಟಮಾಡಲಿಕ್ಕಾಗಿ, ಶರನಿಧಿ - ಸಮುದ್ರವು, ರತ್ನಮಂ ಧರಿಸಿದಂತೆ - ರತ್ನಗಳನ್ನು ಧರಿಸಿದಹಾಗೆ, ಮಹಾನಗರಿ - ದೊಡ್ಡಿತ್ತಾದ ಪರ್ವತವು, ಔಷದೌಘಮಂ - ಮಾಲಿಕಾಸಮೂಹ ವನ್ನು, ಧರಿಸಿದವಾಳ್ಕೆ - ಧರಿಸಿದಂತೆ, ಸ್ವಭಾವದಿಂ-ಸಹಜದಿಂದೆ, ಧರಿಸಿಹಸ್ಸೆ ಸೆ-ಧರಿಸಿರುವನಷ್ಟೆ? ಶರಣನ ಲಿಂಗದಂತರಮಂ - ಶರಣನು ಲಿಂಗವು ಎಂಬ ತಾರತಮ್ಯವನ್ನು, ಇನ್ನು ವಿಚಾರಿಪುದೇಂ - ಇನ್ನು ವಿಚಾರಿಸುವುದೇನು ?

**ಭಾವಾರ್ಥಬೋಧಿನಿ - ೬೨ :** ಅನಾದಿಲಿಂಗಸ್ವರೂಪನಾದ ಶರಣನು, ಸಮುದ್ರವು ಸಹಜವಾಗಿ, ರತ್ನಗಳನ್ನು ಧರಿಸಿರುವಂತೆ ಮತ್ತು ಮಹಾಪರ್ವತವು ಮೂಲಿಕೆಗಳನ್ನು ಧರಿಸಿರುವಂತೆ, ಸಹಜವಾಗಿಯೇ ಶಿವಲಿಂಗವನ್ನು ಧರಿಸಿಕೊಂಡು, ತನ್ನ ಮಹತ್ವವನ್ನು ಪ್ರಕಟಪಡಿಸುವನು. ಆದುದರಿಂದ ಶರಣನ ಮತ್ತು ಲಿಂಗದ ತಾರತಮ್ಯವನ್ನು ವಿಚಾರಿಸುವುದೇನಿದೆ ? (ಉಭಯ ಸಂಬಂಧವು ಸ್ವಭಾವಸಿದ್ಧ ವಾದುದೆಂದು ಭಾವವು.)

## ಉತ್ಪಲಮಾಲಾವೃತ್ತಂ

೬೩ ಎಲ್ಲಿ ಮನಕ್ಕೆ ವಿಶ್ರಮಣಮಲ್ಲಿ ಸುಖಂ ರತಿಯೆಲ್ಲಿ ನೋಳ್ಪೊಡ
ಲ್ಲಲ್ಲಿಯೆ ಲಿಂಗಸಿದ್ಧಿ ಘನಲಿಂಗಪದಸ್ಥಿತಿ ಲಿಂಗಪೂಜೆ ಮ-
ತ್ತೆಲ್ಲಿಯುಮಿಲ್ಲ ನಿಶ್ಚಯಮಿದೇ ಪರಮಾರ್ಥಮಿದಲ್ಲದನ್ಯಮ
ಪ್ಪೆಲ್ಲಮುಮಾತ್ಮ ದುಃಖಕರಮೈಸೆ ವಿಚಾರಮದೇಂ ಶಿವಾಧವಾ

**ಟೀಕೆ :** ಎಲ್ಲಿ – ಆವ ಠಾವಿನಲ್ಲಿ, ಮನಕ್ಕೆ - ಮನಸ್ಸಿಗೆ, ವಿಶ್ರಮಣಂ-ವಿಶ್ರಾಂತಿಯಹುದು, ಎಲ್ಲಿ - ಆವ ತಾಣವಲ್ಲಿ, ಸುಖಂ - ಸುಖವುಂಟು, ಎಲ್ಲಿ - ಆವ ಸ್ಥಳವಲ್ಲಿ, ರತಿ - ರತಿಯಪ್ಪುದು, ನೋಳ್ಪೊಡೆ - ವಿಚಾರಿಸಲಾಗಿ, ಅಲ್ಲಲ್ಲಿಯೆ-ಆಯಾಯ ತಾಣವಲ್ಲಿಯೇ, ಲಿಂಗಸಿದ್ಧಿ - ಲಿಂಗಸ್ವರೂಪವು ಸಿದ್ಧಿಸುವುದು, ಘನ ಲಿಂಗಪದಸ್ಥಿತಿ - ಅಲ್ಲಿಯೇ ಮಹಾಲಿಂಗಸ್ಥಲದ ನಿಲುಕಡೆ, ಲಿಂಗಪೂಜೆ-ಅಲ್ಲಿಯೇ ಲಿಂಗಾರ್ಚನೆ, ಮತ್ತೆಲ್ಲಿಯುಮಿಲ್ಲ - ಮತ್ತಾವ ಮಾರ್ಗದಲ್ಲಿಯುಮಿಲ್ಲ, ಇದೇ-ನಿಶ್ಚಯಂ - ಇದೀಗಸತ್ಯ, ಪರಮಾರ್ಥಂ - ಇದೀಗ ಉತ್ಕೃಷ್ಟವಾದರ್ಥವು, ಇದಲ್ಲದೆ - ಈ ಪೇಳಿದರ್ಥಮಲ್ಲದೆ, ಅನ್ಯಮಪ್ಪೆಲ್ಲಮುಂ - ಉಳಿದುವೆಲ್ಲವೂ, ಆತ್ಮ ದುಃಖಕರಮೈಸೆ - ಮನೋದುಃಖಸಂಪಾದಕಮಷ್ಟೆ? ವಿಚಾರಮದೇಂ - ಅಲ್ಲಿ

ವಿಚಾರವೇನುಂಟು? (ಶರಣನ ಚಿತ್ತವಿಶ್ರಾಂತಿಯೂ, ಶರಣನ ಸುಖವೂ, ಶರಣನ ರತಿಕ್ರೀಡೆಯೂ, ಲಿಂಗಸಿದ್ಧಿ - ಲಿಂಗಸ್ಥಿತಿ - ಲಿಂಗಪೂಜೆಗಳಾಗಿರ್ಪವು. ಇವಕ್ಕೆ ಚೇರಮರಾಯ ಕುಮಾರಪಾಲ ಗೂರ್ಜರರಾಯ ನಂಬಿಯಣ್ಣ ಸತ್ಯಣ್ಣ ಮೊದಲಾದವರೇ ಸಾಕ್ಷಿ)

**ಭಾವಾರ್ಥಬೋಧಿನಿ - ೬೩** : ಸಹಜವಾದ ಲಿಂಗಸಂಬಂಧವುಳ್ಳ ಶರಣನ ಚಿತ್ತವಿಶ್ರಾಂತಿಯೆಲ್ಲಿಯಿರುವುದೋ ಅಲ್ಲಿಯೇ ಲಿಂಗಸ್ವರೂಪದ ಸಿದ್ಧಿಯಿರುವುದು. ಆತನ ಮನಸ್ಸು ಎಲ್ಲಿ ಸುಖಿಸುವುದೋ ಅಲ್ಲಿಯೇ ಲಿಂಗದ ನಿಜಸ್ಥಿತಿಯಿರುವುದು. ತನ್ಮನವು ಎಲ್ಲಿ ರಮಿಸುವುದೋ ಅಲ್ಲಿಯೇ ಲಿಂಗಪೂಜೆ - ಹೀಗೆ ಶರಣನ ಮನೋವ್ಯಾಪಾರಗಳೆಲ್ಲವೂ ಲಿಂಗವಿಷಯಕಗಳಾಗಿರುವವಲ್ಲದೆ ಅನ್ಯವಾಗಿರುವುದಿಲ್ಲವೆಂಬುದೇ ಸತ್ಯವಾದರ್ಥವು. ಇದಕ್ಕನ್ಯವಾದ ವರ್ತನವೆಲ್ಲವೂ ಮನೋದುಃಖಕರವಾಗಿ ಪರಿಣಮಿಸುವುದು.

## ಉತ್ಪಲಮಾಲಾವೃತ್ತಂ

೬೪ ಎಂತಿರುತಿರ್ದೊಡಂತೆ ಶಿವಪೂಜೆ ಶಿವಾರ್ಪಣಮೈಕ್ಯ ಸಂಪದಂ
ಸಂತತಮನ್ಯಯುಕ್ತಿ ವಿಪರೀತವಿಶೇಷಮನೆಯ್ದೆ ಚಿತ್ತ ವಿ
ಭ್ರಾಂತಿಗೆ ಕಾರಣಂ ನಿರುತಮೆಂದರಿದಾಚರಿಪರ್ ಗುರೂಕ್ತಿಯಿಂ
ದಂ ತಿಳಿದಾತ್ಮನಿಷ್ಠರೆನಿಸಿರ್ಪ ಮಹಾಶರಣರ್ ಶಿವಾಧವಾ

**ಟೀಕೆ** : ಆತ್ಮನಿಷ್ಠರೆನಿಸಿರ್ಪ - ಪರಮಾತ್ಮಲಿಂಗದಲ್ಲಿ ನಿಷ್ಠೆಯುಳ್ಳಂಥ, ಮಹಾಶರಣರ್ - ಅಧಿಕರಾದ ಶಿವಶರಣರು, ಗುರೂಕ್ತಿಯಿಂದೆ - ಶ್ರೀ ಗುರೂಪದೇಶದಿಂದ, ತಿಳಿದು - ಅರಿದು, ಸಂತತಂ - ಆವಾಗಲೂ, ಎಂತಿರುತಿರ್ದೊಡೆ - ಹೇಗಿರುತ್ತಿರ್ದೊಡೆಯೂ, ಅಂತೆ - ಹಾಗೆ, ಶಿವಪೂಜೆ - ರತಿಯೇ ಶಿವಪೂಜೆ, ಶಿವಾರ್ಪಣಂ - ಸುಖವೇ ಶಿವಾರ್ಪಣವು, ಐಕ್ಯಸಂಪದಂ - ಚಿತ್ತವಿಶ್ರಾಂತಿಯೇ ಶಿವಲಿಂಗೈಕ್ಯಸಂಪತ್ತು, ಅನ್ಯಯುಕ್ತಿ - ಬೇರೊಂದು ಯುಕ್ತಿಯು, ವಿಪರೀತ ವಿಶೇಷಮಂ - ಮನಸ್ಸಿಗೆ ಬಂದಂತೆ ಮಾಡುವುದನ್ನು, ಎಯ್ದೆ - ಪೊರ್ದಲಾಗಿ, ಚಿತ್ತವಿಭ್ರಾಂತಿಗೆ- ಮನೋಭ್ರಮಣೆಗೆ, ಕಾರಣಂ - ಕಾರಣವು, ನಿರುತಮೆಂದು - ನಿಶ್ಚಯಮೆಂದು, ಅರಿದು - ತಿಳಿದು, ಆಚರಿಸುವರ್-ನಡೆವರು, (ಈ ಪೇಳ್ದೆರಡು ಪದ್ಯಂಗಳರ್ಥದಲ್ಲಿ-

"ಅಭಾವೇ ಭಾವಮಾಸಾಧ್ಯಹ್ಯಸ್ಥಾನೇ ಸ್ಥಾನಮಾಚರೇತ್ |
ಏತದ್ದ್ವಯಪರಿಜ್ಞಾನೀ ಪ್ರಸಾದೀ ಸಾವಧಾನತಃ" ||

ಇಂತೆಂದು ಶಿವರಹಸ್ಯಮುಂಟು)

**ಭಾವಾರ್ಥಬೋಧಿನಿ - ೬೪ :** ಪರಮಾತ್ಮಲಿಂಗದಲ್ಲಿ ನಿಷ್ಠೆಯುಳ್ಳ ಮಹಾ ಶಿವಶರಣರು ಗುರೂಪದೇಶವನ್ನು ಅರಿತವರಾಗಿರುವರು. ಆದುದರಿಂದ ಅವರು ಯಾವಾಗಲೂ ಹೇಗಿರುತ್ತಿರ್ದರೂ - ಎಂದರೆ - ರಮಿಸುವುದೂ, ಸುಖಿಸುವುದೂ, ಚಿತ್ತವಿಶ್ರಾಂತಿಯಲ್ಲಿರುವುದು - ಇವುಗಳಲ್ಲಿದ್ದರೂ, ಅವು ಕ್ರಮವಾಗಿ - ಹಾಗೆಯೇ ಶಿವಪೂಜೆ, ಶಿವಾರ್ಪಣ, ಶಿವಲಿಂಗೈಕ್ಯಸಂಪತ್ತುಗಳಾಗಿ ಪರಿಣಮಿಸುವವು. ಇದನ್ನುಳಿದು ಬೇರೆ ಯುಕ್ತಿಯು ಇರುವುದಾದರೆ, ಅದು ಚಿತ್ತಭ್ರಾಂತಿಗೆ ಕಾರಣವೆಂದು ತಿಳಿದು, ಆ ಶರಣರು ಮೇಲೆ ಉಕ್ತವಾದ ಕ್ರಮದಿಂದ ನಡೆಯುತ್ತಿರುವರು.

### ಉತ್ಪಲಮಾಲಾವೃತ್ತಂ

೬೫ ಅರ್ಪಿತದ ಪ್ರಸಾದ ಸುಸೂಕ್ಷ್ಮಕಳಾ ವ್ಯವಧಾನಯೋಗಮೆಂ
ತಿರ್ಪುದೊ ವಾಙ್ಮನಕ್ಕನುಪಮಂ ಗುರುವಾಕ್ಯನಿರೂಪದಿಂ ಕರಂ
ತೋರ್ಪುದನನ್ಯ ಭಾವಮನುಭೂತಿಪದೈಕಸುಸಾಧ್ಯಮಾತ್ಮ ವಿ
ತ್ಕರ್ಪುರವಹ್ನಿಯಂತೆಸೆವ ಲಿಂಗನಿಜೈಕ್ಯತೆಯಿಂ ಶಿವಾಧವಾ

**ಟೀಕೆ :** ಅರ್ಪಿತದ - ಕಾಯಾರ್ಪಿತ - ಕರಣಾರ್ಪಿತ - ಭಾವಾರ್ಪಿತದ, ಪ್ರಸಾದದ - ಶುದ್ಧ-ಸಿದ್ಧ-ಪ್ರಸಿದ್ಧ ಪ್ರಸಾದದ, ಸು......ಯೋಗಂ - ಸುಸೂಕ್ಷ್ಮ-ಅತ್ಯಂತ ಗೋಪ್ಯವಾದ, ಕಳಾ - ಜ್ಞಾನದಿಂದ, ವ್ಯವಧಾನ - ವಿಶೇಷವಾದ ಅವಧಾನವುಳ್ಳ, ಯೋಗಂ - ಲಿಂಗಾಂಗಸಾಮರಸ್ಯವು, ಎಂತಿರ್ಪುದೊ - ಹೇಗಿರುವುದೋ, ವಾಙ್ಮನಕ್ಕನುಪಮಂ - ವಾಕ್ಕಿಗೂ ಮನಸ್ಸಿಗೂ ಉಪಮಿಸಬಾರದು, ಆತ್ಮವಿತ್ಕರ್ಪುರವಹ್ನಿಯಂತೆ - ಆತ್ಮವಿತ್ - ಆತ್ಮಜ್ಞಾನಸ್ವರೂಪವಾದ, ಕರ್ಪುರವಹ್ನಿಯಂತೆ - ಶಿಖಿಕರ್ಪೂರ ಪ್ರಕಾಶಿಪಂತೆ, ಎಸೆವ - ಒಪ್ಪುವ, ಲಿಂಗನಿಜೈಕ್ಯತೆಯಿಂ - ಘನಲಿಂಗೈಕ್ಯದಿಂದೆ, ಅನನ್ಯಭಾವಂ-ಅಭೇದ್ಯಭಾವಮಾಗಿ, ಅನುಭೂತಿಪದೈಕಸುಸಾಧ್ಯ ಜ್ಞಾನೈಶ್ವರ್ಯವೊಂದರಿಂದಲೇ, ಸುಸಾಧ್ಯಂ - ಒಳ್ಳಿತಕ್ಕಾಗಿ ಸಾಧಿಸಲ್ ತಕ್ಕುದಾಗಿ, ಗುರುವಾಕ್ಯನಿರೂಪದಿಂ - ಗುರುವಚನೋಪದೇಶದಿಂದೆ, ಕರಂ - ಚೆನ್ನಾಗಿ, ತೋರ್ಪುದು - ಕಾಣಿಸುವುದು.

**ಭಾವಾರ್ಥಬೋಧಿನಿ - ೬೫ :** ಲಿಂಗಕ್ಕೆ ಅರ್ಪಿಸುವ ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತವೆಂಬ ಸ್ವರೂಪದಿಂದಿರುವ ಅರ್ಪಿತದ ಮತ್ತು ತಲ್ಲಿಂಗ ಮುಖದಿಂದ ಪಡೆಯುವ ಶುದ್ಧ-ಸಿದ್ಧ-ಪ್ರಸಿದ್ಧ ಸ್ವರೂಪದಿಂದಿರುವ ಪ್ರಸಾದದ ಅತಿ ಗೋಪ್ಯವಾದ ಜ್ಞಾನದಿಂದ ಲಬ್ಧವಾಗುವ ಅವಧಾನಪೂರ್ವಕವಾದ ಲಿಂಗಾಂಗ ಸಾಮರಸ್ಯವು ಹೇಗಿರುವುದೋ ಅದು ವಾಕ್ಕಿಗೂ ಮನಸ್ಸಿಗೂ ಅನುಪಮವು. ಆತ್ಮಜ್ಞಾನದಿಂದ ಕರ್ಪೂರಾಗ್ನಿಗಳ ಸಂಬಂಧದಂತೆ ಒಡಗೂಡುವ ಆ ಲಿಂಗಾಂಗಗಳ ಸಾಮರಸ್ಯದ ಅಭೇದವು, ಅನುಭವೈಕವೇದ್ಯವೂ ಗುರೂಪದೇಶಗಮ್ಯವೂ ಆಗಿರುವದು.

## ಉತ್ಪಲಮಾಲಾವೃತ್ತಂ

೬೬ ಅಂಗನೆ ತನ್ನ ಚಿತ್ತರಮಣಂಗೆ ಮಹಾರತಿಯಿಂ ಪ್ರಿಯಾಂಗದಾ-
ಲಿಂಗನಮಂ ಸಮರ್ಪಿಸಿ ತದೀಯ ವಿಶಿಷ್ಟಸುಖ ಪ್ರಸಾದಮಂ
ಪಿಂಗದೆ ಭೋಗಿಪಲ್ಲಿಯ ಕಳಾವ್ಯವಧಾನದ ಹಾಗೆ ಲಿಂಗ ಸಂ-
ಗಾಂಗಸುಖೋಪಭೋಗವತಿಸೂಕ್ಷ್ಮತರಂ ಶುಭದಂ ಶಿವಾಧವಾ

**ಟೀಕೆ :** ಅಂಗನೆ - ಸ್ತ್ರೀಯು, ತನ್ನ ಚಿತ್ತರಮಣಂಗೆ - ತನ್ನ ಪ್ರಾಣ ವಲ್ಲಭಂಗೆ, ಮಹಾರತಿಯಿಂ - ಅತ್ಯಂತ ಸಂತೋಷದಿಂದ, ಪ್ರಿಯಾಂಗದ - ಪ್ರೀತಿ ಗಾಸ್ಪದವಾದ ಶರೀರದ, ಆಲಿಂಗನಮಂ - ಅಪ್ಪುಗೆಯನ್ನು, ಸಮರ್ಪಿಸಿ - ಕೊಟ್ಟು, ತದೀಯ ವಿಶಿಷ್ಟಸುಖಪ್ರಸಾದಮಂ - ತದೀಯ - ಆ ಆಲಿಂಗನದ ಸಂಬಂಧವಾದ, ವಿಶಿಷ್ಟ - ವಿಗ್ಗಳವಾದ, ಸುಖಪ್ರಸಾದಮಂ - ಸುಖಪರಿಣಾಮವನು, ಪಿಂಗದೆ - ತೊಲಗದೆ, ಭೋಗಿಪಲ್ಲಿಯ - ಅನುಭವಿಸುವಲ್ಲಿನ ಕಳಾವ್ಯವಧಾನದ ಹಾಗೆ - ಕಳಾ- ಷೋಡಶಕಲೆಗಳ ವ್ಯವಧಾನದ ಹಾಗೆ - ವಿಶೇಷವಾದ ಅವಧಾನದ ಹಾಗೆ, ಲಿಂಗ ಸಂಗಾಂಗ ಸುಖೋಪಭೋಗಂ - ಲಿಂಗದಲ್ಲಿ ಸಂಬಂಧವಾದಂಗದ ಸುಖವನನು ಭವಿಸುವುದು, ಅತಿ ಸೂಕ್ಷ್ಮತರಂ - ಅತ್ಯಂತ ಗೋಪ್ಯವಾದಂತಿಹುದು, ಶುಭದಂ - ಮಂಗಳವ ಕೊಡುವುದು, (ಪರಿಣಾಮವ ಕೊಡುವುದೆಂಬುದರ್ಥಂ).

**ಭಾವಾರ್ಥಬೋಧಿನಿ – ೬೬ :** ಸತಿಯು ತನ್ನ ಹೃದಯವಲ್ಲಭನಿಗೆ ಅಧಿಕಪ್ರೇಮದಿಂದ ತನ್ನ ದೇಹದ ಆಲಿಂಗನವನ್ನರ್ಪಿಸಿ, ಆ ಆಲಿಂಗನದಿಂದುಂಟಾದ ಅಧಿಕ ಸುಖವನ್ನನುಭವಿಸುವಲ್ಲಿ ಯಾವ ಬಗೆಯ ರತಿಕಳೆಯ ಅವಧಾನವಿರುವುದೋ

ಹಾಗೆ ಲಿಂಗಾಂಗಸಂಯೋಗದ ಸೌಖ್ಯವನ್ನನುಭವಿಸುವಲ್ಲಿಯೂ ಲಿಂಗಾಂಗ ಸಂಬಂಧದ ಕಳೆಯು ಅತಿ ಗೋಪ್ಯವಾಗಿರುವುದು. ಆದರೂ ಅದು ಮಂಗಳಕರ ವಾಗಿರುವುದು.

## ಉತ್ಪಲಮಾಲಾವೃತ್ತಂ

೬೭ ಲೌಕಿಕವೃತ್ತಿಯೋ ಮರಳಿ ಭಾಕ್ತಿಕವರ್ತನಮಾಗಿ ಭಾಕ್ತಿಕಂ
ಲೌಕಿಕಮಾಗಿ ತನ್ನೊಳಗೆ ತಾನೆರಡಿಲ್ಲದೆ ಕೂಡಿ ಸಂಶಯಂ
ಪೋಕೆಡೆಗೆಟ್ಟು ನಿಂದು ಬಯಲಾದ ಬಳಿಕ್ಕದನೇನನೆಂದಪೆಂ
ವ್ಯಾಕುಲಮಿಲ್ಲದಿರ್ಪ ಪರಮಾಚರಣಸ್ಥಿತಿಯಿಂ ಶಿವಾಧವಾ

**ಟೀಕೆ**. ಲೌಕಿಕವೃತ್ತಿಯೋ - ಲೋಕವರ್ತನೆಯೋ, ಮರಳಿ - ಬಳಿಕ, ಭಾಕ್ತಿಕ ವರ್ತನಮಾಗಿ - ಭಕ್ತಿಸಂಬಂಧದ ವರ್ತನಮಾಗಿ, ಭಾಕ್ತಿಕಂ - ಆ ಭಕ್ತಿವರ್ತನವೇ, ಲೌಕಿಕಮಾಗಿ - ಲೋಕವ್ಯವಹಾರಮಾಗಿ, ತನ್ನೊಳಗೆ ತಾನೆರ ಡಿಲ್ಲದೆ - ಲಿಂಗಸ್ವರೂಪನಾದ ತನ್ನಲ್ಲಿ ಭಿನ್ನವಿಲ್ಲದೆ, ಕೂಡಿ - ಸಂಬಂಧವಾಗಿ, ಸಂಶಯಂ - ಸಂದೇಹವು, ಪೋಕೆಡೆಗೆಟ್ಟು - ಪಲಾಯನವಾಗಿ, ವ್ಯಾಕುಲಮಿಲ್ಲ ದಿರ್ಪ - ಚಿಂತೆಯಿಲ್ಲದಿಹ, ಪರಮಾಚರಣ ಸ್ಥಿತಿಯಿಂ - ಉತ್ಕೃಷ್ಟವಾದ ಶರಣ ಮಾರ್ಗದ ನಿಲುಕಡೆಯಿಂದ, ನಿಂದು - ಸ್ಥಿರವಾಗಿ, ಬಯಲಾದ ಬಳಿಕ - ಚಿದಾಕಾಶ ಸ್ವರೂಪವಾದ ಮಹಾಲಿಂಗವಾದ ಬಳಿಕ, ಅದಂ - ಆ ಮಾರ್ಗವನ್ನು, ಏನನೆಂದಪೆಂ- ಏನೆಂದು ಹೇಳಲಿ !

**ಭಾವಾರ್ಥಬೋಧಿನಿ** – ೬೭ : ಲಿಂಗಾಂಗಸಂಬಂಧಿಯಾದ ಶರಣನ ಲೋಕಸಂಬಂಧ ವ್ಯವಹಾರವು ಭಕ್ತಿಸಂಬಂಧ ವ್ಯವಹಾರವಾಗಿಯೂ, ಭಕ್ತಿಸಂಬಂಧ ವ್ಯವಹಾರವು ಲೋಕಸಂಬಂಧ ವ್ಯವಹಾರವಾಗಿಯೂ ಅಭೇದರೂಪದಿಂದ ಪರಿ ಣಮಿಸಿದಾಗ ಯಾವ ಸಂಶಯವಿಲ್ಲದೆ ನಿಶ್ಚಿಂತೆಯಿಂದಿದ್ದು, ಆ ಶರಣನು ಉತ್ಕೃಷ್ಟವಾದ ಆ ಲಿಂಗಾಂಗ ಮಾರ್ಗದಲ್ಲಿ ನಡೆದು ಮಹಾಲಿಂಗ ಸ್ವರೂಪನಾ ಗುವನು ಈ ಬಗೆಯ ಶರಣಮಾರ್ಗವನ್ನು ಏನೆಂದು ಹೇಳಬಹುದು ! (ಸರ್ವತ್ರ ಲಿಂಗದೃಷ್ಟಿಯುಳ್ಳ ಶರಣ ಮಾರ್ಗದಲ್ಲಿ ಲೋಕಾಚಾರವೇ ಲಿಂಗಾಚಾರವಾಗಿ ಪರಿಣಮಿಸುವುದೆಂಬುದಭಿಪ್ರಾಯಂ.)

## ಚಂಪಕಮಾಲಾವೃತ್ತಂ

೬೮ ಪ್ರಿಯತಮೆಯಪ್ಪ ಜಾಯೆ ನಿಜವಲ್ಲಭನಂ ರತಿಕೇಳಿಯೋಳ್ ಮನಂ.
ಬಯಸಿದ ಹಾಗೆ ತರ್ಜನವಿಡಂಬನಗರ್ಹಣತಾಡನಾದಿಯಂ
ನಯಿಸಲದೇಂ ವಿರೋಧಮೊ ಸುಖಾಸ್ಪದಮೋ ಶರಣಾ ಸ್ವಕೀಯಲಿಂ-
ಗಯಜನದಲ್ಲಿ ಲೀಲೆವಿಡಿದೇನನೊಡರ್ಚಿದೊಡೇಂ ಶಿವಾಧವಾ

**ಟೀಕೆ :** ಪ್ರಿಯತಮೆಯಪ್ಪ - ಅತ್ಯಂತ ಪ್ರಿಯಳಾದ, ಜಾಯೆ - ಪತ್ನಿಯು, ನಿಜವಲ್ಲಭನಂ - ತನ್ನ ಪತಿಯನ್ನು, ರತಿಕೇಳಿಯೋಳ್ - ಕಾಮಕ್ರೀಡೆಯಲ್ಲಿ, ಮನಂ ಬಯಸಿದ ಹಾಗೆ - ಮನಸ್ಸು ಬಂದಂತೆ, ತರ್ಜನ …… ನಾದಿಯಂ- ತರ್ಜನ - ಅಂಜಿಸುವುದು, ವಿಡಂಬನ - ಅಣಕವಾಡುವುದು, ಗರ್ಹಣ - ನಿಂದಿಸುವುದು, ತಾಡನ - ಪಂಚಾಂಗುಲಿನ್ಯಾಸ, ಆದಿಯಂ - ಇವು ಮೊದಲಾದುವನ್ನು, ನಯಿಸಲ್ - ಮಾಡಲು, ಅದೇಂ ವಿರೋಧಮೊ - ಅದೇನು ಹಗೆತನವೋ ? ಸುಖಾಸ್ಪದಮೋ - ಆನಂದಕ್ಕೆ ಆಸ್ಪದವೊ ? ( ಆನಂದವೇ ತಪ್ಪದೆಂದರ್ಥ ) ಶರಣಂ - ಶಿವಜ್ಞಾನಸಂಪನ್ನನಾದ ಶರಣನು, ಸ್ವಕೀಯ ಲಿಂಗಯಜನದಲ್ಲಿ-ತನ್ನ ಸಂಬಂಧವಾದ ಲಿಂಗಪೂಜೆಯಲ್ಲಿ, ಲೀಲೆವಿಡಿದು - ವಿಲಾಸವನಂಗೀಕರಿಸಿ, ಏನನೊಡರ್ಚಿದೊಡೇಂ - ಏನನ್ನು ಉದ್ಯೋಗಿಸರೇನು ? ( ಎಲ್ಲವೂ ಸಮರ್ಪಕವೆಂಬುವರ್ಥ ) ( ಈ ಅರ್ಥದಲ್ಲಿ—

"ಯಾಯಾ ಚೇಷ್ಟಾ ಸಮುತ್ಪನ್ನಾ ಜಾಯತೇ ಶಿವಯೋಗಿನಾಂ |
ಸಾಸಾ ಪೂಜ ಮಹೇಶಸ್ಯ ಸರ್ವಥಾ ತದ್ಗತಾತ್ಮನಾಂ ||"

ಎಂದು ಪ್ರಮಾಣ.)

**ಭಾವಾರ್ಥಬೋಧಿನಿ - ೬೮ :** ಪ್ರಿಯತಮೆಯಾದ ಸತಿಯು ರತಿಕ್ರೀಡೆಯಲ್ಲಿ ತನ್ನ ಪತಿಯನ್ನು ಮನಸ್ಸಿಗೆ ಬಂದಂತೆ ಹೆದರಿಸುವುದು, ಅಣಕಿಸುವುದು, ನಿಂದಿಸುವುದು, ಹೊಡೆಯುವುದು ಮೊದಲಾದವುಗಳನ್ನು ಮಾಡುವುದು. ಆ ಪತಿಯ ಆನಂದಾಭಿವೃದ್ಧಿಗಲ್ಲದೆ ವಿರೋಧಕ್ಕಲ್ಲ. ಅದರಂತೆ ಲಿಂಗಕ್ಕೆ ಸತಿಯಾದ ಶರಣನು ತನ್ನ ಲಿಂಗದ ಅರ್ಚನೆಯಲ್ಲಿ ಲೀಲೆಯಿಂದ ಯಾವ ಕೃತಿಯನ್ನು ಮಾಡಿದರೂ ಅದು ಲಿಂಗಕ್ಕೆ ಮೆಚ್ಚಿಗೆಯಾಗಿಯೇ ಇರುವುದು (ಲಿಂಗರೂಪನಾದ ಶರಣನ ಕೃತಿಯೆಲ್ಲವೂ ಲಿಂಗಲೀಲಾವಿಲಾಸವೆಂದೇ ಭಾವವು.)

**ಅವತಾರಿಕೆ :** ಸಹಜವಾಗಿ ಮಹತ್ವಾತಿಶಯದಿಂದೊಪ್ಪುವ ಶರಣಂಗೆ ಉಪಾಧಿವಶದಿಂ ಬಂದ ಮಹತ್ವವು ರಂಜಿಸದೆಂದು ಪೇಳುತ್ತಿರ್ದಪಂ—

**ಚಂಪಕಮಾಲಾವೃತ್ತಂ**

೬೯ ಇದು ಶರಣಂಗೆ ಲಿಂಗಕರಣಂಗೆ ಚಿದಾಭರಣಂಗೆ ದೊಡ್ಡಿತಾ-
ದುದೆ ಬಿಡು ದೇವರಂತೊಲಿದರಿಂತೊಲಿದರ್ ನಿಜರೂಪದೋರಿದರ್
ಸದೆ ಬಡಿದರ್ ವಿಭರ್ಜಿಸುರೆ ಮೈದೊಡೆದರ್ ಕನಸಿಂಗೆ ಬಂದರ
ಪ್ಪಿದರೊಡನಿರ್ದರೆಂದೆನುತೆ ಕೊರ್ಬುವ ದುರ್ವಚನಂ ಶಿವಾಧವಾ

**ಟೀಕೆ :** ದೇವರ್ - ಶಿವಸಮಾನತ್ವನುಳ್ಳಂಥ ಮಹಾಪುರುಷರು, ಅಂತೊಲಿದರ್ - ಶಿವನು ಚೋಳಾದಿಗಳಿಗೆ ಒಲಿದಹಾಂಗೆ ಒಲಿದರು, ಇಂತೊಲಿದರ್ - ಬಸವಾದಿ ಪುರಾತನರಿಗೆ ಒಲಿದಹಾಂಗೆ ಒಲಿದರು, ನಿಜರೂಪದೋರಿದರ್ - ತಮ್ಮ ಸಹಜರೂಪದೋರಿದರು, ಸದೆ ಬಡಿದರ್ - ವಿಶೇಷವಾಗಿಕೊಂದರು, ವಿಭರ್ಜಿಸಿ-ಬೈದು, ಉರೆ - ಚೆನ್ನಾಗಿ, ಮೈದೊಡೆದರ್ - ಶರೀರವನೇ ಒರಸಿದರು, ಕನಸಿಂಗೆ ಬಂದರ್ - ಸ್ವಪ್ನಕ್ಕೆ ಬಂದರು, ಅಪ್ಪಿದರ್ - ತಕ್ಕೈಸಿದರು, ಒಡನಿರ್ದರ್-ಸಂಗಡಲೇ ಇದ್ದರು, ಎಂದೆನುತೆ - ಹೀಗೆಂದು ನುಡಿಯುತೆ, ಕೊರ್ಬುವ-ಬೊಬ್ಬಿಡುವಂಥ, ದುರ್ವಚನಂ - ಕೆಟ್ಟನುಡಿಯು, ಇದು - ತಾನು, ಲಿಂಗಕರಣಂಗೆ-ಲಿಂಗೇಂದ್ರಿಯಸ್ವರೂಪನಾದ, ಚಿದಾಭರಣಂಗೆ - ಜ್ಞಾನವೇ ಆಭರಣವಾಗುಳ್ಳ, ಶರಣಂಗೆ - ಶಿವಶರಣಂಗೆ, ದೊಡ್ಡಿತಾದುದೆ - ಘನವಾಯಿತೆ? ಅಲ್ಲ, ಬಿಡು-ವಿಸರ್ಜಿಸು.

**ಭಾವಾರ್ಥಬೋಧಿನಿ - ೬೯ :** ಶಿವಸಮಾನರಾದ ಮಹಾತ್ಮರು, ಅವರಿಗೆ ಆ ರೀತಿಯಾಗಿ ಒಲಿದರು, ಇನ್ನೀದವರಿಗೆ ಈ ರೀತಿಯಾಗಿ ಒಲಿದರು, ಇವರಿಗೆ ಪ್ರತ್ಯಕ್ಷರಾದರು, ಅವರಿಗೆ ಬೈದು ಶರೀರವನ್ನು ಕಳೆದರು, ಅವರ ಕನಸಿನಲ್ಲಿ ಬಂದರು ಅವರನ್ನು ಅಪ್ಪಿಕೊಂಡರು. ಎಂದು ಮುಂತಾಗಿ ಕೊಚ್ಚುವ ದುರ್ವಚನವಿದು. ಲಿಂಗೇಂದ್ರಿಯ ಸ್ವರೂಪನೂ, ಜ್ಞಾನಾಭರಣನೂ ಆದ ಶಿವಶರಣನಿಗೆ ಘನವಾದ ಮಾತೇನಲ್ಲ ಬಿಡು. ( ಶರಣನಿಗೆ ಈ ರೀತಿ ಉಪಾಧಿವಶದಿಂದಾದ ಮಹತ್ವವು ರುಚಿಸದೆಂದಭಿಪ್ರಾಯವು. )

## ಉತ್ಪಲಮಾಲಾವೃತ್ತಂ

೨೦ ದೇವರನೆತ್ತಬಲ್ಲನವರೊತ್ತಿನ ದಿಂಡರನೆತ್ತಬಲ್ಲ ನಾ
ಗೋವರನೆತ್ತಬಲ್ಲನವರಾಚೆಯ ಗುಡ್ಡರನೆತ್ತಬಲ್ಲ ನು
ಚ್ಚಾವಚಮಪ್ಪ ಕಾಳ್ನುಡಿಯದಂತಿರಲಂತಿರಲೇಕ ಲಿಂಗನಿ
ಷ್ಠಾವರನಪ್ಪ ಸತ್ಯಶರಣಂ ಮಹಿಮಾಭರಣಂ ಶಿವಾಧವಾ

**ಟೀಕೆ :** ಏಕಲಿಂಗನಿಷ್ಠಾವರನಪ್ಪ - ಶಿವಲಿಂಗವೊಂದರ ನಿಷ್ಠೆಯಲ್ಲಿ ಶ್ರೇಷ್ಠವಾದ - ಮಹಿಮಾಭರಣಂ - ಮಹತ್ವವೇ ಆಭರಣ ವಾಗುಳ್ಳ, ಸತ್ಯಶರಣಂ - ಸಹಜಜ್ಞಾನಿಯಾದ ಶರಣನು, ದೇವರ - ಸಾಯುಜ್ಯ ಪದಸ್ಥರನ್ನು, ಎತ್ತಬಲ್ಲಂ - ಏನೆಂದು ಬಲ್ಲನು ? ಅವರೊತ್ತಿನ - ಅವರ ಸಮೀಪ ದಲ್ಲಿರ್ಪ, ದಿಂಡರಂ - ಸಾರೂಪ್ಯ ಪದಸ್ಥರನ್ನು, ಎತ್ತಬಲ್ಲಂ - ಏನೆಂದು ಬಲ್ಲನು ? ಆಗೋವರಂ - ಅವರ ಬಳಿಯಲ್ಲಿರ್ಪ ಸಾಮೀಪ್ಯ ಪದಸ್ಥರನ್ನು, ಎತ್ತ ಬಲ್ಲಂ - ಏನೆಂದು ಬಲ್ಲನು ? ಅವರಾಚೆಯ ಗುಡ್ಡರಂ - ಅವರಿಂದ ಕಡೆಯಲ್ಲಿರ್ಪ ಸಾಲೋಕ್ಯ ಪದಸ್ಥರನ್ನು, ಎತ್ತ ಬಲ್ಲಂ - ಏನೆಂದು ಬಲ್ಲನು ? ಉಚ್ಚಾವಚಮಪ್ಪ - ಹಿರಿಮ ಕಿರಿವೆಂದರಿಯದ - ಕಾಳ್ನುಡಿ - ಹರಟೆಯ ಮಾತು, ಅದಂತಿರಲಂತಿರಲಿ - ಅದು ಹಾಂಗಿರಲಿ ಹಾಂಗಿರಲಿ.

**ಭಾವಾರ್ಥಬೋಧಿನಿ - ೨೦ :** ಏಕಲಿಂಗನಿಷ್ಠೆಯಲ್ಲಿ ಶ್ರೇಷ್ಠನೂ, ಮಹತ್ವವೇ ಭೂಷಣವಾಗುಳ್ಳವನೂ ಆದ ಸತ್ಯಶರಣನು ಸಾಯುಜ್ಯ-ಸಾರೂಪ್ಯ-ಸಾಮೀಪ್ಯ-ಸಾಲೋಕ್ಯವೆಂಬ ಪದವಿಗಳನ್ನು ಪಡೆದವರನ್ನು ಲಕ್ಷೀಕರಿಸುವುದಿಲ್ಲ. (ತರತಮ ಭಾವದಿಂದ ಕೂಡಿದ ಈ ಚತುರ್ವಿಧ ಪದವಿಗಳ ಮಾತು ಶರಣನಿಗೆ ಸರಿಬರುವದಿಲ್ಲ ವೆಂಬುದಭಿಪ್ರಾಯಂ).

## ಚಂಪಕಮಾಲಾವೃತ್ತಂ

೨೧ ಬಿಡುಬಿಡು ಲಿಂಗಭಕ್ತ ನವಸಾನ ವಿಮುಕ್ತನನಾದಿಮುಕ್ತ ನೀ
ಕಡುಮರುಳಾಟದಾಳಿಕೆಯ ತೂಳದ ಮೇಳದಮತ್ತ ಲೀಲೆಯಾ
ಗಡದ ಸಮರ್ಥನಂತಹವನಿಂತಹವಂ ಛಲಶೀಲವಂತನೆಂ
ದಡಿಗಡಿಗುಬ್ಬಿ ಕೊಬ್ಬಿ ನುಡಿವಲ್ಲಿಗೆ ಯೋಗ್ಯನೆ ಪೇಳ್ ಶಿವಾಧವಾ

**ಟೀಕೆ** : ಲಿಂಗಭಕ್ತಂ - ಶಿವಲಿಂಗದಲ್ಲಿ ಭಕ್ತಿಯುಳ್ಳಂಥ, ಅವಸಾನ ವಿಮುಕ್ತಂ - ದೇಹಪಾತವೆಂಬ ಉಪಾಧಿಯಿಲ್ಲದಂಥ, ಅನಾದಿಮುಕ್ತಂ - ಅನಾದಿ ಮಾಯೆಯಿಂದ ಬಿಡಲ್ಪಟ್ಟ ಶರಣನು, ಅಗಡದ ಸಮರ್ಥಂ - ವಿಶೇಷವಾದ ಸಾಮರ್ಥ್ಯವುಳ್ಳವನು, ಅಂತಹವಂ - ಚೋಳಾದಿಗಳಂಥವನು, ಇಂತಹವಂ - ಬಸವಾದಿ ಪುರಾತನರಂಥವನು, ಛಲಶೀಲವಂತಂ - ಛಲಪದವನುಳ್ಳ ಶೀಲವಂತನು, ಎಂದು - ಹೀಗೆಂದು, ಈ ಕಡು ಮರುಳಾಟದ - ಈ ವಿಶೇಷವಾದ ಹುಚ್ಚಾಟದಲ್ಲಿ, ಆಳಿಕೆಯ - ಮಗ್ನತೆಯ, ತೂಳದ ಮೇಳದ - ತೂಳ ಸಮೂಹದ, ಮತ್ತ ಲೀಲೆಯ - ಮೈಮರೆದ ಚೇಷ್ಟೆಯನ್ನು, ಅಡಿಗಡಿಗೆ - ಹೆಜ್ಜೆ ಹೆಜ್ಜೆಗೆ, ಉಬ್ಬಿ - ಮೈಯುಬ್ಬಿ, ಕೊಬ್ಬಿ - ಗರ್ವಿಸಿ, ನುಡಿವಲ್ಲಿಗೆ - ಹೇಳುವುದಕ್ಕೆ ಯೋಗ್ಯನೆ? ಪೇಳ್ - ಹೇಳು, ಬಿಡುಬಿಡು - ಅದೆಲ್ಲಾ ಬಿಡುಬಿಡು.

**ಭಾವಾರ್ಥಬೋಧಿನಿ - ೭೧ : ದೇಹಾವಸಾನವೆಂಬುದಿಲ್ಲದವನೂ,** ಮಾಯಾಮಲರಹಿತನೂ, ಲಿಂಗಭಕ್ತನೂ ಆದ ಶಿವಶರಣನು ಬಹುಸಮರ್ಥನೂ ಅಂತಹ ಮಹಿಮನೂ, ಇಂತಹ ಘನತೆಯುಳ್ಳವನೂ ಎಂದು ಮುಂತಾಗಿ ಮೈಮರೆದು ಬಣ್ಣಿಸುವ ಹುಚ್ಚುಮಾತುಗಳಿಗೆ ಒಳಗಾಗುವನೆ? ಇಲ್ಲ. (ಆತ್ಮಸ್ತುತಿಯನ್ನು ಸಹಿಸನೆಂಬುದಭಿಪ್ರಾಯಂ)

**ಚಂಪಕಮಾಲಾವೃತ್ತಂ**

೭೨ ಅರಿವೆ ಸಮಸ್ತವಸ್ತು ವಿಷಯಾಗಮ ಮುಖ್ಯಮದೇ ವಿಮುಕ್ತಿದಂ
ಪೊರಗಣ ವೇಷದಾಚರಣೆ ಭಾವಿಪೊಡೇ ವಿಧಮಾದೊಡೇಂ ವೃಥಾ
ಜರೆವುದು ಬುದ್ಧಿಯೇ ಶರಣರೆಂತಿಹರೆಂಬುದನೊಲ್ದು ನೋಡದೀ
ಬರಿತನಮುಕ್ತಿ ಚಾಪಲದ ಗೌರವದಿಂ ಫಲಮೇಂ ಶಿವಾಧವಾ

**ಟೀಕೆ** : ಸಮಸ್ತ......ಮುಖ್ಯಂ - ಸಮಸ್ತವಸ್ತುವಿಷಯ - ಸಮಸ್ತ ಪದಾರ್ಥಗೋಚರವಾಗಿ, ಆಗಮಮುಖ್ಯಂ - ಶೈವಾಗಮಗಳಲ್ಲಿ ಪ್ರಧಾನವಾದ, ಅರಿವೆ - ಜ್ಞಾನವೇ, ಅದೇ - ಅದು ತಾನೇ, ವಿಮುಕ್ತಿದಂ - ಮೋಕ್ಷವ ಕೊಡುವಂತ ಹದು, ಪೊರಗಣ - ಬಾಹ್ಯದ, ವೇಷದಾಚರಣೆ - ವೇಷದಾಚಾರವು, ಭಾವಿಪೊಡೆ -

ವಿಚಾರಿಸುವೊಡೆ, ವಿವಿಧಮಾದೊಡೇಂ - ಆವ ಪ್ರಕಾರವಾದೊಡೇನು ? ಶರಣರ್ - ಶಿವಶರಣರು, ಎಂತಿಹರ್ - ಹೇಗಿರ್ಪರು, ಎಂಬುದಂ - ಎಂಬುದನ್ನು, ಒಲ್ದು - ಪ್ರೀತಿಸಿ, ನೋಡದೆ, ವೃಥಾ - ವ್ಯರ್ಥವಾಗಿ, ಜರೆವುದು - ದೂಷಿಸುವುದು, ಬುದ್ಧಿಯೆ - ಇದೊಂದು ವಿವೇಕವೆ ?, ಈ ಬರಿತನದ - ಈ ವ್ಯರ್ಥವಾದ, ಉಕ್ತಿ ಚಾಪಲದ - ಉಕ್ತಿ - ನುಡಿಯ, ಚಾಪಲದ - ಚಪಲತೆಯ, ಗೌರವದಿಂ - ಅತಿಶಯದಿಂ, ಫಲವೇರಿ - ಪ್ರಯೋಜನವೇನು ? (ಮಹಾನುಭಾವರಾದ ಶರಣರು ಆವ ವೇಷದಲ್ಲಿರ್ದೊಡೆಯೂ ದೂಷಿಸಲಾಗದೆಂಬುದಭಿಪ್ರಾಯಂ)

**ಭಾವಾರ್ಥಬೋಧಿನಿ - ೭೨ :** ಜ್ಞಾನವು ಸಕಲ ಪದಾರ್ಥಸ್ವರೂಪವನ್ನೂ ಪ್ರತಿಪಾದಿಸುವುದರಿಂದ ಶಿವಾಗಮಗಳಲ್ಲಿ ಶ್ರೇಷ್ಠವಾದುದೆಂದು ಹೇಳಿಸಿಕೊಂಡಿರುವುದು. ಆ ಜ್ಞಾನವೇ ಮುಕ್ತಿಪ್ರದವಾಗಿರುವುದು. ಅಂತಹ ಜ್ಞಾನವುಳ್ಳ ಶರಣರ ಬಾಹ್ಯ ವೇಷಾಚಾರಗಳು ಹೇಗಿದ್ದರೇನು ? ಅವರ ಆಂತರಿಕ ಸ್ಥಿತಿಯನ್ನು ಪ್ರೀತಿಯಿಂದ ವಿಮರ್ಶಿಸಿ ನೋಡದೆ ಸುಮ್ಮನೆ ದೂಷಿಸುವುದು ವಿವೇಕವಲ್ಲ. ಈ ರೀತಿಯ ಬರಿಯ ಚಪಲೋಕ್ತಿಗಳಿಂದೇನು ಪ್ರಯೋಜನ ? (ಶರಣರ ಯೋಗ್ಯತೆಯು ಮುಖ್ಯ; ವೇಷವು ಮುಖ್ಯವಲ್ಲವೆಂದು ಭಾವವು).

## ಉತ್ಪಲಮಾಲಾವೃತ್ತಂ

೭೩ ಕ್ಷುತ್ತೃಷೆ ನಿದ್ರೆಯಿಲ್ಲದವರೇ ಹಿರಿಯರ್ ಪರಿಪೂಜ್ಯರಾದೊಡೀ
ಕ್ಷುತ್ತೃಷೆ ನಿದ್ರೆಯಿಲ್ಲದಿಹ ಕಲ್ಮರಮಟ್ಟಿಗಳೇ ಸುಪೂಜ್ಯರೇ
ಕ್ಷುತ್ತೃಷೆ ನಿದ್ರೆಯೇ ಕೊರತೆಯಲ್ಲ ಮಹತ್ವಗುಣಕ್ಕೆ ಶುದ್ಧ ಚಿ
ನ್ಮಾತ್ರ ಪವಿತ್ರಗಾತ್ರರನದೆಂತರಿವರ್ ಪಶುಗಳ್ ಶಿವಾಧವಾ

**ಟೀಕೆ :** ಕ್ಷುತ್ತೃಷೆ ನಿದ್ರೆಯಿಲ್ಲದವರೇ - ಹಸಿವು ನೀರಡಿಕೆ ನಿದ್ರೆಯಿಲ್ಲದವರೇ, ಹಿರಿಯರ್ - ಶ್ರೇಷ್ಠರು, ಪರಿಪೂಜ್ಯರು - ಮಹಾಪೂಜ್ಯರು, ಆದೊಡೆ - ಹೀಗಾದೊಡೆ, ಈ ಕ್ಷುತ್ತೃಷೆ ನಿದ್ರೆಯಿಲ್ಲದಿಹ - ಈ ಹಸಿವು ನೀರಡಿಕೆ ನಿದ್ರೆಯಿಲ್ಲದಿರ್ಪ, ಕಲ್ಮರಮಟ್ಟಿಗಳೇ - ಕಲ್ಮರ ಮಣ್ಣುಗಳೇ, ಸುಪೂಜ್ಯರೇ - ಅತಿಶಯವಾಗಿ ಪೂಜಿಸಲ್ತಕ್ಕುವೇ ?, ಮಹತ್ವಗುಣಕ್ಕೆ - ಮಹಿಮಾತಿಶಯಕ್ಕೆ, ಕ್ಷುತ್ತೃಷೆ

ನಿದ್ರೆಯೇ - ಹಸಿವು ನೀರಡಿಕೆ ನಿದ್ರೆಯುಂಟಾಗುವುದೇ, ಕೊರತೆಯಲ್ಲ - ಹೀನವಲ್ಲ ಪಶುಗಳ್ - ಅಜ್ಞಾನಿಗಳು, ಶುದ್ಧ ಚಿನ್ಮಾತ್ರ ಪವಿತ್ರಗಾತ್ರರಂ - ಶುದ್ಧ - ನಿರ್ಮಳವಾದ, ಚಿನ್ಮಾತ್ರ - ಕೇವಲ ಶಿವಜ್ಞಾನದಿಂದ, ಪವಿತ್ರ - ಪಾವನವಾದ, ಗಾತ್ರರಂ - ಶರೀರವುಳ್ಳವರನ್ನು, ಅದೆಂತರಿವರ್ - ಅದೇನೆಂದು ಬಲ್ಲರು. (ಹಸಿವು ತೃಷೆ ನಿದ್ರೆಯಿಲ್ಲದವರೇ ಪೂಜ್ಯರು; ಇವು ಉಂಟಾದವರೇ ಅಪೂಜ್ಯರೆಂದು ಶಿವಶರಣರಂ ನಿಂದಿಸಲಾಗದೆಂಬುದಭಿಪ್ರಾಯಂ).

**ಭಾವಾರ್ಥಬೋಧಿನಿ - ೭೩ :** ಹಸಿವು ತೃಷೆ ನಿದ್ರೆಯಿಲ್ಲದವರೇ ದೊಡ್ಡವರೂ ಪೂಜ್ಯರೂ ಆದ ಪಕ್ಷದಲ್ಲಿ ಅವುಗಳಿಲ್ಲದ ಕಲ್ಲುಮರಮಣ್ಣುಗಳೇ ಸುಪೂಜ್ಯವಾದವುಗಳಾಗುವವೇನು ? ಇಲ್ಲ. ಮಹಿಮಾತಿಶಯಕ್ಕೆ ಹಸಿವು ನೀರಡಿಕೆ ನಿದ್ರೆಗಳಿರುವುದೇ ಕೊರತೆಯಲ್ಲ. ಆದುದರಿಂದ ಕೇವಲ ಶಿವಜ್ಞಾನದಿಂದ ಪರಮಪವಿತ್ರ ಶರೀರಿಗಳಾದ ಆ ಶರಣರ ಮಹತ್ವವನ್ನು ಅಜ್ಞಾನಿಗಳು ತಿಳಿಯಲಾರರು.

## ಉತ್ಪಲಮಾಲಾವೃತ್ತಂ

೭೪. ತ್ವಗ್ರಸರಕ್ತ ಮಾಂಸಮಯಮಪ್ಪ ಶರೀರದ ಭಾವಮುಂಟು ಕಂ
ಡಗ್ರಣಿಗಳ್ ವಿಚಾರಿಸರಲಾ ಕ್ಷುಧೆನಿದ್ರೆ ಪಿಪಾಸೆಯಿರ್ದೊಡೇಂ
ವ್ಯಗ್ರದಮಾತದಂತಿರಲಿ ದೇಹಗುಣಂ ಪರಿಮಾಣವಲ್ಲ ಸ
ಮ್ಯಗ್ರಮಣೀಯ ಚಿತ್ತಿನ ಗುಣಂ ಪರಿಮಾಣಪದಂ ಶಿವಾಥವಾ

**ಟೀಕೆ :** ತ್ವಗ್ರಸರಕ್ತಮಾಂಸಮಯಮಪ್ಪ - ಚರ್ಮರಸರುಧಿರಮಾಂಸಮಯವಾದ, ಶರೀರದ ಭಾವಂ - ದೇಹದ ಭಾವವು, ಉಂಟು ಕಂಡ - ಉಂಟೆಂದು ಕಂಡಾ ? ಕ್ಷುಧೆನಿದ್ರೆಪಿಪಾಸೆಯಿರ್ದೊಡೇಂ - ಹಸಿವು ನಿದ್ರೆ ನೀರಡಿಕೆಯಿರ್ದೊಡೇ-ನಾಯಿತು, ಅಗ್ರಣಿಗಳ್ - ಶ್ರೇಷ್ಠರು, ವಿಚಾರಿಸರಲಾ - ಲೆಕ್ಕಿಸರಲಾ, ಆದು ವ್ಯಗ್ರದ ಮಾತು ಅಂತಿರಲಿ - ಪ್ರಾಣಾದಿ ಧರ್ಮಂಗಳು ಶರಣಂಗುಂಟೇ ಎಂಬ ಆ ವ್ಯರ್ಥದ ಮಾತು ಅಂತಿರಲಿ, ದೇಹಗುಣಂ - ದೇಹಧರ್ಮವು, ಪರಿಮಾಣವಲ್ಲ - ಪ್ರಮಾಣವಲ್ಲ, ಸಮ್ಯಗ್ರಮಣೀಯ ಚಿತ್ತಿನ - ಸಮ್ಯಕ್ - ಚೆನ್ನಾಗಿ, ರಮಣೀಯ-

ಮನೋಹರವಾದ, ಚಿತ್ತಿನ - ಜ್ಞಾನದ, ಗುಣಂ - ಪ್ರಭಾವವು, ಪರಿಮಾಣಪದಂ - ಪ್ರಮಾಣಸ್ಥಾನವು.

**ಭಾವಾರ್ಥಬೋಧಿನಿ - ೭೪ :** ಚರ್ಮ ರಕ್ತ ಮಾಂಸ ಮೊದಲಾದವುಗಳಿಂದ ಕೂಡಿರುವುದು ದೇಹಕ್ಕೆ ಸಹಜವಾಗಿರುವುದು. ಆ ದೇಹಕ್ಕೆ ಸಂಬಂಧಿಸಿದ ಹಸಿವು ನೀರಡಿಕೆ ನಿದ್ರೆ ಮೊದಲಾದವುಗಳುಂಟಾಗುವುದೂ ಸಹಜವಾಗಿಯೇ ಇರುವುದು. ಇದು ದೇಹಧರ್ಮವೆಂದು ಉತ್ತಮರು ಇದರ ವಿಚಾರವನ್ನೇ ಎತ್ತುವುದಿಲ್ಲ. ಈ ಹಸಿವು ತೃಷೆ ಮೊದಲಾದವುಗಳು ಶರಣರಿಗಿರಬಹುದೇ ಎಂಬ ಮಾತು ವ್ಯರ್ಥವಾದುದು. ಏಕೆಂದರೆ ಶರಣರ ವಿಷಯದಲ್ಲಿ ಅವರ ದೇಹಧರ್ಮವು ಪ್ರಮಾಣವಲ್ಲ, ಅವರ ಸುಮನೋಹರವಾದ ಜ್ಞಾನದ ಪ್ರಭಾವವು ಮುಖ್ಯ ಪ್ರಮಾಣವು. (ಶರಣರ ಮಹತ್ವವು ಅವರಲ್ಲಿ ಪ್ರಕಾಶಿಸುವ ಶಿವಜ್ಞಾನದಿಂದ ನಿಶ್ಚಿತ ವಾಗುವುದು. ಅವರ ದೇಹಧರ್ಮದಿಂದಲ್ಲವೆಂಬುದಭಿಪ್ರಾಯಂ)

**ಅವತಾರಿಕೆ :** ಇಂತಪ್ಪ ಚಿತ್ರಭಾಸಂಪತ್ತಿಯು ದೀಕ್ಷೆಯಿಂದಲ್ಲದೆ ಮತ್ತಾವು ದರಿಂದಲೂ ಇಲ್ಲವೆಂದು ಹೇಳುತ್ತಿರ್ದಪಂ—

**ಉತ್ಪಲಮಾಲಾವೃತ್ತಂ**

೭೫ ಮಸ್ತಕದಲ್ಲಿ ಕರ್ಣಪದದಲ್ಲಿ ಕರಸ್ಥಲದಲ್ಲಿ ದೇಶಿಕಂ
ಹಸ್ತಸರೋಜಮಂ ಪರಮಮಂತ್ರಮುಮಂ ಶಿವಲಿಂಗಮೂರ್ತಿಯಂ
ನ್ಯಸ್ತಮನೇಕೆ ಮಾಡಿದನಿದೇನಿದರರ್ಥವಿಶೇಷಮೆಂತುಟೆಂ
ದಾಸ್ತಿಕಬುದ್ಧಿಯಿಂ ತಿಳಿದೊಡಾತನೆ ಮುಕ್ತನಲಾ ಶಿವಾಧವಾ

**ಟೀಕೆ :** ದೇಶಿಕಂ - ಶ್ರೀಗುರುವು, ಮಸ್ತಕದಲ್ಲಿ - ಶಿರಸ್ಸಿನಲ್ಲಿ, ಕರ್ಣಪದ ದಲ್ಲಿ - ಶ್ರುತಿಪುಟದಲ್ಲಿ, ಕರಸ್ಥಲದಲ್ಲಿ - ಕರಾಬ್ಜಪೀಠದಲ್ಲಿ, ಹಸ್ತಸರೋಜಮಂ - ಹಸ್ತಕಮಲವನ್ನು, ಪರಮಮಂತ್ರಮುಮಂ - ಉತ್ಕೃಷ್ಟವಾದ ಮಂತ್ರವನ್ನೂ, ಶಿವಲಿಂಗಮೂರ್ತಿಯಂ - ಶಿವಲಿಂಗವನ್ನೂ, ನ್ಯಸ್ತಮಂ ಸಂಬಂಧವನ್ನು, ಏಕೆ ಮಾಡಿದಂ ? ಇದೇನು - ಇದು ತಾನೇನು ? ಇದರರ್ಥವಿಶೇಷಮೆಂತುಟು - ಇದರ ಸ್ವರೂಪದ ವಿಶೇಷ ಹೇಗೆ ? ಎಂದು - ಹೀಗೆಂದು, ಆಸ್ತಿಕಬುದ್ಧಿಯಿಂ - ವಿಶ್ವಾಸ ಬುದ್ಧಿಯಿಂ, ತಿಳಿದೊಡೆ - ಅರಿದೊಡೆ ಆತನೆ, ಮುಕ್ತನಲಾ - ಕೃತಾರ್ಥನಲಾ.

**ಭಾವಾರ್ಥಬೋಧಿನಿ - ೭೫ :** ಶ್ರೀಗುರುವು ದೀಕ್ಷಾಕಾಲದಲ್ಲಿ ಶಿಷ್ಯನ ಮಸ್ತಕ, ಕರ್ಣಸ್ಥಲ, ವಾಮಹಸ್ತ, ಇವುಗಳಲ್ಲಿ ಕ್ರಮವಾಗಿ ತನ್ನ ಹಸ್ತವನ್ನೂ, ಶಿವಮಂತ್ರವನ್ನೂ, ಶಿವಲಿಂಗವನ್ನೂ ಸಂಬಂಧಗೊಳಿಸಿದನಷ್ಟೆ. ಹೀಗೆ ಸಂಬಂಧ ಗೊಳಿಸಿರುವುದರ ಅರ್ಥವೇನೆಂಬುದನ್ನು ಆಸ್ತಿಕ್ಯ ಬುದ್ಧಿಯಿಂದ ತಿಳಿದುಕೊಂಡ ಶಿಷ್ಯನು ಕೃತಾರ್ಥನಾಗುವನು.

**ಚಂಪಕಮಾಲಾವೃತ್ತಂ**

೭೬ ಕ್ರಿಯೆ ಬಹಿರಿಷ್ಟಲಿಂಗಮಮಳಾಂತರಲಿಂಗಮೆ ಮಂತ್ರಮಾದ್ವಿಧಾ
ಶ್ರಯಘನಭಾವಲಿಂಗಮೆ ಮಹತ್ತರಯೋಗಮಿದಂ ಕಳೇವರ
ತ್ರಯದೊಳಮರ್ಚಿ ಸದ್ಗುರು ಕೃಪಾನಿಧಿ ಮಾಡಿದ ದೀಕ್ಷೆಯರ್ಥ ನಿ
ರ್ಣಯಮನುಪಾಯದಿಂ ತಿಳಿದೊಡಾತನೆ ಮುಕ್ತನಲಾ ಶಿವಾಧವಾ

**ಟೀಕೆ :** ಕ್ರಿಯೆ - ಕ್ರಿಯಾದೀಕ್ಷೆಯೇ, ಬಹಿರಿಷ್ಟಲಿಂಗಂ - ಬಾಹ್ಯದಿಷ್ಟ ಲಿಂಗವು, ಅಮಳಾಂತರ ಲಿಂಗಮೆ - ನಿರ್ಮಳವಾದ ಪ್ರಾಣಲಿಂಗವೆ, ಮಂತ್ರಂ - ಮಂತ್ರದೀಕ್ಷೆ, ಆ ದ್ವಿಧಾಶ್ರಯ ಘನಭಾವಲಿಂಗಮೆ - ಆ ಇಷ್ಟಪ್ರಾಣಲಿಂಗಗಳ ಗಾಶ್ರಯವಾದ ಭಾವಲಿಂಗವೇ, ಮಹತ್ತರಯೋಗಂ - ಅಧಿಕತರವಾದ ವೇಧಾ ದೀಕ್ಷೆಯು, ಇದಂ - ಈ ಲಿಂಗತ್ರಯವನ್ನು, ಕಳೇವರತ್ರಯದೊಳ್ - ಅಂಗ ತ್ರಯದಲ್ಲಿ, ಅಮರ್ಚಿ - ಸಂಬಂಧವ ಮಾಡಿ, ಕೃಪಾನಿಧಿ - ದಯಾನಿಧಿಯಪ್ಪ, ಸದ್ಗುರು - ಶ್ರೀಗುರುವು, ಮಾಡಿದ - ಉಂಟು ಮಾಡಿದಂಥ, ದೀಕ್ಷೆಯ - ದೀಕ್ಷಾ ತ್ರಯಂಗಳ, ಅರ್ಥನಿರ್ಣಯಮಂ - ಅರ್ಥನಿಶ್ಚಯವನ್ನು, ಉಪಾಯದಿಂ - ಚಾತು ರ್ಯದಿಂದೆ, ತಿಳಿದೊಡೆ - ಅರಿದೊಡೆ, ಆತನೆ - ಅವನೇ, ಮುಕ್ತನಲಾ - ಕೃತಾರ್ಥ ನಲ್ಲವೆ ?

**ಭಾವಾರ್ಥಬೋಧಿನಿ - ೭೬ :** ಕೃಪಾನಿಧಿಯಾದ ಶ್ರೀಗುರುವು ಸ್ಥೂಲ ಶರೀರದಲ್ಲಿ ಇಷ್ಟಲಿಂಗವನ್ನು ಸಂಬಂಧಗೊಳಿಸುವುದೇ ಕ್ರಿಯಾದೀಕ್ಷೆಯೆಂದೂ ಸೂಕ್ಷ್ಮಶರೀರದಲ್ಲಿ ಪವಿತ್ರಪ್ರಾಣಲಿಂಗಸಂಬಂಧ ಮಾಡುವುದೇ ಮಂತ್ರದೀಕ್ಷೆ ಯೆಂದೂ ಕಾರಣಶರೀರದಲ್ಲಿ ಇಷ್ಟಪ್ರಾಣಲಿಂಗಗಳಿಗಾಶ್ರಯವಾದ ಭಾವಲಿಂಗವನ್ನು



ನೆಲೆಗೊಳಿಸುವುದೇ ವೇಧಾದೀಕ್ಷೆಯೆಂದು - ಹೀಗೆ ತ್ರಿವಿಧ ದೀಕ್ಷಾರ್ಥವನ್ನು ಜಾಣ್ಮೆಯಿಂದ ತಿಳಿದವನೇ ಧನ್ಯನು.

## ಉತ್ಪಲಮಾಲಾವೃತ್ತಂ

೭೭ ಕಾರಣದೇಹದೀಕ್ಷೆ ಶಿರದೋಳ್ ಕರಪದ್ಮವನಿಟ್ಟೊಡಾಯ್ತು ವಿ
ಸ್ತಾರಿತಮಂತ್ರಮಂ ಶ್ರವಣದಲ್ಲಿ ನಿರೂಪಿಸಲಾಯ್ತು ಸೂಕ್ಷ್ಮಶಾ
ರೀರಪದೈಕದೀಕ್ಷೆ ತದುಪಾಧಿಬಹಿಸ್ತನುದೀಕ್ಷೆ ಲಿಂಗಮಂ
ಸೇರಿಸಿಕೊಟ್ಟೊಡಾಯ್ತು ಕರದಲ್ಲಿ ಗುರುಪ್ರವರಂ ಶಿವಾಧವಾ

**ಟೀಕೆ :** ಗುರುಪ್ರವರಂ - ಶ್ರೀಗುರುನಾಥನು, ಶಿರದೊಳ್ - ಶಿರಸ್ಸಿನಲ್ಲಿ, ಕರಪದ್ಮವನಿಟ್ಟೊಡೆ - ಹಸ್ತಕಮಲವನಿಟ್ಟೊಡೆ, ಕಾರಣದೇಹದೀಕ್ಷೆ ಕಾರಣಶರೀರದ ದೀಕ್ಷೆಯು ಆಯ್ತು, - ಆದುದು, ಶ್ರವಣದಲ್ಲಿ - ಕರ್ಣದಲ್ಲಿ, ವಿಸ್ತಾರಿತಮಂತ್ರಮಂ ವಿಸ್ತರಿಸಲ್ಪಟ್ಟ ಮಂತ್ರವನ್ನು, ನಿರೂಪಿಸಲ್ - ನಿರೂಪಿಸಲಾಗಿ, ಸೂಕ್ಷ್ಮಶರೀರ ಪದೈಕದೀಕ್ಷೆ - ಸೂಕ್ಷ್ಮಶರೀರಕ್ಕೆ ಚೈತನ್ಯವಾಗಿ ಮುಖ್ಯವಾದ ದೀಕ್ಷೆ

("ಪದಂ ವ್ಯವಸಿತತ್ರಾಣಸ್ಥಾನಲಕ್ಷ್ಮಾಂಘ್ರಿ ವಸ್ತುಷು"

ಎಂದು ನಿಘಂಟು.)

ಆಯ್ತು - ಆದುದು, ಕರದಲ್ಲಿ - ಹಸ್ತದಲ್ಲಿ, ಲಿಂಗಮಂ - ಇಷ್ಟಲಿಂಗವನ್ನು ಸೇರಿಸಿಕೊಟ್ಟೊಡೆ - ಸಂಬಂಧವ ಮಾಡಿಕೊಟ್ಟೊಡೆ, ತದುಪಾಧಿಬಹಿಸ್ತನುದೀಕ್ಷೆ - ಆ ಸೂಕ್ಷ್ಮ ಕಾರಣಶರೀರಂಗಳಿಗನ್ಯವಾದ ಬಾಹ್ಯಶರೀರದೀಕ್ಷೆಯು, ಆಯ್ತು - ಆದುದು,

(ಈ ಅರ್ಥದಲ್ಲಿ -

"ಹಸ್ತಮಸ್ತಕ ಸಂಯೋಗಾಚ್ಛಲಾದ್ವೇಧೇತಿಗೀಯತೇ
ಗುರುಣೋ ದೀರಿತಾ ಕರ್ಣೇ ಯಾ ಸಾ ಮಾಂತ್ರೀತಿ ಕಥ್ಯತೇ
ಶಿಷ್ಯಪಾಣಿತಳೇ ದತ್ತಾಯಾ ದೀಕ್ಷಾ ಸಾ ಕ್ರಿಯಾತ್ಮಿಕಾ

ಎಂದಾಗಮವುಂಟು)

ಭಾವಾರ್ಥಬೋಧಿನಿ - ೭೭ : ಶ್ರೀಗುರುನಾಥನು ತನ್ನ ಕರಕಮಲವನ್ನು ಶಿಷ್ಯನ ಮಸ್ತಕದ ಮೇಲಿಟ್ಟಾಗ ಕಾರಣದೇಹದೀಕ್ಷೆಯಾದುದು. ಇದೇ ವೇಧಾದೀಕ್ಷೆಯೆನಿಸಿಕೊಳ್ಳುವುದು, ಮತ್ತು ಶಿವಮಂತ್ರವನ್ನು ಶಿಷ್ಯನ ಕಿವಿಯಲ್ಲಿ ಉಪದೇಶಿಸಲು ಅದು ಸೂಕ್ಷ್ಮಶರೀರದೀಕ್ಷೆಯಾದುದು. ಇದೇ ಮಂತ್ರದೀಕ್ಷೆಯೆನಿಸುವದು. ಆ ಗುರುವರನು ಶಿಷ್ಯನ ಹಸ್ತದಲ್ಲಿ ಇಷ್ಟಲಿಂಗವನ್ನು ನೆಲೆಗೊಳಿಸಿದಾಗ ಸ್ಥೂಲಶರೀರ ದೀಕ್ಷೆಯಾದುದು ಇದೇ ಕ್ರಿಯಾದೀಕ್ಷೆಯೆನಿಸಿಕೊಳ್ಳುವುದು.

**ಚಂಪಕಮಾಲಾವೃತ್ತಂ**

೭೮ ಇದು ವಿಮಳಕ್ರಿಯಾಭಿಹಿತಲಿಂಗಮಿದುಜ್ಜ್ವಲಮಂತ್ರಲಿಂಗ ಮಿಂ
ತಿದು ಪರಯೋಗಲಿಂಗಮಿದು ತತ್ರಿವಿಧಾಹ್ವಯ ಲಿಂಗಪೂಜೆ ತಾ
ನಿದು ಬಹಿರಂತರಾತ್ಮಪದಮೆಂಬ ತನುತ್ರಯ ಯುಕ್ತಿಯೆಂದು ತೋ
ರಿದೊಡದು ವೀರಶೈವದುಪದೇಶವೆ ತಪ್ಪದಲಾ ಶಿವಾಧವಾ

**ಟೀಕೆ** : ವಿಮಳಕ್ರಿಯಾಭಿಹಿತಲಿಂಗಂ - ವಿಮಳ - ನಿರ್ಮಳವಾದ, ಕ್ರಿಯಾ - ಕ್ರಿಯೆಯಿಂದ, ಅಭಿಹಿತ - ಹೇಳಲ್ಪಟ್ಟ, ಲಿಂಗಂ - ಇಷ್ಟಲಿಂಗವು, ಇದು - ಇದೀಗ, ಉಜ್ವಲಮಂತ್ರಲಿಂಗಂ - ಉಜ್ವಲ - ಬೆಳಗುತಿರ್ಪ, ಮಂತ್ರ ಲಿಂಗಂ - ಪ್ರಾಣಲಿಂಗವು, ಇದು - ಇದೀಗ, ಇಂತು - ಈ ಪ್ರಕಾರದಿಂದೆ, ಪರಯೋಗಲಿಂಗಂ - ಉತ್ಕೃಷ್ಟವಾದ ಭಾವಲಿಂಗವು, ಇದು - ಇದೀಗ, ತತ್ರಿವಿಧಾಹ್ವಯಲಿಂಗಪೂಜೆ - ಆ ಮೂರು ಪೆಸರುಳ್ಳ ಲಿಂಗದ ಪೂಜೆಯು, ತಾಂ - ತಾನು ಇದು - ಇದೀಗ, ಬಹಿರಂತರಾತ್ಮಪದಮೆಂಬ - ಸ್ಥೂಲಸೂಕ್ಷ್ಮಕಾರಣವೆಂಬ, ತನುತ್ರಯಯುಕ್ತಿ - ತನುಮೂರರ ಸಂಬಂಧದ ವಿಚಾರವು, ಇದು - ಇದೀಗ, ಎಂದು - ಹೀಗೆಂದು, ತೋರಿದೊಡೆ - ಶ್ರೀಗುರುನಾಥನರುಹಿದರೆ, ಅದು - ಅದು ತಾನು, ವೀರಶೈವದುಪದೇಶವೆ - ವೀರಶೈವದೀಕ್ಷಾಮಾರ್ಗವೇ, ತಪ್ಪದಲಾ - ಓರೆ ಯಾಗದಲಾ.

ಭಾವಾರ್ಥಬೋಧಿನಿ - ೭೮ : ಇದು ನಿರ್ಮಲಕ್ರಿಯೆಯಿಂದ ಉಕ್ತ ವಾದ ಇಷ್ಟಲಿಂಗವು. (ಕ್ರಿಯಾದೀಕ್ಷೆಯಿಂದ ಲಭಿಸಿದ ಇಷ್ಟಲಿಂಗ) ಇದು ಉಜ್ವಲಿಸುವ ಶಿವಮಂತ್ರರೂಪವಾದ ಪ್ರಾಣಲಿಂಗವು. (ಮಂತ್ರದೀಕ್ಷೆಯಿಂದ ಪ್ರಾಪ್ತವಾದ ಲಿಂಗವು). ಇದು ಉತ್ಕೃಷ್ಟವಾದ ಭಾವಲಿಂಗವು (ವೇಧಾದೀಕ್ಷೆಯಿಂದ ಲಬ್ಧವಾದ

ಲಿಂಗ) ಈ ಇಷ್ಟ-ಪ್ರಾಣ-ಭಾವಲಿಂಗಗಳ ಪೂಜೆಯು ಇಂತಿರುವುದು. ಈ ತ್ರಿವಿಧ ಲಿಂಗಗಳಿಗೆ ಸಂಬಂಧಿಸಿದ ಸ್ಥೂಲ-ಸೂಕ್ಷ್ಮ-ಕಾರಣ ಶರೀರಗಳ ವಿಚಾರವು ಹೀಗಿರುವುದು - ಎಂದು ಶ್ರೀಗುರುವು ತಿಳಿಸಿಕೊಡುವುದೇ ವೀರಶೈವದೀಕ್ಷಾಮಾರ್ಗವು. (ಗುರುವು ಶಿಷ್ಯನಿಗೆ ದೀಕ್ಷಾಕಾಲದಲ್ಲಿ ಮೂರು ಶರೀರಗಳ ಮತ್ತು ಮೂರು ಶರೀರಗಳಿಗೆ ಸಂಬಂಧಿಸಿದ - ಇಷ್ಟ - ಪ್ರಾಣ - ಭಾವಲಿಂಗಗಳ ಮತ್ತು ಆ ಲಿಂಗತ್ರಯದ ಪೂಜೆಯ ವಿಚಾರವನ್ನು ಸರಿಯಾಗಿ ತಿಳಿಸಿಕೊಡಬೇಕೆಂಬಭಿಪ್ರಾಯವಿಲ್ಲಿರುವುದು)

**ಅವತಾರಿಕೆ :** **ಶರಣಸತಿಲಿಂಗಪತಿಭಾವಮಂ ವಾಙ್ಮಾತ್ರದಿಂ ನುಡಿದು ಭಿನ್ನಭಾವಿಗಳಾಗಿರ್ಪವರಂ ಖಂಡಿಸುತ್ತಿರ್ದಪಂ-**

**ಚಂಪಕಮಾಲಾವೃತ್ತಂ**

೭೯ ಸತಿ ಶರಣಂ ತದೀಯಪತಿ ಲಿಂಗಮೆನುತ್ತಿಹ ಲಿಂಗಭಕ್ತರಾ
ಸತಿಪತಿಧರ್ಮಮಂ ತಿಳಿದು ನೋಡದೆ ದೂರದ ದಾಸ ಭಾವಸಂ-
ಸ್ಥಿತಿಯೊಳೆ ನಿಂದು ಸಂಶಯ ಜಡಪ್ರತಿಭಾಕ್ರಿಯೆಯಿಂ ಬಳಲ್ದು ನಿ
ಶ್ಚಿತಪರಮೈಕ್ಯಮಂ ತಿಳಿಯದಿರ್ಪರಿದೇಂ ಗುಣಮೋ ಶಿವಾಧವಾ

**ಟೀಕೆ :** ಶರಣಂ - ಶರಣನು, ಸತಿ - ಪತ್ನಿಯು, ಲಿಂಗಂ - ಲಿಂಗವು ತದೀಯಪತಿ - ಆ ಶರಣಂಗೆ ಪತಿಯು, ಎನುತ್ತಿಹ - ಹೀಗೆಂಬ, ಲಿಂಗಭಕ್ತರ್- ಲಿಂಗಭಕ್ತರು, ಆ ಸತಿಪತಿಧರ್ಮಂ - ಆ ಶರಣಸತಿ ಲಿಂಗಪತಿ ಮಾರ್ಗವನ್ನು, ತಿಳಿದು ನೋಡದೆ - ಅರಿದು ನೋಡದೆ, ದೂರದ ದಾಸಭಾವ ಸಂಸ್ಥಿತಿಯೊಳೆ- ಬೇರಾದ ಭೃತ್ಯಭಾವದನಿಲುಕಡೆಯಲ್ಲಿಯೇ, ನಿಂದು - ನಿಂತು, ಸಂಶಯಜಡಪ್ರತಿಭಾಕ್ರಿಯೆಯಿಂ - ಸಂದೇಹವಾದ ಅಜ್ಞಾನವ್ಯಾಪಾರದಿಂದೆ, ಬಳಲ್ದು - ಆಯಾಸಂಬಟ್ಟು, ನಿಶ್ಚಿತಪರಮೈಕ್ಯಮಂ - ನಿಶ್ಚಯಿಸಲ್ಪಟ್ಟ ಉತ್ಕೃಷ್ಟವಾದ ಘನಲಿಂಗೈಕ್ಯವನ್ನು, ತಿಳಿಯದಿರ್ಪರ್ - ಅರಿಯದಿರ್ಪರು, ಇದೇಂ ಗುಣಮೋ - ಇದೇನು ಗುಣವೊ ! ಅಜ್ಞಾನಗುಣವೆಂಬುದರ್ಥಂ.

**ಭಾವಾರ್ಥಬೋಧಿನಿ - ೭೯ :** ಶರಣನು **ಸತಿಯು** ಲಿಂಗವು ಶರಣನಿಗೆ **ಪತಿಯೆಂ**ಬುದನ್ನು ವಚನಮಾತ್ರದಿಂದ (ಲಿಂಗವಂತರು) ಆ **ಸತಿ**ಪತಿಧರ್ಮವನ್ನು **ಸರಿಯಾಗಿ ತಿಳಿ**ದು ಆಚರಿಸದೆ, ಎಂದರೆ - **ಲಿಂಗಾಂಗ**ಸಾಮರಸ್ಯದ **ಭಕ್ತಿ** ಮಾರ್ಗ- **ದಲ್ಲಿ ನಡೆಯದೆ, ಆ ಮಾರ್ಗಕ್ಕೆ ದೂರ**ವಾದ ಕೇವಲ ಭೃತ್ಯಭಾವದಲ್ಲಿಯೇ ಇದ್ದು,

ಸಂದೇಹದ ಅಜ್ಞಾನವ್ಯಾಪಾರದಿಂದ ಆಯಾಸಗೊಂಡು, ಗುರೂಕ್ತಿಯಿಂದ ನಿಶ್ಚಿತವಾದ ಲಿಂಗಾಂಗಸಾಮರಸ್ಯ ಸ್ಥಿತಿಯನ್ನರಿಯದಿರ್ಪುದು ಅವರ ಅಜ್ಞಾನಗುಣವಲ್ಲವೆ?

**ಚಂಪಕಮಾಲಾವೃತ್ತಂ**

೮೦ ಶರಣನೆ ಪತ್ನಿ ಕಂಡ ಶಿವಲಿಂಗವೆ ತತ್ಪತಿ ಕಂಡ ಭೂಮಿಗ
ಚ್ಚರಿಯೆನಬಾರದೇ ನುಡಿವ ರೀತಿಯೊಳಾ ನುಡಿಗಟ್ಟಿಯಾಗಿ ಬಿ
ತ್ತರಿಸಿದ ತಾತ್ವಿಕಾಚರಣೆಯುಳ್ಳೊಡೆ ಮತ್ತದು ತಾನೆ ಮುಕ್ತಿ ಶಾಂ
ಕರಿಯೆನ ಬಾರದೇ ಬಯಲಮಾತಿನ ಬಣ್ಣಮದೇಂ ಶಿವಾಧವಾ

**ಟೀಕೆ :** ಶರಣನೆ, ಪತ್ನಿ ಕಂಡ - ಸತಿಯಂತೆಗಡಾ, ಶಿವಲಿಂಗವೆ - ಮಾಂಗಲ್ಯವಾದ ಲಿಂಗವೆ, ತತ್ಪತಿ ಕಂಡ - ಆ ಶರಣಂಗೆ ಪತಿಯಂತೆಗಡಾ, ನುಡಿವ ರೀವಿಯೋಳ್ - ಹೀಗೆಂದು ನುಡಿವ ಸಘಾಟಿಕೆಯಲ್ಲಿ, ಭೂಮಿಗೆ - ಜಗತ್ತಿಗೆ, ಅಚ್ಚರಿಯೆನಬಾರದೇ - ಆಶ್ಚರ್ಯವೆನ್ನಬಾರದೇ ? ( ಆಶ್ಚರ್ಯವೆನ್ನಬಹುದು ) ಆನುಡಿ - ಆ ನುಡಿದ ನುಡಿ, ಗಟ್ಟಿಯಾಗಿ - ದೃಢವಾಗಿ, ಬಿತ್ತರಿಸಿದ - ವಿಶಾಲಮಂ ಮಾಡಿದ, ತಾತ್ವಿಕಾಚರಣೆ - ಸಹಜವಾದ ಆಚರಣೆ, ಉಳ್ಳೊಡೆ - ಉಂಟಾದೊಡೆ, ಮತ್ತೆ - ಮರಳಿ, ಅದು ತಾನೆ - ಅದೀಗತಾನೆ, ಮುಕ್ತಿಶಾಂಕರಿಯೆನಬಾರದೆ- ಮೋಕ್ಷಸ್ವರೂಪವಾದ ಚಿತ್ತೆನಬಾರದೆ ? (ಎನ್ನಬಹುದು) ಬಯಲ ಮಾತಿನ ಬಣ್ಣಂ- ವ್ಯರ್ಥವಾದ ನುಡಿಯ ಒಪ್ಪವು, ಅದೇಂ - ಅದೇನು ಪ್ರಯೋಜನವು ?

**ಭಾವಾರ್ಥಬೋಧಿನಿ** – ೮೦ : ಶರಣನೇ ಸತಿಯಂತೆ ಲಿಂಗವು ಪತಿಯಂತೆ-ಎಂಬೀ ರೀತಿಯ ನುಡಿಯು ಜಗತ್ತಿಗೆ ಆಶ್ಚರ್ಯಕರವಲ್ಲವೆ ? (ಆಶ್ಚರ್ಯವೇ ಸರಿ) ಆದರೆ, ಈ ನುಡಿದ ನುಡಿಯು ಗಟ್ಟಿಗೊಂಡು, ವಿಶಾಲವಾದ ಸಮರಸಭಾವದ ಸಹಜಾಚರಣೆಯಾಗಿ ಪರಿಣಮಿಸಬೇಕು. ಹಾಗೆ ಪರಿಣಮಿಸಿದ ಆಚರಣೆಯಲ್ಲಿಯೇ ಜ್ಞಾನಶಕ್ತಿ ವಿಕಾಸರೂಪವಾದ ಮುಕ್ತಿಯಿರುವುದು. ಹೀಗಿಲ್ಲದ ಬರಿಯ ಮಾತಿನ ಬಣ್ಣದಿಂದೇನು ಪ್ರಯೋಜನ ?

**ಅವತಾರಿಕೆ :** ಶರಣನ ತನುಕರಣೇಂದ್ರಿಯಂಗಳ್ಗೆ ಲಿಂಗಸಂಬಂಧದಿಂ ಭೌತಿಕವರ್ತನನಿಲ್ಲವೆಂದು ಪೇಳುತ್ತಿರ್ದಪಂ.

## ಉತ್ಪಲಮಾಲಾವೃತ್ತಂ

೮೧ ಕಾಯಮುಮಿಂದ್ರಿಯಪ್ರಕರಮುಂ ಶಿವಲಿಂಗಕಳಾಪ್ರಸಾದ ಪೂ-
ರಾಯಪುನೀತಚಿತ್ಪರಮಲಕ್ಷಣ ಭಾವಮನೈದಿದಲ್ಲಿ ದೋ-
ಷಾಯತನಪ್ರಪಂಚಗುಣಮಿಲ್ಲ ವಿಚಾರಿಸೆ ದಗ್ಧವಸ್ತ್ರದ
ನ್ಯಾಯದ ಹಾಂಗೆ ತಪ್ಪದು ಗುರೂಕ್ತಿ ನಿರೂಪಣದಿಂ ಶಿವಾಧವಾ

**ಟೀಕೆ :** ಕಾಯಮುಂ - ಶರಣನ ದೇಹವೂ, ಇಂದ್ರಿಯಪ್ರಕರಮುಂ- ಇಂದ್ರಿಯ ಸಮೂಹವೂ, ಶಿವಲಿಂಗ - ಭಾವಮಂ - ಶಿವಲಿಂಗ - ಪರಮಂಗಲ ಸ್ವರೂಪವಾದ ಲಿಂಗದ, ಕಳಾ - ಚೈತನ್ಯದ, ಪ್ರಸಾದ - ಪ್ರಸನ್ನತೆಯಿಂದ, ಪೂರಾಯ - ತುಂಬಲ್ಪಟ್ಟ, ಪುನೀತ - ಪವಿತ್ರವಾದ, ಚಿತ್ - ಜ್ಞಾನದ, ಪರಮ ಲಕ್ಷಣ - ಉತ್ಕೃಷ್ಟವಾದ ಕುರುಹಿನ, ಭಾವಮಂ - ಸ್ವರೂಪವನ್ನು, ಐದಿದಲ್ಲಿ- ಸಂಬಂಧಿಸಿದಲ್ಲಿ, ದೋಷಾಯತನಪ್ರಪಂಚಗುಣಂ - ದೋಷಾಯತನ - ದೋಷಂಗ ಳಿಗೆ ಸ್ಥಾನವಾದ, ಪ್ರಪಂಚಗುಣಂ - ತನುಕರಣೇದ್ರಿಯಂಗಳ ಪ್ರಪಂಚಗುಣವು; ಇಲ್ಲ - ಉಂಟಾಗಿರದು, ಗುರೂಕ್ತಿ - ನಿರೂಪಣದಿಂ - ಶ್ರೀ ಗುರುವಚನೋಪದೇಶ ದಿಂದೆ, ವಿಚಾರಿಸೆ - ಆರೈದು ನೋಡಲಾಗಿ, ದಗ್ಧವಸ್ತ್ರದ ನ್ಯಾಯದ ಹಾಂಗೆ- ಬೆಂದ ಬಟ್ಟೆಯ ನ್ಯಾಯದ ಹಾಂಗೆ, ತಪ್ಪದು - ತಪ್ಪುವುದಿಲ್ಲ.

**ಭಾವಾರ್ಥಬೋಧಿನಿ - ೮೧ :** ಶ್ರೀಗುರುವಿನ ಉಪದೇಶದಿಂದ ಚೆನ್ನಾಗಿ ವಿಚಾರಮಾಡಿ ನೋಡಲಾಗಿ ಶರಣನ ದೇಹೇಂದ್ರಿಯಗಳೆಲ್ಲವೂ ಶಿವಲಿಂಗಚೈತನ್ಯ ಪ್ರಸನ್ನತೆಯಿಂದ ತುಂಬಲ್ಪಟ್ಟ ಪವಿತ್ರಜ್ಞಾನದ ಶ್ರೇಷ್ಠಲಕ್ಷಣದಿಂದ ಕೂಡಿರುವವು. ಆ ದೇಹೇಂದ್ರಿಯಗಳಲ್ಲಿ ದೋಷಮಯವಾದ ಪ್ರಪಂಚಗುಣದ ಸಂಬಂಧವಿಲ್ಲ. ಸುಟ್ಟ ಬಟ್ಟೆಯಂತೆ ಆ ದೇಹೇಂದ್ರಿಯಗಳು ತೋರಿಕೆಗೆ ಮಾತ್ರ ಕಾಣುವವಲ್ಲದೆ ಬಾಧಕಗುಣರಹಿತವಾಗಿರುವವು.

**ಅವತಾರಿಕೆ :** ಲಿಂಗದಲ್ಲಿ ಸಮರಸಭಾವವನುಳ್ಳ ಶರಣನು ಫಲಪದಂಗಳ್ಗೆ ಕಾರಣವಾದ ಭಿನ್ನ ಕ್ರಿಯೆಯನಾಚರಿಸುವಹನಲ್ಲವೆಂದು ಹೇಳುತ್ತಿರ್ದಪಂ–

**ಚಂಪಕಮಾಲಾವೃತ್ತಂ**

೮೨ ಪತಿಹಿತಧರ್ಮಚಾರಿಣಿಯೆನಿಪ್ಪ ಮಹಾಸತಿ ವೇಸಿ ಮಾಳ್ಪಪೋಲ್
ಚತುರತೆ ರೀತಿ ಧಾತುಕಡುಜಾಣ್ಮೆ ಮೃದೂಕ್ತಿ ಬಹೂಪಚಾರ ಸಂ
ಗತಿಯುನದೆತ್ತ ಬಲ್ಲಳು ಶಿವೈಕ ಸಮರ್ಪಿತ ಚಿತ್ತದಿಂ ದೃಢ
ವ್ರತವನೆನಿಸಿರ್ಪ ಭಕ್ತನುಳಿದಂಗಮನೆಂತರಿವಂ ಶಿವಾಧವಾ

**ಟೀಕೆ .** ಪತಿಹಿತಧರ್ಮಚಾರಿಣಿಯೆನಿಪ್ಪ - ಪತಿಹಿತ - ಪುರುಷಂಗೆ ಹಿತವಾದ, ಧರ್ಮಚಾರಿಣಿಯೆನಿಪ್ಪ - ವ್ರತವನಾಚರಿಸುವಾಕೆಯಾದ, ಮಹಾಸತಿ - ಮಹಾಪತಿವ್ರತೆ, ವೇಸಿ - ಸೂಳೆ, ಮಾಳ್ಪಪೋಲ್ - ಮಾಡುವ ಹಾಂಗೆ, ಚತುರತೆ....ಸಂಗತಿಯಂ - ಚತುರತೆ - ಚಾತುರ್ಯವನ್ನು, ರೀತಿ - ನಯವನ್ನು, ಧಾತು - ಆ ಪುರುಷನ ಪ್ರಕೃತಿಯನ್ನು, ಮೃದೂಕ್ತಿ - ಮೆಲ್ನುಡಿಯನ್ನು, ಬಹೂಪಚಾರಸಂಗತಿಯಂ- ಅನೇಕ ಸನ್ಮಾನವ ಮಾಡುವುದನ್ನು, ಅದೆತ್ತ ಬಲ್ಲಳು - ಅದೇನೆಂದು ಬಲ್ಲಳು, (ಏನನ್ನೂ ಅರಿಯಳೆಂಬುದರ್ಥಂ) ದೃಢವ್ರತನೆನಿಸಿರ್ಪ - ದೃಢವಾದ ಸಾಮರಸ್ಯ ಪ್ರತಿಯಾದ, ಭಕ್ತಂ - ಭಕ್ತನು, ಶಿವೈಕಸಮರ್ಪಿತ ಚಿತ್ತದಿಂ - ಶಿವಲಿಂಗವೊಂದರಲ್ಲಿಯೇ ಇರಿಸಲ್ಪಟ್ಟ ಚಿತ್ತದಿಂದೆ, ಉಳಿದಂಗಮಂ - ಬಾಹ್ಯವಾದ ಕಪಟಾಚಾರವನ್ನು, ಎಂತರಿವಂ - ಏನೆಂದು ಬಲ್ಲನು? (ಅರಿಯನೆಂಬುದರ್ಥಂ).

**ಭಾವಾರ್ಥಬೋಧಿನಿ - ೮೨ :** ಪತಿಹಿತಕ್ರಿಯಾಪರಳಾದ ಮಹಾಪತಿವ್ರತೆಯು ಸೂಳೆಯು ಮಾಡುವಂತೆ ಚಾತುರ್ಯ, ನಯ, ಪುರುಷಪ್ರಕೃತಿ ಪರೀಕ್ಷೆ, ಬಹೂಪಚಾರ ಮೊದಲಾದವುಗಳ ನಟನೆಯನ್ನು ಮಾಡಬಲ್ಲಳೆ ? ಬಲ್ಲಳಲ್ಲ. ಹಾಗೆಯೇ ದೃಢವಾದ ಲಿಂಗಾಂಗಸಾಮರಸ್ಯ ವ್ರತವುಳ್ಳ ಶರಣನು ಶಿವಲಿಂಗವೊಂದರಲ್ಲಿ ಚಿತ್ತವನ್ನರ್ಪಿಸುವದರಿಂದ ತಚ್ಚಿತ್ತವನ್ನರ್ಪಿಸುವುದನ್ನುಳಿದ ಕಪಟಾಚಾರಗಳನ್ನು ಬಲ್ಲನೆ ? ಬಲ್ಲನಲ್ಲ.

**ಅವತಾರಿಕೆ :** ಲಿಂಗಾಂಗಸಂಬಂಧಿಗಳಾದ ಶರಣರು ಎಂದೆಂದೂ ಶಿವಭಕ್ತರಾಗಿಯೇ ಇರುವರು, ಲಿಂಗವಿಹೀನರಾದ ಭವಿಗಳು ಎಂದೆಂದೂ ಭವಿಗಳಾಗಿಯೇ ಇರ್ಪರು–ಎಂದು ಪೇಳುತ್ತಿರ್ದಪಂ —

## ಚಂಪಕಮಾಲಾವೃತ್ತಂ

೬೭ ಭವಿಗಡ ಭಕ್ತನಪ್ಪವದು ಮಿಥ್ಯೆಯಲಾ ಭವಿ ಭಕ್ತನಪ್ಪನೇ
ಶಿವಶಿವ ಭಕ್ತನೇ ಭವಭವಾಂತರದೋಳ್ ನೆರೆ ಭಕ್ತನಪ್ಪನಾ
ಭವಿ ಭವಿಯಾಗಿಯೇ ಭವಭವಾಂತರದೋಳ್ ತಿರುಗುತ್ತಮಿರ್ಪನೆಂ
ಬ ವಚನಮುಂಟಲೈ ಶಿವರಹಸ್ಯದ ಶಾಸನದೋಳ್ ಶಿವಾಧವಾ

**ಟೀಕೆ :** ಭವಿಗಡ - ಭವಿಯಂತೆ ಕಂಡಾ? ಭಕ್ತನಪ್ಪುದು - ಶಿವಭಕ್ತನಪ್ಪವು, ಅದು - ಅದು ತಾನು, ಮಿಥ್ಯೆಯಲಾ - ಸಟೆಯಲ್ಲವೆ? ಆ ಭವಿ, ಭಕ್ತನಪ್ಪನೆ - ಭಕ್ತನಾಗುವನೆ? ಆಗನು - ಶಿವಶಿವ - ಚೋದ್ಯವು! ಆ ಭಕ್ತನೆ- ಆ ಶಿವಭಕ್ತನೆ, ಭವಭವಾಂತರದೊಳ್ - ಜನ್ಮಜನ್ಮಾಂತರಗಳಲ್ಲಿಯೂ, ನೆರೆ- ಚೆನ್ನಾಗಿ, ಭಕ್ತನಪ್ಪಂ - ಶಿವಭಕ್ತನಾಗಿರುವನು, ಆ ಭವಿ – ಆ ಲಿಂಗಬಾಹಿರನಾದ ಭವಿಯು, ಭವಭವಾಂತರದೋಳ್-ಜನ್ಮಜನ್ಮಾಂತರದಲ್ಲಿ, ಭವಿಯಾಗಿಯೇ - ಲಿಂಗ ಬಾಹಿರನಾಗಿಯೇ, ತಿರುಗುತ್ತಮಿರ್ಪಂ - ಭ್ರಮಿಸುತ್ತಿರ್ಪನು, ಎಂಬ - ಹೀಗೆಂಬ, ವಚನಂ - ವಾಕ್ಯವು, ಶಿವರಹಸ್ಯದ ಶಾಸನದೋಳ್ - ಶಿವರಹಸ್ಯವೆಂಬ ಆಗಮದಲ್ಲಿ, ಉಂಟಲೈ - ಉಂಟುಕಣೈ, ಈ ಅರ್ಥದಲ್ಲಿ–

"ನಾ ಶಿವಸ್ಯ ಶಿವೋಪಾಸ್ತಿರ್ಘಟತೇ ಜನ್ಮ ಕೋಟಿಭಿಃ
ಶಿವಸ್ಯೈವ ಶಿವೋಪಾಸ್ತಿರಿತಿ ನಾನಾಸ್ಮೃತಿಸ್ಥಿತಿಃ"

ಎಂದುಂಟು.

ಭಾವಾರ್ಥಬೋಧಿನಿ – ೬೭ : ಭವಿಯು ಶಿವಭಕ್ತನಾಗುವುದು ನಿಜವಲ್ಲ, ಭವಕ್ಕೆ ಸಂಬಂಧಿಸಿದ ದುರ್ಗುಣಗಳುಳ್ಳ ಭವಿಯು ಎಂದಾದರೂ ಲಿಂಗಭಕ್ತನಾಗುವನೆ? ಆಗಲಾರನು. ಅವನು ಜನ್ಮಜನ್ಮಾಂತರದಲ್ಲಿಯೂ ಲಿಂಗಬಾಹಿರನಾದ ಭವಿಯಾಗಿಯೇ ಭ್ರಮಿಸುವನು. ಇನ್ನು ಲಿಂಗಭಕ್ತನಿಗೆ ಜನ್ಮಗಳುಂಟಾದರೂ, ಅವನು ಲಿಂಗಭಕ್ತಿಯುಳ್ಳವನಾಗಿಯೇ ಜನಿಸುವನು. ಈ ವಿಷಯದಲ್ಲಿ - ಶಿವಭಕ್ತಿಯಿಂದ ಶಿವಸ್ವರೂಪವನ್ನು ಪಡೆದವನಿಗೆ ಮಾತ್ರ ಭಕ್ತನಾಗಿ ಶಿವೋಪಾಸನೆಯನ್ನು

ಮಾಡುವ ಯೋಗ್ಯತೆ ಘಟಿಸುವುದೆಂಬುದಾಗಿ ಶಿವರಹಸ್ಯದ ವಚನವೂ ಪ್ರಮಾಣ-ವಾಗಿರುವುದು. (ಈ ಪ್ರಮಾಣವು ಟೀಕೆಯಲ್ಲಿ ಬಂದಿರುವುದು.)

**ಚಂಪಕಮಾಲಾವೃತ್ತಂ**

೮೪ ಭವಿಯಿದಿರಲ್ಲಿ ಕುಳ್ಳಿರದ ಮುಟ್ಟದ ನೋಡದ ವೀರಶೈವನಾ
ಭವಿಯನೆ ಮತ್ತೆ ಮುಟ್ಟಿ ನುಡಿದೀಕ್ಷಿಸಿ ಭಕ್ತನನೊಲ್ದು ಮಾಳ್ಪ ಮಾ
ಟವನಿದನೆತ್ತ ಬಲ್ಲೆವತಿಚೋದ್ಯವನನ್ವಿತವದ್ಭುತಾದ್ಭುತಂ
ಭುವನದೊಳೆಲ್ಲಿಯುಂ ಭವಿಗೆ ಭಕ್ತತೆಯಿಲ್ಲ ಬಿಡಾ ಶಿವಾಧವಾ

**ಟೀಕೆ** : ಭವಿಯಿದಿರಲ್ಲಿ - ಲಿಂಗಾಂಗಿಯಲ್ಲದವನ, ಸಮಕ್ಷದಲ್ಲಿ, ಕುಳ್ಳಿರದ - ಕುಳಿತಿರದ, ಮುಟ್ಟದ - ಸೋಂಕದ, ನೋಡದ - ಅವಲೋಕನಂಗೆಯ್ಯದ, ವೀರಶೈವಂ - ವೀರಮಾಹೇಶ್ವರನು,

"ಆಸನೇ ಶಯನೇ ಯಾನೇ ಭವಿಭಿಸ್ಸಹಭೋಜನೇ
ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಂ" ಎಂದುಂಟಾಗಿ,

ಆ ಭವಿಯನೆ - ಆ ಲಿಂಗಬಾಹಿರನನ್ನೇ, ಮತ್ತೆ - ಮರಳಿ, ಮುಟ್ಟಿ, ಸೋಂಕಿ, ನುಡಿದು - ಮಾತನಾಡಿ, ಈಕ್ಷಿಸಿ - ನೋಡಿ, ಭಕ್ತನಂ - ಶಿವಭಕ್ತನನ್ನು, ಒಲ್ದು ಮಾಳ್ಪ - ಚೆನ್ನಾಗಿ ಮಾಡುವ, ಮಾಟವಂ - ಕರ್ಮವನ್ನು, ಇದಂ - ಇದನ್ನು, ಎತ್ತ ಬಲ್ಲೆವು - ಏನೆಂದು ಬಲ್ಲೆವು? ಅತಿಚೋದ್ಯಂ - ಅತ್ಯಂತ ಚೋದ್ಯವು, ಅನನ್ವಿತಂ - ಅವಂಗೆ ಶಿವಭಕ್ತಿ ಕೂಡಿದುದಲ್ಲ, ಅದ್ಭುತಾದ್ಭುತಂ - ಅಚ್ಚರಿ ಅಚ್ಚರಿ ಭವಿಗೆ - ಆ ಲಿಂಗಭವಿಗೆ, ಭುವನದೊಳೆಲ್ಲಿಯುಂ - ಜಗತ್ತಿನೊಳೆಲ್ಲಿಯೂ, ಭಕ್ತತೆಯಿಲ್ಲ - ಭಕ್ತತ್ವವಿಲ್ಲ, ಬಿಡಾ - ಬಿಡು.

**ಭಾವಾರ್ಥಬೋಧಿನಿ – ೮೪ : ಲಿಂಗಾಂಗಿಯಲ್ಲದ ಭವಿಯ ಸಮ್ಮುಖದಲ್ಲಿ ಕುಳಿತುಕೊಳ್ಳುವುದೂ, ಆ ಭವಿಯನ್ನು ಮುಟ್ಟುವುದೂ, ನೋಡುವುದೂ ವೀರ ಶೈವನಿಗೆ ನಿಷೇಧವಿರುವಾಗ ವೀರಮಾಹೇಶ್ವರನು ಲಿಂಗರಹಿತನಾದ ಭವಿಯನ್ನು ಮುಟ್ಟಿ, ನೋಡಿ, ಮಾತನಾಡಿಸಿ, ಅವನನ್ನು ಲಿಂಗಭಕ್ತನನ್ನಾಗಿ ಮಾಡುವ ಕರ್ಮ**

ವನ್ನು ನಾವರಿಯೆವು. ಹಾಗೆ ಮಾಡುವುದು ಆಶ್ಚರ್ಯವೂ ಅಸಮಂಜಸವೂ ಆಗಿರುವುದು. ಏಕೆಂದರೆ-ಭವಿಯಾಗಿರುವವನಿಗೆ ಲೋಕದಲ್ಲೆಲ್ಲಿಯೂ ಭಕ್ತಸ್ಥಿತಿಯು ಸಂಭವಿಸಲಾರದು.

**ವಿಚಾರ :** ವೀರಶೈವಸಮಾಜಸಂಪ್ರದಾಯದ ದೃಷ್ಟಿಯಿಂದ ವೀರಶೈವರಲ್ಲದವರು ಭವಿಗಳು. ವೀರಶೈವನಿಗೆ ಅವರ ದರ್ಶನಸ್ಪರ್ಶನಾದಿಗಳು ನಿಷೇಧಿಸಲ್ಪಟ್ಟಿರುವವು. ಆದುದರಿಂದ ಭವಿಯನ್ನು ಮುಟ್ಟುವುದೇ ಮೊದಲಾದ ಕ್ರಿಯೆಯಿಂದ ಲಿಂಗಭಕ್ತನನ್ನಾಗಿ ಮಾಡಲು ಯತ್ನಿಸುವುದು ಅನುಚಿತವೆಂಬಭಿಪ್ರಾಯವು ಮೇಲಿನ ಪದ್ಯದಲ್ಲಿರುವುದು ಇದರಿಂದ ವೀರಶೈವರಲ್ಲದವರಿಗೆ ಲಿಂಗಧಾರಣ ಮಾಡಬಾರದೆಂದು ವ್ಯಕ್ತವಾಗುವುದಲ್ಲವೆ ? ಈ ಸಂದೇಹಕ್ಕೆ ಪರಿಹಾರವೇನು ? ಈ ಸಂದೇಹಕ್ಕೆ ವೀರಶೈವತತ್ವಜ್ಞರ ಸಮಾಧಾನವು ಕೆಳಗಿನಂತಿರುವುದು—ಭವಿಗಳಲ್ಲಿ ಬದ್ಧಭವಿಗಳೂ ಶುದ್ಧ ಭವಿಗಳೂ ಎಂದು ದ್ವಿವಿಧವಿರುವುದು. ಪುನಃ ಪುನಃ ಜನನಮರಣಗಳನ್ನೊದಗಿಸಿ ಬಂಧನವನ್ನುಂಟುಮಾಡುವ ಭವದಲ್ಲಿ-ಜನ್ಮದಲ್ಲಿ-ಉತ್ಸುಕತೆಯುಳ್ಳವರು ಬದ್ಧಭವಿಗಳು. ಈ ಬದ್ಧಭವಿಗಳನ್ನು ಲಿಂಗಧಾರಣದಿಂದ ಲಿಂಗಭಕ್ತರನ್ನು ಮಾಡುವುದು ಸಾಧ್ಯವಿಲ್ಲವೆಂಬುದರಲ್ಲಿಯೇ ಮೇಲಿನ ಪದ್ಯದ ತಾತ್ಪರ್ಯವಿರುವುದು. ಇನ್ನು-ಬೀಜದಿಂದ ವೃಕ್ಷವೂ, ವೃಕ್ಷದಿಂದ ಬೀಜವೂ ಉಂಟಾಗುವಂತೆ ಶಿವಾನುಗ್ರಹದಿಂದ ಶಿವಭಕ್ತಿಯೂ, ಶಿವಭಕ್ತಿಯಿಂದ ಶಿವಾನುಗ್ರಹವೂ ಉಂಟಾಗುತ್ತಿರುವವೆಂಬ ಆರ್ಯೋಕ್ತಿಯಂತೆ ಯಾರಲ್ಲಿ ಶಿವಾನುಗ್ರಹವು (ಶಕ್ತಿಪಾತವು) ಉಂಟಾಗಿರುವುದೋ ಅವರಿಗೆ—

ತೇಷಾಂ ತಲ್ಲಿಂಗಮೌತ್ಸುಕ್ಯಂ ಮುಕ್ತೌ ದ್ವೇಷೋ ಭವಸ್ಥಿತೌ |
ಭಕ್ತಿಶ್ಚ ಶಿವಭಕ್ತೇಷು ಶ್ರದ್ಧಾ ತಚ್ಛಾಶಕೇ ವಿಧೌ"

ಎಂಬ ಪ್ರಮಾಣವಚನಕ್ಕನುಸರಿಸಿ – ಮುಕ್ತಿಯಲ್ಲಿ ಉತ್ಸುಕತೆಯೂ ಬಂಧಕರವಾದ ಜನ್ಮದಲ್ಲಿ ದ್ವೇಷವೂ, ಶಿವಭಕ್ತರಲ್ಲಿ ಭಕ್ತಿಯೂ ಶಿವಲಿಂಗಧಾರಣದಲ್ಲಿ ಶ್ರದ್ಧೆಯೂ ಉಂಟಾಗುವವು. ಹೀಗೆ ಉಂಟಾಗುವುದೇ ಶಿವಾನುಗ್ರಹವನ್ನು ಪಡೆದವರ ಚಿಹ್ನವಾಗಿರುವುದು. ಈ ವಿಧವಾದ ಚಿಹ್ನವುಳ್ಳವರೇ ಶುದ್ಧಭವಿಗಳು - ಎಂದರೆ - ಗತ ಜನ್ಮಕರ್ಮಪರಿಪಾಕದಿಂದ ನಿರ್ಮಲಾಂತಃ ಕರಣವುಳ್ಳವರಾಗಿ ಶುದ್ಧ ಜನ್ಮವುಳ್ಳವರಾಗಿರುವರು. ಇವರನ್ನೇ ಪಿಂಡಜ್ಞಾನಸ್ಥಲಕ್ಕೆ ಸಂಬಂಧಿಸಿದವರೆಂದು ಹೇಳುವುದುಂಟು. ಈ ಶುದ್ಧ ಜನ್ಮವುಳ್ಳವರಿಗೆ ಗುರುಕಾರುಣ್ಯವಾಗಲು ಮುಂದೆ ಲಿಂಗಧಾರಣವನ್ನು ಮಾಡಲಾಗುವುದು.

## ಚಂಪಕಮಾಲಾವೃತ್ತಂ

೮೫ ಶಿವನೆ ಶಿವಾರ್ಚನೈಕರತನಾಗಿರಲೋಸುಗಮಾತ್ಮ ಲೋಕದಿಂ
ದವತರಿಸಿ ಸ್ವಕೀಯಘನಲೀಲೆಯೊಳೊಯ್ಯನೆ ಮಾನುಷೀಯ ಮ
ಪ್ಪ ವಿಮಳವೇಷಮಂ ಧರಿಸಿ ಸರ್ವಜಗದ್ಧಿತದಿವ್ಯ ಚೇಷ್ಟೆಯಿಂ
ತವೆಪರಿರಂಜಿಪಂ ಪರಮಭಕ್ತಮಯ ಸ್ಥಳದೋಳ್ ಶಿವಾಧವಾ

**ಟೀಕೆ :** ಶಿವನೆ - ಶಿವನು ತಾನೆ, ಶಿವಾರ್ಚನೈಕರತನಾಗಿರಲೋಸುಗಂ- ಶಿವಭಕ್ತಿತತ್ಪರನಾಗಿರಲೋಸ್ಕರ, ಆತ್ಮಲೋಕದಿಂದೆ - ತನ್ನ ಕೈಲಾಸದಿಂದೆ, ಅವತರಿಸಿ - ಇಳಿದುಬಂದು, ಸ್ವಕೀಯಘನಲೀಲೆಯೋಳ್ - ತನ್ನ ಸಂಬಂಧವಾದ ಘನವಿಲಾಸದಿಂದೆ, ಒಯ್ಯನೆ - ಚೆನ್ನಾಗಿ, ಮಾನುಷೀಯಮಪ್ಪ – ಮನುಷ್ಯ ಸಂಬಂಧವಾದ, ವಿಮಳಮೇಷಮಂ - ನಿರ್ಮಳವೇಷವನ್ನು, ಧರಿಸಿ - ಅಂಗೀಕರಿಸಿ, ಸವ...... ಚೇಷ್ಟೆಯಿಂ - ಸರ್ವಸಮಸ್ತವಾದ, ಜಗತ್ - ಲೋಕಂಗಳಿಗೆ, ಹಿತ- ಉಪಕಾರವಾದ, ದಿವ್ಯ - ಮನೋಹರವಾದ, ಚೇಷ್ಟೆಯಿಂ - ವ್ಯಾಪಾರದಿಂದ, ಪರಮ......ಸ್ಥಳದೋಳ್ - ಪರಮ - ಉತ್ಕೃಷ್ಟವಾದ, ಭಕ್ತಮಯಸ್ಥಲದೋಳ್- ಭಕ್ತಸ್ವರೂಪವಾದ ಸ್ಥಳದಲ್ಲಿ, ತವೆ - ಅತ್ಯಂತವಾಗಿ, ಪರಿರಂಜಿಪಂ - ಮಿಗೆ ಒಪ್ಪುತ್ತಿರ್ಪನು.

(ಈ ಅರ್ಥದಲ್ಲಿ-

ಯೇ ರುದ್ರಲೋಕಾದವತೀರ್ಯ ರುದ್ರಾ ಮಾನುಷ್ಯಮಾಶ್ರಿತ್ಯ ಜಗದ್ಧಿತಾಯ
ಚರಂತಿ ನಾನಾವಿಧಚಾರುಚೇಷ್ಟಾಸ್ತೇಭ್ಯೋ ನಮಸ್ತ್ರಂಬಕ ಪೂಜಕೇಭ್ಯಃ

ಎಂದು ಶಂಕರಸಂಹಿತೆಯುಂಟು.

"ವಿರೂಪಾಸ್ಸಂತೋ ಬಹುಧೈಕ ರೂಪಾಃ"

ಎಂದು ತೈತ್ತಿರೀಯೋಪನಿಷತ್ತು.

"ಸರ್ವಲೋಕೋಪಕಾರಾಯಯೋ ದೇವಃ ಪರಮೇಶ್ವರಃ
ಚರತ್ಯತಿಥಿರೂಪೇಣ ನಮಸ್ತೇ ಜಂಗಮಾತ್ಮನೇ"

ಎಂದು ವೀರತಂತ್ರಮುಂಟು.)

**ಭಾವಾರ್ಥಬೋಧಿನಿ – ೮೫ :** ಶಿವನೇ ಶಿವಭಕ್ತಿ ತತ್ಪರನಾಗಿರುವುದಕ್ಕಾಗಿ ತನ್ನ ನೆಲೆಯಿಂದ ಅವತರಿಸಿ ಸ್ವಲೀಲೆಯಿಂದ ಮನುಷ್ಯ ಸಂಬಂಧವಾದ ದೇಹವನ್ನು ಅಂಗೀಕರಿಸಿ, ಲೋಕದವರಿಗೆ ಉಪಕಾರವಾಗುವ ಸತ್ಕ್ರಿಯೆಗಳನ್ನಾಚರಿಸುತ್ತೆ, ಶ್ರೇಷ್ಠವಾದ ಭಕ್ತಸ್ಥಲದಲ್ಲಿ ಶೋಭಿಸುತ್ತಿರುವನು. ಶಿವನೇ ಸ್ವಲೀಲೆಯಿಂದ ಗುರು-ಶಿಷ್ಯ, ಲಿಂಗ-ಅಂಗ, ಜಂಗಮ-ಭಕ್ತ – ಎಂಬ ದ್ವಿವಿಧ ರೂಪದಿಂದಿರುವನೆಂಬುದೇ ವೀರಶೈವಸಿದ್ಧಾಂತವು. ಈ ಸಿದ್ಧಾಂತಕ್ಕನುಸರಿಸಿ, ಶಿವನೇ ಭಕ್ತನಾಗಿ ಅವತರಿಸುವನೆಂಬುದು ಸಮುಚಿತವಾಗಿರುವುದು ( ಈ ವಿಷಯದಲ್ಲಿ ಟೀಕಾಕಾರನು ಶಂಕರ ಸಂಹಿತೆ, ತೈತ್ತಿರೀಯೋಪನಿಷತ್ತು, ವೀರತಂತ್ರ – ಇವುಗಳಲ್ಲಿಯ ಪ್ರಮಾಣ ವಚನಗಳನ್ನೂ ಟೀಕೆಯಲ್ಲಿ ಕೊಟ್ಟಿರುವನು. )

**ಅವತಾರಿಕೆ :** ಶರಣರು ಮಂತ್ರಶರೀರಿಗಳೆಂದು ಪೇಳುತ್ತಿರ್ದಪಂ—

**ಚಂಪಕಮಾಲಾವೃತ್ತಂ**

೮೬ ಒರೆದ ಗುರೂಪದೇಶದ ಮಹಾಘನಮಂತ್ರಮೆನಿಪ್ಪ ಪಂಚಕಾ
ಕ್ಷರವೆ ಶರೀರಭೂತಕರಣೇಂದ್ರಿಯ ಮಾತ್ರ ಸಮೂಹಮಾಗಿ ಸಂ
ಚರಿಸುವ ಕಾರಣಂ ಶರಣರಂಗವೆ ನಿರ್ಮಳ ಮಂತ್ರಪಿಂಡವೆಂ
ಬರು ಶಿವತತ್ವಸಾರ ಪರಮಾರ್ಥ ವಿಚಾರಪರರ್ ಶಿವಾಧವಾ

**ಟೀಕೆ :** ಶಿವತತ್ವ.........ಪರರ್ - ಶಿವತತ್ವ - ಶಿವತತ್ವದಲ್ಲಿ, ಸಾರ - ಶ್ರೇಷ್ಠವಾದ, ಪರಮಾರ್ಥ - ಸಹಜಾರ್ಥದಲ್ಲಿ, ವಿಚಾರಪರರ್ - ವಿವೇಕವುಳ್ಳವರುಗಳು, ಒರೆದ - ನಿರೂಪಿಸಿದ; ಗುರೂಪದೇಶದ - ಗುರುವಾಕ್ಯದ, ಮಹಾಘನ ಮಂತ್ರಂ - ಮಹಾಘನ-ಮಿಗೆ ದೊಡ್ಡಿತ್ತಾದ, ಮಂತ್ರಂಎನಿಪ್ಪ - ಮಂತ್ರವೆನಿಸುವಂಥ, ಪಂಚಾಕ್ಷರವೆ - ಪಂಚಾಕ್ಷರವೆ, ಶರೀರ.........ಸಮೂಹಮಾಗಿ - ಶರೀರ-ದೇಹವು, ಭೂತ - ಪಂಚಭೂತಗಳು, ಕರಣ - ಪಂಚಕರಣಂಗಳು, ಇಂದ್ರಿಯ - ದಶೇಂದ್ರಿಯಗಳು, ಮಾತ್ರ - ಪಂಚವಿಷಯಂಗಳು, (ಮೀಯಂತ ಇತಿ ಮಾತ್ರಾಃ - ವಿಷಯಾಃ ಎಂದು ಶಂಕರಭಾಷ್ಯವುಂಟು) ಸಮೂಹಮಾಗಿ - ಇವೆಲ್ಲವೂ ಮಂತ್ರಸಮೂಹವೇ ಆಗಿ, ಸಂಚರಿಸುವ ಕಾರಣಂ - ಆಚರಿಸುವ

ಕಾರಣದಿಂದೆ, ಶರಣರಂಗವೆ - ಶರಣರ ಶರೀರವೇ, ನಿರ್ಮಳ ಮಂತ್ರಪಿಂಡವೆಂಬರು - ನಿರ್ಮಳವಾದ ಮಂತ್ರದೇಹವೆಂಬರು.

**ಭಾವಾರ್ಥಬೋಧಿನಿ - ೮೬ :** ಶ್ರೀಗುರುವು ಉಪದೇಶಿಸಿರುವ ಮಹಾ ಮಂತ್ರವಾದ ಪಂಚಾಕ್ಷರಗಳೇ (ನಮಃಶಿವಾಯ) ದೇಹ, ಭೂತ, ಕರಣ, ಇಂದ್ರಿಯ, ವಿಷಯ ಇವೆಲ್ಲವುಗಳನ್ನೂ ದೀಕ್ಷಾಕಾಲದಲ್ಲಿ ಶುದ್ಧೀಕರಿಸಿ, ಮಂತ್ರ-ಮಯವಾಗಿ ಮಾಡಿರುವುದರಿಂದ ದೀಕ್ಷಿತರಾದ ಶರಣರು ಮಂತ್ರದೇಹಿಗಳಾಗಿರುವ-ರೆಂದು ಶಿವತತ್ವದ ಸಹಜಾರ್ಥದಲ್ಲಿ ವಿವೇಕವುಳ್ಳವರು ಹೇಳುವರು. ಎಂದರೆ - ಮಂತ್ರದೀಕ್ಷೆಯಿಂದ ಮಾಂಸಪಿಂಡವಳಿದು ಮಂತ್ರಪಿಂಡವಾಗುವುದೆಂಬುದಭಿ-ಪ್ರಾಯಂ.

## ಉತ್ಪಲಮಾಲಾವೃತ್ತಂ

೮೭ ಭೂಮಿಜಲಾಗ್ನಿ ಮಾರುತವಿಯತ್ತಳ ಪಂಚಕಮುಖ್ಯ ಪಂಚಕ
ಸ್ತೋಮದ ಮಾತೃಗೇಹಮೆನಿಸಿರ್ಪ ಮಹಾಶಿವಮಂತ್ರಪಂಚವ
ರ್ಣಾಮಳದೀಕ್ಷೆಯಿಂ ಪರಮಮಂತ್ರ ಕಳಾತ್ಮಕವಾದ ದೇಹ ವಿ
ಶ್ರಾಮಪದ ಪ್ರಸಿದ್ಧ ಶರಣಂಗಿಹವೇಂ ಪರವೇಂ ಶಿವಾಧವಾ

**ಟೀಕೆ :** ಭೂಮಿ ……… ಸ್ತೋಮದ - ಭೂಮಿ-ಪೃಥ್ವಿ, ಜಲ - ಉದಕ, ಅಗ್ನಿ - ತೇಜಸ್ಸು, ಮಾರುತ - ವಾಯು, ವಿಯತ್ತಳ - ಆಕಾಶ, ಇವುಗಳ, ಪಂಚಕ - ಐದು, ಮುಖ್ಯ - ಮೊದಲಾದ, ಪಂಚಸ್ತೋಮದ - ಇಪ್ಪತ್ತೈದು ತತ್ವಸಮೂಹದ, ಮಾತೃಗೇಹಮೆನಿಸಿರ್ಪ - ತಾಯಿ ಮನೆಯೆನಿಸುವ, ಮಹಾ … ದೀಕ್ಷೆಯಿಂ - ಮಹಾಶಿವಮಂತ್ರ - ಅಧಿಕವಾದ ಶಿವಮಂತ್ರವೆಂಬ, ಪಂಚವರ್ಣ - ಐದಕ್ಷರಗಳಿಂದಾದ, ಅಮಳ ದೀಕ್ಷೆಯಿಂ - ನಿರ್ಮಳವಾದ ದೀಕ್ಷೆಯಿಂದೆ, ಪರಮಮಂತ್ರ ಕಳಾತ್ಮಕವಾದ - ಉತ್ಕೃಷ್ಟವಾದ ಮಂತ್ರಚೈತ್ಯದ ರೂಪವಾದ, ದೇಹ………ಶರಣಂಗೆ - ದೇಹ - ದೇಹವು, ವಿಶ್ರಾಮಪದ - ವಿಶ್ರಾಂತಿ ಸ್ಥಾನ-ವಾದ, ಪ್ರಸಿದ್ಧ - ಪ್ರಖ್ಯಾತನಾದ, ಶರಣಂಗೆ - ಶಿವಶರಣಂಗೆ, ಇಹವೇಂ ಪರವೇಂ - ಇಹಲೋಕವೇನು ? ಪರಲೋಕವೇನು ?

**ಭಾವಾರ್ಥಬೋಧಿನಿ - ೮೭ :** ಭೂವಿ: ಮೊದಲಾದ ಇಪ್ಪತ್ತೈದು ತತ್ವಗಳಿಗೆ ಮಾತೃಸ್ಥಾನವೆನಿಸಿದ ಪಂಚಾಕ್ಷರಮಯವಾದ ಶಿವಮಂತ್ರದ ದೀಕ್ಷೆಯಿಂದ ಆ ಪರಮಮಂತ್ರ ಚೈತನಾತ್ಮಕ ಶರೀರಿಯಾಗಿ, ಅಂತಹ ಮಂತ್ರ ಶರೀರದ ವಿಶ್ರಾಂತಿ ಸ್ಥಾನವಾಗಿ ಪ್ರಖ್ಯಾತನಾದ ಶರಣನಿಗೆ ಈ ಲೋಕವೇನು ? ಪರಲೋಕವೇನು ? (ಎರಡೂ ಒಂದೆ) - ಎಂದರೆ - ಮಂತ್ರಪಿಂಡವುಳ್ಳ ಶರಣನು ಲಿಂಗಾಂಗಸಮರಸಸೌಖ್ಯದಲ್ಲಿರುವದರಿಂದ ಆತನಿಗೆ ಈ ಲೋಕದ ಬಂಧನವಿಲ್ಲೆಂದಭಿಪ್ರಾಯವು.

**ಚಂಪಕಮಾಲಾವೃತ್ತಂ**

೮೮ ಅನುಭವಗಮ್ಯ ಶಬ್ದಪರಿಗಮ್ಯ ವಿಶಿಷ್ಟ ವಿಶುದ್ಧ ಸತ್ಕ್ರಿಯಾ
ಘನಪದಗಮ್ಯ ಸಂಜ್ಞೆವಿಡಿದೊಪ್ಪುವ ನಿರ್ಮಳದೀಕ್ಷೆಯಿಂ ಕೃಪಾ
ವನಧಿ ಮಹಾಗುರುಪ್ರಭು ತನುತ್ರಯದೊಳ್ ತ್ರಿವಿಧಾಖ್ಯಲಿಂಗಮಂ
ಸುನಿಹಿತವಾಗಿ ತಂದಿರಿಸಲಾಯ್ತು ನಿಜೈಕ್ಯಪದಂ ಶಿವಾಧವಾ

**ಟೀಕೆ .** ಕೃಪಾನಿಧಿ - ದಯಾಸಮುದ್ರನಾದ, ಮಹಾಗುರುಪ್ರಭು - ಶ್ರೀ ಮಹಾಗುರುಸ್ವಾಮಿಯು, ಅನುಭವ ........ ಸಂಜ್ಞೆವಿಡಿದು - ಅನುಭವಗಮ್ಯ-ಜ್ಞಾನದಿಂದೆ ಅರಿಯಲ್ತಕ್ಕ, ಶಬ್ದಪರಿಗಮ್ಯ – ಮಂತ್ರದಿಂದೆ ಐಯ್ದಲ್ತಕ್ಕ, ವಿಶಿಷ್ಟ - ಮಿಗೆ ಶ್ರೇಷ್ಠವಾದ, ವಿಶುದ್ಧ - ಅತ್ಯಂತ ನಿರ್ಮಳವಾದ, ಸತ್ಕ್ರಿಯಾಘನಪದಗಮ್ಯ - ಒಳ್ಳಿತ್ತಾದ ಕ್ರಿಯಾಮಾರ್ಗದಿಂದೈದಲ್ತಕ್ಕ, ಸಂಜ್ಞೆವಿಡಿದು - ವೇಧಾ ಮಂತ್ರಕ್ರಿಯೆಯೆಂದು ಪೆಸರ್ವಿಡಿದು, ಒಪ್ಪುವ, ನಿರ್ಮಳದೀಕ್ಷೆಯಿಂ - ಸ್ವಚ್ಛವಾದ ದೀಕ್ಷಾತ್ರಯದಿಂದೆ, ತನುತ್ರಯದೊಳ್ - ಸ್ಥೂಲ - ಸೂಕ್ಷ್ಮ - ಕಾರಣವೆಂಬ ತನು ಮೂರರಲ್ಲಿ, ತ್ರಿವಿಧಾಖ್ಯಲಿಂಗಮಂ - ಇಷ್ಟ - ಪ್ರಾಣ - ಭಾವವೆಂಬ ಮೂರು ಪೆಸರನುಳ್ಳ ಲಿಂಗವನ್ನು, ಸುನಿಹಿತವಾಗಿ - ಚೆನ್ನಾಗಿ ಸಂಬಂಧಿಸಿದುದಾಗಿ, ತಂದಿರಿಸಲ್ - ತಂದು ಸ್ಥಿರೀಕರಿಸಲಾಗಿ, ನಿಜೈಕ್ಯಪದಂ - ಸಹಜವಾದ ಲಿಂಗೈಕ್ಯ ಪದವು, ಆಯ್ತು - ಆದುದು.

**ಭಾವಾರ್ಥಬೋಧಿನಿ – ೮೮ :** ದಯಾಸಮುದ್ರನಾದ ಗುರುಸ್ವಾಮಿಯು, ಜ್ಞಾನವೇದ್ಯವಾದ ಭಾವಲಿಂಗವನ್ನು ವೇಧಾದೀಕ್ಷೆಯಿಂದ ಕಾರಣ ಶರೀರದಲ್ಲಿಯೂ,

ಮಂತ್ರಸಾಧ್ಯವಾದ ಪ್ರಾಣಲಿಂಗವನ್ನು ಮಂತ್ರದೀಕ್ಷೆಯಿಂದ ಸೂಕ್ಷ್ಮಶರೀರದಲ್ಲಿಯೂ, ಸತ್ಕ್ರಿಯಾಗವ್ಯವಾದ ಇಷ್ಟಲಿಂಗವನ್ನು ಕ್ರಿಯಾದೀಕ್ಷೆಯಿಂದ ಸ್ಥೂಲ ಶರೀರದಲ್ಲಿಯೂ ನೆಲೆಗೊಳಿಸುವುದರಿಂದಲೇ ಶರಣನಿಗೆ ಅಂಗಲಿಂಗಗಳ ಏಕತೆಯ ಸ್ಥಿತಿಯು ಪ್ರಾಪ್ತವಾಗುವುದು. (ಮುಂದೆ ಲಿಂಗೋಪಾಸನೆಯಿಂದ ಲಿಂಗಾಂಗ ಸಾಮರಸ್ಯ ಸೌಖ್ಯವು ಸುಲಭವಾಗಿ ಸಿದ್ಧಿಸುವುದೆಂಬುದಭಿಪ್ರಾಯಂ)

**ಚಂಪಕಮಾಲಾವೃತ್ತಂ**

೮೯ ಭಾವದ ಹಸ್ತದಿಂ ಮನದ ಹಸ್ತ ತಳಕ್ಕೆ ಮನಃಕರಾಬ್ಜದಿಂ
ಪಾವನಮಪ್ಪ ನೇತ್ರದ ಕರಕ್ಕೆ ತದೀಯ ಕರಾಂಬುಜಾತದಿಂ
ಕೋವಿದ ಚಕ್ರವರ್ತಿ ಗುರು ಕಾಯದ ಹಸ್ತಸರೋರುಹಕ್ಕೆ ಪೂ
ಜಾವಿಧಿ ಯೋಗ್ಯಲಿಂಗಮುಮನಿತ್ತಬಳಿಕ್ಕರಿದೇಂ ಶಿವಾಧವಾ

**ಟೀಕೆ :** ಕೋವಿದ ಚಕ್ರವರ್ತಿ ಗುರು - ಪ್ರೌಢರುಗಳ್ಗಧೀಶ್ವರನಾದ ಶ್ರೀಗುರುವು, ಭಾವದ ಹಸ್ತದಿಂ - ಭಾವವೆಂಬ ಹಸ್ತದಿಂದ, ಮನದ ಹಸ್ತ ತಳಕ್ಕೆ - ಮನವೆಂಬ ಕರತಳಕ್ಕೆ ತಂದು, ಮನಃಕರಾಬ್ಜದಿಂ - ಮನವೆಂಬ ಹಸ್ತಪದ್ಮದಿಂ, ಪಾವನಮಪ್ಪ - ಪವಿತ್ರವಾದ, ನೇತ್ರದ ಕರಕ್ಕೆ - ನಯನವೆಂಬ ಹಸ್ತಕ್ಕೆ, ತಂದು, ತದೀಯಕರಾಂಬುಜಾತದಿಂ - ಆ ನಯನಸಂಬಂಧವಾದ ಹಸ್ತಪದ್ಮದಿಂದೆ, ಕಾಯದಹಸ್ತ ಸರೋರುಹಕ್ಕೆ - ಶರೀರ ಸಂಬಂಧವಾದ ಕರಕಮಲಕ್ಕೆ, ಪೂಜಾವಿಧಿಯೋಗ್ಯಲಿಂಗಮುಮಂ - ಪೂಜಾಕ್ರಿಯೆಗೆ ಯೋಗ್ಯವಾದ ಚಿತ್ಕಲಾ ಲಿಂಗವನ್ನೂ, ಇತ್ತಬಳಿಕ್ಕ - ಕೊಟ್ಟನಂತರದಲ್ಲಿ, ಅರಿದೇಂ - ಇನ್ನೇನು ಅಸಾಧ್ಯವುಂಟು.

"ಯಥಾ ಕಲಾ ತಥಾ ಭಾವೋ ಯಥಾ ಭಾವಸ್ತಥಾ ಮನಃ
ಯಥಾ ಮನಸ್ತಥಾ ದೃಷ್ಟಿರ್ಯಥಾ ದೃಷ್ಟಿ ಸ್ತಥಾ ಸ್ಥಲಂ"

ಎಂದುಟು.

**ಭಾವಾರ್ಥಬೋಧಿನಿ – ೮೯ :** ತತ್ವವಿದ್ಯಾವಿಚಕ್ಷಣ ಚಕ್ರವರ್ತಿಯಾದ ಶ್ರೀಗುರುವು ದೀಕ್ಷಾಕಾಲದಲ್ಲಿ ಶಿಷ್ಯನಲ್ಲಿ ಅವ್ಯಕ್ತವಾಗಿರುವ ಲಿಂಗಕಳೆಯನ್ನು

ಮೊದಲು ತನ್ನ ಭಾವಕ್ಕೂ, ಭಾವದಿಂದ ಮನಸ್ಸಿಗೂ, ಮನದಿಂದ ದೃಷ್ಟಿಗೂ ತಂದುಕೊಂಡು, ಅದನ್ನೇ ಪೂಜಾ ಯೋಗ್ಯವಾದ ಇಷ್ಟಲಿಂಗ (ಕ್ರಿಯಾಲಿಂಗ) ದಲ್ಲಿ ನೆಲೆಗೊಳಿಸಿ ಶಿಷ್ಯನ ಹಸ್ತಕ್ಕೆ ಕೊಟ್ಟ ಬಳಿಕ, ಶಿವಲಿಂಗವನ್ನೇ ಕರಗತಮಾಡಿಕೊಂಡ ಆ ಶಿಷ್ಯನಿಗೆ ಅಸಾಧ್ಯವಾದುದಾವದಿರುವುದು ? ( ಗುರುವು ಭಾವ ಮನೋ-ದೃಷ್ಟಿಗಳಿಂದ ತಂದುಕೊಟ್ಟ ಲಿಂಗವೇ - ಕ್ರಮವಾಗಿ - ಶಿಷ್ಯನ - ಭಾವಗ್ರಾಹ್ಯವಾದ ಭಾವಲಿಂಗವಾಗಿಯೂ, ಮನೋಗ್ರಾಹ್ಯವಾದ ಪ್ರಾಣಲಿಂಗವಾಗಿಯೂ, ದೃಷ್ಟಿಗ್ರಾಹ್ಯವಾದ ಇಷ್ಟಲಿಂಗವಾಗಿಯೂ ಉಪಾಸ್ಯವಾಗಿರುವುದೆಂಬುದನ್ನು ಗ್ರಹಿಸಬೇಕು.

**ಚಂಪಕಮಾಲಾವೃತ್ತಂ**

೯೦ ಪ್ರಣವವೆ ಮೂರ್ತಿ ಪಂಚವಿಧವರ್ಣಮೆ ಪಂಚವಿಧೇಂದ್ರಿಯಂ ಮಹಾ
ಘೃಣಿ ವಿಭುದೇಶಿಕಂ ಪರಮ ಮಂತ್ರಕಳಾದ್ಯುಪದೇಶವಿತ್ತ ತತ್
ಕ್ಷಣದೊಳೆ ಮಂತ್ರಪಿಂಡಮೆನಿಸಿತ್ತತಿಶೋಭನಮಪ್ಪ ರೂಪಲ
ಕ್ಷಣವಿಡಿದಿರ್ದೊಡಿನ್ನುಪಮಿಸಲ್ ಬಹುದೇ ಘನಮೇಂ ಶಿವಾಧವಾ

**ಟೀಕೆ :** ಮಹಾಘೃಣಿ - ಅಧಿಕವಾದ ಕೃಪೆಯುಳ್ಳವನು, (ಮಹಾಪ್ರಕಾಶ ಪ್ರಖ್ಯಾತನಾದೊಡಂ ಆಗಲಿ) ವಿಭು - ಸಕಲ ಜಗತ್ಪರಿಪೂರ್ಣನಾದ, ದೇಶಿಕಂ - ಶ್ರೀಗುರುವು, ಪರಮಮಂತ್ರಕಳಾದ್ಯುಪದೇಶವಿತ್ತ - ಪರಮ - ಉತ್ಕೃಷ್ಟವಾದ, ಮಂತ್ರಕಳಾದಿ - ಮಂತ್ರ ಚೈತನ್ಯಕ್ಕೆ ಮೊದಲಾದ, ಉಪದೇಶವ - ನಿರೂಪವ, ಇತ್ತ - ಕೊಟ್ಟ, ತತ್ಕ್ಷಣದೊಳೆ - ಆ ಕ್ಷಣದಲ್ಲಿಯೇ, ಪ್ರಣವವೆ - ಓಂಕಾರವೇ, ಮೂರ್ತಿ-ಶರೀರವಾಗಿ, ಪಂಚವಿಧ ವರ್ಣಮೆ - ನಕಾರಾದಿಯಕಾರಾಂತ್ಯವಾದ ಐದು ತೆರದ ಅಕ್ಷರಂಗಳೆ, ಪಂಚವಿಧೇಂದ್ರಿಯಂ - ಐದುವಿಧವಾದ ಇಂದ್ರಿಯಂಗಳಾಗಿ, ಮಂತ್ರಪಿಂಡಮೆನಿಸಿತ್ತು - ಮಂತ್ರಮಯವಾದ ಶರೀರವೆನಿಸಿತು, ಅತಿಶೋಭನ ಮಪ್ಪ - ಅತ್ಯಂತಮಂಗಳವಾದ, ರೂಪಲಕ್ಷಣವಿಡಿದಿರ್ದೊಡೆ - ಮಂತ್ರಲಕ್ಷಣವಂ ತಾಳ್ದಿರ್ದೊಡೆ, ಘನಮೇಂ - ಆ ಪೆರ್ಚುಗೆಯೇನು ? ಇನ್ನುಪಮಿಸಲ್‌ಬಹುದೆ-ಇನ್ನೇನೆಂದು ಹೇಳಬಹುದು ?

**ಭಾವಾರ್ಥಬೋಧಿನಿ – ೯೦ :** ದಯಾಘನನೂ ಜಗದ್ಭರಿತನೂ ಆದ ಶ್ರೀಗುರುವು ಪರಮ ಮಂತ್ರದ ಚೈತನ್ಯಮಯವಾದ ಉಪದೇಶವನ್ನು ಮಾಡಿದ ಕ್ಷಣದಲ್ಲಿಯೇ ಮಂತ್ರಾದಿಯಾದ ಓಂಕಾರವೇ ಶಿಷ್ಯನ ಅಂಗವಾಗಿಯೂ ಮಂತ್ರದ-

ನಕಾರಾದಿಯಕಾರಾಂತವಾದ ಪಂಚಾಕ್ಷರಗಳೇ - ಕ್ರಮವಾಗಿ - ನಾಸಿಕ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರವೆಂಬೈದು ಇಂದ್ರಿಯಗಳಾಗಿಯೂ ಪರಿಣಮಿಸಲಾಗಿ, ಆ ಶಿಷ್ಯನು ಮಂತ್ರಪಿಂಡನೆನಿಸಿಕೊಂಡನು. ಇಂತಪ್ಪ ಮಂತ್ರಲಕ್ಷಣವನ್ನು ಪಡೆದವನ ಮಹತ್ವವನ್ನು ಉಪಮಿಸಲು ಸಾಧ್ಯವಾದೀತೆ ? ಆಗದು.

## ಉತ್ಪಲಮಾಲಾವೃತ್ತಂ

೯೧ ಲಿಂಗಮನಂಗದೋಳ್ ಪರಮಲಿಂಗಮನಿಂದ್ರಿಯ ಪಙ್ಕ್ತಿಯೊಳ್ ಮಹಾ
ಲಿಂಗಮನಂತರಂಗಕರಣಾವಳಿಯೊಳ್ ಘನಸತ್ಯ ಚಿತ್ಪ್ರಭಾ-
ಲಿಂಗಮನಂಬರಪ್ರಭೃತಿಭೂತಸಮುಚ್ಚಯದೋಳ್ ಕನತ್ಕಳಾ-
ಲಿಂಗಮ ನಾಶುಗಪ್ರಕರದೊಳ್ ತಳೆದಂಗರಿದೇಂ ಶಿವಾಧವಾ

**ಟೀಕೆ :** ಅಂಗದೋಳ್ - ಜೀವಾತ್ಮನೆಂಬ ಅಂಗಸ್ಥಲದಲ್ಲಿ, ಲಿಂಗಮಂ- ಮಹಾಲಿಂಗವನ್ನೂ, ಇಂದ್ರಿಯಪಂಙ್ಕ್ತಿಯೊಳ್ - ಇಂದ್ರಿಯಂಗಳ ಸಮೂಹದಲ್ಲಿ, ಪರಮಲಿಂಗಮಂ – ಉತ್ಕೃಷ್ಟವಾದ ಶಿವಲಿಂಗವನ್ನೂ, ಅಂತರಂಗಕರಣಾವಳಿ ಯೊಳ್ - ಅಂತಃಕರಣಸಮೂಹದಲ್ಲಿ, ಮಹಾಲಿಂಗಮಂ - ಅಧಿಕವಾದ ಪ್ರಸಾದ ಲಿಂಗವನ್ನೂ, ಅಂಬರಪ್ರಭೃತಿಭೂತಸಮುಚ್ಚಯದೋಳ್ - ಆಕಾಶ ಮೊದಲಾದ ಭೂತಸಮೂಹದಲ್ಲಿ, ಘನ ....... ಲಿಂಗಮಂ - ಘನ - ದೊಡ್ಡಿತ್ತಾದ, ಸತ್ಯ- ಸದ್ರೂಪವಾದ, ಚಿತ್ಪ್ರಭಾ - ಜ್ಞಾನಪ್ರಕಾಶರೂಪವಾದ, ಲಿಂಗಮಂ - ಆಚಾರ ಲಿಂಗವನ್ನೂ, ಆಶುಗಪ್ರಕರದೊಳ್ - ಪ್ರಾಣಾದಿವಾಯುಗಳೈದರಲ್ಲಿ, ಕನತ್ಕಳಾ ಲಿಂಗಮಂ - ಕನತ್ಕಳಾ - ಕಾಂತಿವೆತ್ತ ಚಿತ್ಕಳೆಯನುಳ್ಳ, ಲಿಂಗಮಂ - ಜಂಗಮ ಲಿಂಗವನ್ನೂ, ತಳೆದಂಗೆ - ಧರಿಸಿದಾತನಿಗೆ, ಅರಿದೇಂ - ಆಶ್ಚರ್ಯವೇನುಂಟು ? ಏನೂ ಆಶ್ಚರ್ಯವಿಲ್ಲವೆಂಬುದರ್ಥಂ.

**ಭಾವಾರ್ಥಬೋಧಿನಿ – ೯೧ :** ಅಂಗಪದವಾಚ್ಯನಾದ ವೀರಶೈವನು ತನ್ನ ಆತ್ಮ, ಬಹಿರಿಂದ್ರಿಯ, ಅಂತಃಕರಣ, ಶರೀರಗತವಾದ ಆಕಾಶಾದಿ ಪಂಚಭೂತ, ಪ್ರಾಣಾದಿಪಂಚವಾಯು ಇವುಗಳಲ್ಲಿ - ಕ್ರಮವಾಗಿ - ಮಹಾಲಿಂಗ, ಶಿವಲಿಂಗ, ಪ್ರಸಾದಲಿಂಗ, ಆಚಾರಲಿಂಗ, ಜಂಗಮಲಿಂಗ, ಇವುಗಳನ್ನು ಧರಿಸಿರುವುದರಿಂದ ಆ ವೀರಶೈವನಿಗೆ ಅಸಾಧ್ಯವಾದುದೇನಿರುವುದು ? ( ವೀರಶೈವನ ಆತ್ಮದಂತೆ ತನು- ಕರಣಾದಿಗಳೂ ಲಿಂಗಮಯವೆಂಬುದಭಿಪ್ರಾಯಂ )

**ಅವತಾರಿಕೆ** : ಅನಂತಜನ್ಮಗಳಲ್ಲಿ ಮುಕ್ತಿಯಂ ಪಡೆದಪೆವೆಂದು ವ್ಯರ್ಥ-ದಾಯಾಸಂಬಡುವ ವೇದಾಂತ - ಸಿದ್ಧಾಂತ - ಯೋಗಮಾರ್ಗಂಗಳಂ ನಿರಾಕರಿಸಿ, ನಿರಾಯಾಸದಿಂ ಜೀವನ್ಮುಕ್ತಿಯಪ್ಪ ಭಕ್ತಿಮಾರ್ಗವೇ ಅಧಿಕವೆಂದು ಗ್ರಂಥ-ಸಮಾಪ್ತಿಯಪ್ಪನ್ನೆಗಂ ಪೇಳುತ್ತಿರ್ದಪಂ-

**ಚಂಪಕಮಾಲಾವೃತ್ತಂ**

೯೨ ಅಡಿಗಡಿಗಾಯಸಂಬಡುವ ಜನ್ಮಸಹಸ್ರದೊಳಪ್ಪ ಮುಕ್ತಿಯಂ
ಪಿಡಿಯದೆ ಜನ್ಮವೊಂದರೊಳೆ ಸಿದ್ಧಿಪ ನಿಶ್ಚಲ ಮುಕ್ತಿಸೌಖ್ಯಮಂ
ಪಿಡಿದು ಬಹಿಃಪ್ರಪಂಚ ಕುಟಿಲಾಗಮ ಧರ್ಮವ ಸಂಜ್ಞೆ ಮಾರ್ಗದೊಳ್
ನಡೆಯದೆ ಭಕ್ತಿಯೋಗಪದದೊಳ್ ನಡೆವರ್ ಶರಣರ್ ಶಿವಾಧವಾ

**ಟೀಕೆ** : ಶರಣರ್ - ಶಿವಶರಣರು, ಅಡಿಗಡಿಗೆ - ಹೆಜ್ಜೆಹೆಜ್ಜೆಗೆ, ಆಯಸಂಬಡುವ - ಕೋಟಲೆಗೊಂಬ, ಜನ್ಮಸಹಸ್ರದೋಳ್‌ಅಪ್ಪ - ಅನಂತಜನ್ಮದಲ್ಲಿ ಆಗುವ, ಮುಕ್ತಿಯಂ - ಮೋಕ್ಷವನ್ನು, ಪಿಡಿಯದೆ - ಮುಟ್ಟದೆ, ಜನ್ಮವೊಂದರೊಳೆ - ಜನ್ಮವೊಂದರಲ್ಲಿಯೇ, ಸಿದ್ಧಿಪ - ನಿರಾಯಾಸದಿಂ ಕೈಸೇರುವ, ನಿಶ್ಚಲ ಮುಕ್ತಿಸೌಖ್ಯಮಂ - ನಿಶ್ಚಲ - ಚಲನೆಯಿಲ್ಲದ, ಮುಕ್ತಿಸೌಖ್ಯಮಂ - ಸಮರಸಾನಂದವನ್ನು, ಪಿಡಿದು ಪರಿಗ್ರಹಿಸಿ, ಬಹಿಃ....ಮಾರ್ಗದೊಳ್ - ಬಹಿಃ-ಹೊರಗಾದ, ಪ್ರಪಂಚ - ಮರವೆಯನುಳ್ಳ, ಕುಟಿಲ - ವಕ್ರವಾದ, ಆಗಮ ಧರ್ಮವಸಂಜ್ಞೆ-ಆಗಮ ಧರ್ಮ ಸಂಜ್ಞೆಯ, ಮಾರ್ಗದೊಳ್ - ಮಾರ್ಗದಲ್ಲಿ, ನಡೆಯದೆ - ಆಚರಿಸದೆ, ಭಕ್ತಿಯೋಗ ಪದದೊಳ್ - ಶಿವಭಕ್ತಿಯೋಗ ಮಾರ್ಗದಲ್ಲಿ, ನಡೆವರ್-ಆಚರಿಸುವರು.

**ಭಾವಾರ್ಥಬೋಧಿನಿ - ೯೨** : ಶಿವಶರಣರು ಅಡಿಗಡಿಗೆ ಅಧಿಕಾಯಾ-ಸಪ್ರದವಾದ ಅನಂತಜನ್ಮಗಳಲ್ಲಿ ದೊರೆಯುವ ಮೋಕ್ಷವನ್ನು ಬಯಸದೆ, ಒಂದೇ ಜನ್ಮದಲ್ಲಿ ನಿರಾಯಾಸವಾಗಿ ಲಭಿಸುವ ಲಿಂಗಾಂಗಸಮರಸಾನಂದ ರೂಪವಾದ ಮುಕ್ತಿಸೌಖ್ಯವನ್ನು ಬಯಸಿ, ಬಾಹ್ಯಪ್ರಪಂಚದ ವಕ್ರವಾದ ಧರ್ಮಮಾರ್ಗದಲ್ಲಿ ನಡೆಯದೆ, ಶಿವಭಕ್ತಿಯೋಗಮಾರ್ಗದಲ್ಲಿ ನಡೆಯುವರು.

## ಚಂಪಕಮಾಲಾವೃತ್ತಂ

೯೩ ಪರಮಗುರೂಪದೇಶದ ಲಸನ್ಮಹಿಮಾಸ್ಪದವೈಭವಂ ಷಡ-
ಕ್ಷರ ಶಿವಮಂತ್ರದೂರ್ಜಿತ ಮಹೋನ್ನತಲಿಂಗದ ಚಿದ್ಘನಪ್ರಭಾ-
ವರುಚಿರ ತೇಜಮಾತ್ಮಗುಣಲಕ್ಷಣಮಾಗಿ ಸದಾ ವಿರಾಜಿಪರ್
ಶರಣರೆನಲ್ ಬಳಿಕ್ಕಿ ತರಮಾರ್ಗದ ದೊಡ್ಡಿತದೇಂ ಶಿವಾಧವಾ

**ಟೀಕೆ :** ಶರಣರ್ - ವೀರಮಾಹೇಶ್ವರರು, ಪರಮಗುರೂಪದೇಶದ - ಉತ್ಕೃಷ್ಟವಾದ ಗುರೂಪದೇಶದ, ಲಸನ್ ……… ವೈಭವಂ - ಲಸತ್ - ಒಪ್ಪುತ್ತಿರ್ಪ, ಮಹಿಮ - ಮಹತ್ವಕ್ಕೆ, ಆಸ್ಪದ - ಸ್ಥಾನವಾದ, ವೈಭವಂ - ಐಶ್ವರ್ಯವು, ಷಡಕ್ಷರ ಶಿವಮಂತ್ರದ - ಪ್ರಣವಾದಿಯಾದ ಪಂಚಾಕ್ಷರೀ ಮಂತ್ರದ, ಊರ್ಜಿತ ಮಹೋನ್ನತಲಿಂಗದ - ಊರ್ಜಿತ, ಮೆಚ್ಚುಗೆಯಾದ, ಮಹೋ-ನ್ನತ - ಉತ್ತರೋತ್ತರವಾದ, ಲಿಂಗದ - ಮಹಾಲಿಂಗದ, ಚಿದ್ಘನ ……… ತೇಜಂ - ಚಿದ್ಘನ - ಜ್ಞಾನದಿಂದೆ ದೊಡ್ಡಿತ್ತಾದ, ಪ್ರಭಾವ - ಸಾಮರ್ಥ್ಯದಿಂದೆ, ರುಚಿರ - ಮನೋಹರವಾದ, ತೇಜಂ - ಪ್ರಕಾಶವು, ಆತ್ಮಗುಣ ಲಕ್ಷಣವಾಗಿ - ತಮ್ಮ ಸಹಜ ಸ್ವರೂಪದ ಮಾರ್ಗವಾಗಿ, ಸದಾ - ಆವಾಗಲೂ, ವಿರಾಜಿಪರ್ - ಒಪ್ಪುತ್ತಿರ್ಪರ್, ಎನಲ್ - ಹೀಗೆಂದು ಹೇಳುತ್ತಿರಲಾಗಿ, ಬಳಿಕ - ಮರಳಿ, ಇತರ ಮಾರ್ಗದ - ಅನ್ಯಮಾರ್ಗದ, ದೊಡ್ಡಿತು - ಪೆರ್ಮೆಗೆಯು, ಅದೇಂ - ಅದೇನು ಪ್ರಯೋಜನವು ? ಪ್ರಯೋಜನವಲ್ಲವೆಂಬುದರ್ಥಂ.

**ಭಾವಾರ್ಥಬೋಧಿನಿ** – ೯೩ : ಶರಣರು ಗುರೂಪದೇಶದ ವಿಲಸಿತ ಮಹತ್ವದ ಸಂಪತ್ತುಳ್ಳವರಾಗಿ, ಮತ್ತು ಷಡಕ್ಷರ ಮಂತ್ರದ ಹಾಗೂ ಮಹೋನ್ನತ ಲಿಂಗದ ಜ್ಞಾನದಿಂದುಂಟಾದ ಅಧಿಕ ಸಾಮರ್ಥ್ಯದ ಮನೋಹರ ತೇಜಸ್ಸುಳ್ಳವ-ರಾಗಿ ಇರುವರು ಈ ರೀತಿಯಾಗಿ ಇರುವುದೇ ತಮ್ಮ ಸಹಜ ಸ್ವರೂಪದ ಮಾರ್ಗವಾಗಿರುವುದು. ಇಂತಹ ಮಾರ್ಗದಲ್ಲಿ ಸದಾ ಶೋಭಿಸುತ್ತಿರುವ ಶರಣರಿಗೆ ತಮ್ಮ ಶರಣಮಾರ್ಗವನ್ನುಳಿದು ಅನ್ಯಮಾರ್ಗದಲ್ಲಿ ಅಧಿಕ್ಯವೇನಿರುವುದು ? ಏನೂ ಇಲ್ಲ.

## ಉತ್ಪಲಮಾಲಾವೃತ್ತಂ

೯೪ ಅಂಗದ ಮೇಲೆ ಚಿದ್ಘನಪರಾಹ್ವಯ ಲಿಂಗಕಳಾ ಪ್ರತಿಷ್ಠೆಯಂ
ಸಾಂಗಿಕಮಾಗಿ ಸದ್ಗುರು ಕೃಪಾನಿಧಿ ಮಾಡಿದ ತತ್‌ಕ್ಷಣಾರ್ಥಮಾ
ಲಿಂಗಮೆ ಷಟ್‌ಪ್ರಕಾರ ಮುಖಮಾಗಿ ಷಡಿಂದ್ರಿಯ ಭೂತವರ್ಗದೊಳ್
ಮಂಗಳಮಾಗಿ ವರ್ತಿಸಲನರ್ಪಿತಮುಂಟೆ ಬಿಡಾ ಶಿವಾಧವಾ

**ಟೀಕೆ :** ಕೃಪಾನಿಧಿ - ದಯಾನಿಧಿಯಾದ, ಸದ್ಗುರು - ಶ್ರೀಗುರುವು ಅಂಗದ ಮೇಲೆ - ಶರೀರದ ಮೇಲೆ, ಚಿದ್ಘನ.........ಪ್ರತಿಷ್ಠೆಯಂ - ಚಿದ್ಘನ - ಜ್ಞಾನದಿಂದ ದೊಡ್ಡಿತ್ತಾದ, ಪರಾಹ್ವಯ - ಪರಮಾತ್ಮನೆಂಬ ಪೆಸರನುಳ್ಳ, ಲಿಂಗಕಳಾ ಪ್ರತಿಷ್ಠೆಯಂ - ಲಿಂಗಚೈತನ್ಯ ಪ್ರತಿಷ್ಠೆಯನ್ನು, ಸಾಂಗಿಕಮಾಗಿ - ಯೋಗ್ಯವಾಗಿ, ಮಾಡಿದ - ಉಂಟು ಮಾಡಿದ, ತತ್‌ಕ್ಷಣಾರ್ಥಂ - ಅಷ್ಟರೊಳಗೆ, ಆ ಲಿಂಗಮೆ - ಆ ಲಿಂಗತಾನೆ, ಷಟ್‌ಪ್ರಕಾರ ಮುಖಮಾಗಿ - ಆಚಾರಾದಿ ಮಹಾಲಿಂಗಾಂತವಾದ ಆರು ತೆರದ ಮುಖವಾಗಿ, ಷಡಿಂದ್ರಿಯ ಭೂತವರ್ಗದೊಳ್ - ಇಂದ್ರಿಯವಾರು ಭೂತವಾರರ ಸಮೂಹದಲ್ಲಿ, ಮಂಗಳಮಾಗಿ - ನಿರ್ಮಳವಾಗಿ, ವರ್ತಿಸಲ್-ಆಚರಿಸಲಾಗಿ, ಅನರ್ಪಿತಮುಂಟೆ - ಅರ್ಪಿಸಬಾರದುದುಂಟೆ ? ಎಲ್ಲವೂ ಅರ್ಪಿತವೆಂಬರ್ಥಂ.

ಭಾವಾರ್ಥಬೋಧಿನಿ – ೯೪ : ದಯಾನಿಧಿಯಾದ ಶ್ರೀಗುರುವು, ಜ್ಞಾನಘನವಾದ ಪರಶಿವಸಾಮುಕಲಿಂಗ ಚೈತನ್ಯವನ್ನು ಶಿಷ್ಯನ ಅಂಗದ ಮೇಲೆ ಸಾಂಗವಾಗಿ ಪ್ರತಿಷ್ಠೆಮಾಡಿದಾಗಳೇ, ಆ ಶಿವಲಿಂಗವೇ ಆಚಾರಾದಿಯಾಗಿ ಮಹಾಲಿಂಗಾಂತವಾದ ಆರು ತೆರದ ಮುಖವಾಗಿ ನಾಶಿಕಾದಿ ಹೃದ್ರಯಾಂತ ಷಡಿಂದ್ರಿಯಗಳಲ್ಲಿಯೂ ಮತ್ತು ಆ ಷಡಿಂದ್ರಿಯಗಳಿಗೆ ಸಂಬಂಧಿಸಿರುವ ಭೂಮ್ಯಾದಿಯಾಗಿ ಆತ್ಮಾಂತವಾದ ಆರು ಭೂತಗಳಲ್ಲಿಯೂ ಸೊಗಸಾಗಿ ನೆಲಸಿರುವುದರಿಂದ ಆ ಲಿಂಗಾಂಗಿಗೆ ಅನರ್ಪಿತವೆಂಬುದಿರುವುದಿಲ್ಲ. ಎಲ್ಲವೂ ಅರ್ಪಿತವೆಂಬುದರ್ಥವು. ಎಂದರೆ - ಅಂಗಪದವಾಚ್ಯನಾದ ಶಿವಶರಣನು ತನ್ನ ಷಡಿಂದ್ರಿಗಳೆಂಬ ಆಚಾರಾದಿ ಲಿಂಗಮುಖಗಳಿಂದ ಭೂಮ್ಯಾದಿಷಡ್ಭೂತಗಳಿಗೆ ಸಂಬಂಧಿಸಿದ - ಗಂಧ, ರಸ, ರೂಪ - ಸ್ಪರ್ಶ, ಶಬ್ದ, ತೃಪ್ತಿಗಳನ್ನು ಲಿಂಗಪ್ರಸಾದಭಾವನೆಯಿಂದ ಯಾವಾಗಲೂ ಭೋಗಿಸುತ್ತಿರುವನೆಂದು ತಾತ್ಪರ್ಯ.

**ಚಂಪಕಮಾಲಾವೃತ್ತಂ**

೯೫ ಬಹುವಿಧ ಕೃತ್ಯಸಾಧ್ಯಮಹ ಮುಕ್ತಿಪದಂ ಭವಕೋಟಿಯಲ್ಲಿ ನಿ-
ರ್ವಹಿಸುವುದಕ್ಕೆ ಕೋಟಲೆಗೊಳುತ್ತಿರಲೊಯ್ಯನೆ ಜನ್ಮವೊಂದರೊಳ್
ವಿಹಿತಸುಖೈಕ ಸಾಧ್ಯಮಹ ಮುಕ್ತಿಪದಂ ದೊರಕೊಂಡೊಡೊಲ್ಲೆನೆಂ
ದಿಹುದಿದು ಪಾಪಶೇಷಫಲಮೈಸೆ ವಿಚಾರಮದೇಂ ಶಿವಾಥವಾ

**ಟೀಕೆ :** ಬಹುವಿಧಕೃತ್ಯಸಾಧ್ಯಮಹ - ಬಹುವಿಧ - ಅನೇಕ ಪ್ರಕಾರವಾದ, ಕೃತ್ಯ-ಆಯಾಸಕರ್ಮದಿಂದ, ಸಾಧ್ಯಮಹ-ಸಾಧಿಸಲ್ತಕ್ಕುದಾದ, ಮುಕ್ತಿಪದಂ-ಮೋಕ್ಷಮಾರ್ಗವು, ಭವಕೋಟಿಯಲ್ಲಿ-ಅನಂತಜನ್ಮದಲ್ಲಿ, ನಿರ್ವಹಿಸುವುದಕ್ಕೆ-ಉಂಟುಮಾಡಿಕೊಂಬುವುದಕ್ಕೆ, ಕೋಟಲೆಗೊಳುತ್ತಿರಲ್-ಆಯಾಸಂಗೊಳುತ್ತಿರಲಾಗಿ, ಒಯ್ಯನೆ-ಚೆನ್ನಾಗಿ, ಜನ್ಮವೊಂದರೊಳ್-ಜನ್ಮವೊಂದರಲ್ಲಿಯೇ, ವಿಹಿತಸುಖೈಕಸಾಧ್ಯಮಹ-ವಿಹಿತ-ಕೊಡಲ್ಪಟ್ಟ, ಸುಖೈಕಸಾಧ್ಯಮಹ - ಅನಾಯಾಸದಿಂ ಸಾಧಿಸಲ್ಪಡುವುದಾದ, ಮುಕ್ತಿಪದಂ-ಮೋಕ್ಷಪದವು, ದೊರಕೊಂಡೊಡೆ-ಫಲಿಸಿಡೊಡೆ, ಒಲ್ಲೆನೆಂದಿಹುದಿದು-ಒಲ್ಲೆನೆಂದು ಬಿಟ್ಟಿರ್ಪುದಿದು, ಪಾಪಶೇಷಫಲಮೈಸೆ-ಪೂರ್ವಜನ್ಮದಲ್ಲಿ ಉಳಿದ ಪಾಪದ ಫಲವಷ್ಟೆ, ವಿಚಾರಮದೇಂ-ಅದೇತರ ವಿಚಾರವು?

**ಭಾವಾರ್ಥಬೋಧಿನಿ – ೯೫ :** ಅನಂತ ಜನ್ಮಗಳಲ್ಲಿ ಅನೇಕವಿಧ ಕರ್ಮಗಳನ್ನು ಮಾಡಿ, ಕಷ್ಟದಿಂದ ಪಡೆದುಕೊಳ್ಳುವ ಮುಕ್ತಿಪದವನ್ನು ಒಂದೇ ಜನ್ಮದಲ್ಲಿ ಅನಾಯಾಸವಾಗಿ ಹೊಂದಬಹುದಾದ ಸುಲಭವಾದೀ ಲಿಂಗಧಾರಣ ಮಾರ್ಗವನ್ನು ಒಲ್ಲೆನೆಂಬುದು ಪೂರ್ವಜನ್ಮದ ಪಾಪಶೇಷದ ಫಲವಲ್ಲವೆ ? ಲಿಂಗಧಾರಣಮಾರ್ಗವನ್ನು ಬಿಡುವ ವಿಚಾರವದೇತರ ವಿಚಾರವು ?

**ಚಂಪಕಮಾಲಾವೃತ್ತಂ**

೯೬ ಬಡಿಣಮನೊಲ್ಲದಂತಿರಿಸಿ ಭಿಕ್ಷಕೆ ಪೋಪವನಂತೆ ಕೂಡೆ ಕೂ
ಡೊಡನಿರುತಿರ್ಪ ಮುಕ್ತಿಸುಖಭೋಗಮನೊಲ್ಲದೆ ದೂರಮೂರಮ
ಪ್ಪೆಡೆದೆರಪಿಲ್ಲದಾಯಸಮೆನಿಪ್ಪ ಸುದುರ್ಘಟ ಮುಕ್ತಿ ಸೌಖ್ಯಮಂ
ಪಡೆದಪೆವೆಂದು ಕೋಟಲೆಗೊಳುತ್ತಿಹರಾ ಮರುಳರ್ ಶಿವಾಥವಾ

**ಟೀಕೆ :** ಆ ಮರುಳರ್-ಆ ಹುಚ್ಚರು, ಬಡಿಣಮಂ-ಕಣ್ಣುಮುಂದೆ ಗಡಣಿಸಿರ್ದ ಭೋಜ್ಯಾದಿ ಪದಾರ್ಥವನ್ನು, ಒಲ್ಲದೆ-ಬಿಟ್ಟು, ಅಂತಿರಿಸಿ-ಹಾಂಗೆ ಮಡಗಿ, ಭಿಕ್ಷಕೆ-ಭಿಕ್ಷಾನ್ನಕ್ಕೆ, ಪೋಪವನಂತೆ-ಹೋಗುವವನ ಹಾಂಗೆ, ಕೂಡೆ ಕೂಡೊಡನೆ-ತನ್ನ ಸಂಗಡವೇ, ಇರುತಿರ್ಪ-ಇರುವಂಥ, ಮುಕ್ತಿಸುಖಭೋಗಮಂ-ಮೋಕ್ಷಾನಂದ ಪರಿಣಾಮವನ್ನು, ಒಲ್ಲದೆ-ಬಿಟ್ಟು, ದೂರದೂರಮಪ್ಪ-ಸಮೀಪವಲ್ಲದಿರ್ಪ, ಎಡೆದೆರಪಿಲ್ಲದ-ಖಂಡಿತವಲ್ಲದೆ, ಆಯಸಮೆನಿಪ್ಪ-ಕೋಟಲೆಯೆನಿಸುವ, ಸುದುರ್ಘಟಮುಕ್ತಿಸೌಖ್ಯಮಂ-ಪಡೆಯಲಶಕ್ಯವಾದ ಮುಕ್ತಿಸುಖವನ್ನು, ಪಡೆದಪೆವೆಂದು-ಗಳಿಸುವೆವೆಂದು, ಕೋಟಲೆಗೊಳುತ್ತಿಹರ್-ಆಯಾಸಬಡುತ್ತಿರ್ಪರು.

**ಭಾವಾರ್ಥಬೋಧಿನಿ – ೯೭ :** ಲಿಂಗಧಾರಣಮಾರ್ಗವನ್ನು ಹಿಡಿಯದ ಮರುಳರು, ಮುಂದೆ ಉಣಬಡಿಸಿದ ಭೋಜ್ಯಾದಿ ಪದಾರ್ಥಗಳನ್ನು ಒಲ್ಲೆನೆಂದು ತ್ಯಜಿಸಿ, ಭಿಕ್ಷಾನ್ನಕ್ಕೆ ತಿರುಗುವವನಂತೆ, ತಮ್ಮೊಡನೆಯೇ ಇರುವ ಮೋಕ್ಷಾನಂದಾನುಭವವನ್ನು ತಿರಸ್ಕರಿಸಿ, ಸಮೀಪದಲ್ಲಿರದ ನಿಶ್ಚಿತವಲ್ಲದ ಪಡೆಯಲಶಕ್ಯವಾದ ಮುಕ್ತಿ ಸುಖವನ್ನು ಪಡೆಯುವೆವೆಂದು ಕಷ್ಟಪಡುತ್ತಿರುವರು. (ಲಿಂಗಧಾರಣ ಮಾರ್ಗದಲ್ಲಿ ಮೋಕ್ಷಸುಖವೆನಿಸಿದ ಲಿಂಗಾಂಗಸಾಮರಸ್ಯಸೌಖ್ಯವು ಸುಲಭಸಾಧ್ಯವು; ಇತರ ಮಾರ್ಗಗಳಲ್ಲಿ ಆ ಸೌಖ್ಯವು ದೊರೆಯುವುದು ಕಷ್ಟಸಾಧ್ಯವಾದರೂ ಅನಿಶ್ಚಿತವೆಂಬುದಭಿಪ್ರಾಯಂ.)

## ಉತ್ಪಲಮಾಲಾವೃತ್ತಂ

೯೭ ಶೀತಗೃಹೀತ ವಾನರಗಣಂ ಜ್ವಲಿತಾನಲಕಾಂಕ್ಷೆಯಿಂ ಪ್ರಯ-
ತ್ನಾತುರಮಾಗಿ ಮಿಂಚುಬುಳುಮಂ ಪರಿಕಲ್ಪಿಸುವಂತೆ ವೀರಶೈ
ವೇತರಧರ್ಮಮಾರ್ಗವಿಡಿದೂರ್ಜಿತಮಪ್ಪ ವಿಶಿಷ್ಟ ಮುಕ್ತಿ ಸೌ
ಖ್ಯಾತಿಶಯಾಭಿರಾಮಪದಮಂ ಬಿಡದೈದುವವರ್ ಶಿವಾಧವಾ

**ಟೀಕೆ :** ವೀರಶೈ ……… ವಿಡಿದು - ವೀರಶೈವ - ವೀರಶೈವಕ್ಕಿಂದೆ, ಇತರ – ಬೇರಾದ, ಧರ್ಮಮಾರ್ಗವಿಡಿದು - ಆಚರಣೆಯಪಥವಿಡಿದು, ಊರ್ಜಿತಮಪ್ಪ - ಪೆರ್ಚುಗೆಯಾದ, ವಿಶಿಷ್ಟ ……… ಪದಮಂ – ವಿಶಿಷ್ಟ - ಅಧಿಕವಾದ, ಮುಕ್ತಿಸೌಖ್ಯ - ಮೋಕ್ಷಾನಂದವೆಂಬ, ಅತಿಶಯ-ಅಧಿಕವಾದ, ಅಭಿರಾಮಪದಮಂ-ಮನೋಹರವಾದ ಪದವನ್ನು, ಬಿಡದೆ - ವರ್ಜಿಸದೆ, ಐದುವವರ್ - ಹೊಂದು

ವಂಥವರುಗಳು, ಶೀತ ……… ಗಣಂ - ಶೀತ - ಚಳಿಯಿಂದ, ಗೃಹೀತ - ಹಿಡಿಯಲ್ಪಟ್ಟ, ವಾನರಗಣಂ - ಕಪಿಸಮೂಹವು, ಜ್ವಲಿತಾನಲಕಾಂಕ್ಷೆಯಿಂ- ಉರಿಯಲ್ಪಟ್ಟ ಅಗ್ನಿಯ ಬಯಸುವುದರಿಂ, ಆಯತ್ನಾತುರವಾಗಿ - ಉದ್ಯೋಗ ದಿಂದ ಕಂಗೆಟ್ಟುದಾಗಿ, ಮಿಂಚುಬುಳುವಂ - ಖದ್ಯೋತಕೀಟವನ್ನು, ಪರಿಕಲ್ಪಿಸು ವಂತೆ - ಅಗ್ನಿಯೆಂದುಂಟುಮಾಡಿಕೊಂಬಂತೆ, (ವೀರಶೈವಮಾರ್ಗದಿಂದನ್ಯವಾದ ಮಾರ್ಗದಿಂ ಮುಕ್ತಿ ಸಾಧ್ಯವಲ್ಲವೆಂಬುದಭಿಪ್ರಾಯಂ)

**ಭಾವಾರ್ಥಬೋಧಿನಿ – ೯೭ :** ವೀರಶೈವಕ್ಕೆ ಭಿನ್ನವಾದ ಧರ್ಮಮಾರ್ಗ- ವನ್ನು ಹಿಡಿದು, ಮುಕ್ತಿಸೌಖ್ಯದ ಮನೋಹರ ಪದವನ್ನು ಪಡೆಯಲು ಪ್ರಯತ್ನಿ- ಸುವವರ ಸ್ಥಿತಿಯು, ಶೀತಪೀಡಿತವಾದ ಕಪಿಗಳ ಗುಂಪು ಶೀತನಿವಾರಣೆಗಾಗಿ ಬೆಂಕಿಯನ್ನು ಪಡೆಯುವ ಕಾಂಕ್ಷೆಯಿಂದ ಆತುರಗೊಂಡು ಮಿಂಚು ಹುಳವನ್ನೇ ಬೆಂಕಿಯನ್ನಾಗಿ ಕಲ್ಪಿಸಿಕೊಳ್ಳುವ ರೀತಿಯಂತಿರುವುದು - ಎಂದರೆ - ವೀರಶೈವಕ್ಕನ್ಯ- ವಾದ ಮಾರ್ಗದಿಂದ ಮೋಕ್ಷಸುಖವನ್ನು ಹುಡುಕುವುದು ವ್ಯರ್ಥವಾಗುವುದೆಂದು ತಾತ್ಪರ್ಯ.

## ಉತ್ಪಲಮಾಲಾವೃತ್ತಂ

೯೮ ಮುನ್ನಮೆ ಲಿಂಗದಲ್ಲಿ ಬೆರಸಿರ್ದು ಸದಾ ಯಜನಾದಿಸತ್ಕ್ರಿಯಾ-
ಸನ್ನಿಹಿತಾತ್ಮನಾಗಿ ಶರಣಂ ಯಜಿಸುತ್ತಿಹಭಿನ್ನಭಾವಮಂ
ವರ್ಣಿಪೊಡಪ್ರಮೇಯಮನಿಲಂ ನಭದೊಳ್ ಬೆರಸಿರ್ದುಶಬ್ದಜಾ-
ರೋನ್ನತಿಯಿಂ ವಿಭೇದವಡೆದಂತೆ ವಿರಾಜಿಸುವಂ ಶಿವಾಧವಾ

**ಟೀಕೆ :** ಶರಣಂ - ವೀರಮಾಹೇಶ್ವರನು, ಮುನ್ನಮೆ - ಮೊದಲೇ, ಲಿಂಗದಲ್ಲಿ - ಮಹಾಲಿಂಗದಲ್ಲಿ, ಬೆರಸಿರ್ದು - ಕೂಡಿರ್ದು, ಸದಾ - ಆವಾಗಳೂ, ಯಜನಾದಿಸತ್ಕ್ರಿಯಾಸನ್ನಿಹಿತಾತ್ಮನಾಗಿ - ಸದಾಚಾರಗಳಿಗೆ ಸಮೀಪವಾದ ಹೃದಯ ವುಳ್ಳಾತನಾಗಿ, ಯಜಿಸುತ್ತಿಹ - ಅರ್ಚಿಸುತ್ತಿಹ, ಅಭಿನ್ನಭಾವಮಂ - ಭೇದವಿಲ್ಲ ವಹತನವನ್ನು, ವರ್ಣಿಪೊಡೆ - ಹೇಳುವೊಡೆ, ಅಪ್ರಮೇಯಂ - ತಿಳಿಯಳಲವಲ್ಲದ, ಅನಿಲಂ - ವಾಯುವು, ನಭದೊಳ್ - ಆಕಾಶದಲ್ಲಿ, ಬೆರಸಿರ್ದು - ಕೂಡಿರ್ದು, ಶಬ್ದಜಾರೋನ್ನತಿಯಿಂ - ಶಬ್ದವಂ ಪುಟ್ಟಿಸುವ ಪೆರ್ಚುಗೆಯಿಂದೆ, ವಿಭೇದವಡೆ ದಂತೆ ಬೇರಾದಹಾಂಗೆ, ವಿರಾಜಿಸುವಂ - ಒಪ್ಪುವನು.

**ಭಾವಾರ್ಥಬೋಧಿನಿ – ೯೮ :** ವೀರಶೈವ ಶರಣನು ಮೊದಲೇ (ದೀಕ್ಷಾ ಕಾಲದಲ್ಲಿಯೇ) ಲಿಂಗದೊಡನೆ ಕೂಡಿ - ಲಿಂಗರೂಪನಾಗಿ - ಇರುವನು. ಆದರೂ, ಲಿಂಗಾರ್ಚನಾದಿ ಸತ್ಕ್ರಿಯೆಗಳಲ್ಲಿ ಮಗ್ನಹೃದಯನಾಗಿ ಯಾವಾಗಲೂ ಲಿಂಗಾರ್ಚನ ಲೋಲನಾಗಿ ರಾಜಿಸುವನು. ( ಪೂಜಕನಾಗಿ ಒಪ್ಪುವನು ) ಈ ಭಿನ್ನಾಭಿನ್ನ ಸ್ಥಿತಿಯು - ಆಕಾಶದೊಡನೆ ಬೆರದಿರುವ ವಾಯುವು ಆಕಾಶದ ಶಬ್ದಗುಣವನ್ನು ಹುಟ್ಟಿಸುವಾಗ ಭೇದವಾಗಿದ್ದರೂ, ಆಮೇಲೆ ಅಭಿನ್ನವಾಗಿ ತೋರುವಂತಿರುವುದು. ಎಂದರೆ - ಶರಣನ ಪೂಜ್ಯಪೂಜಕ ಭೇದವು ಅರ್ಚನಾರ್ಪಣಗಳ ಕಾಲದಲ್ಲಿ ತೋರಿದರೂ ಆತನು ಪೂಜ್ಯವಾದ ಲಿಂಗರೂಪನಾಗಿಯೇ ಕಂಗೊಳಿಸುವನೆಂದು ತಾತ್ಪರ್ಯ.

## ಉತ್ಪಲಮಾಲಾವೃತ್ತಂ

೯೯ ಸ್ಥಾವರಜಂಗಮದ್ವಿವಿಧಲಿಂಗ ಸಮಾಹಿತಭಕ್ತಿ ತಾನೆ ಸಂ-
ಭಾವಿಸಿ ಜನ್ಮವೊಂದರೊಳೆ ಸಿದ್ಧಿಪ ಕೇವಲ ನಿತ್ಯಮುಕ್ತಿಯೆಂ
ದೋವಿ ಸಮಸ್ತಶೈವ ವಿಮಳಾಗಮಧರ್ಮರಹಸ್ಯವಾಕ್ಯದಿಂ
ಪಾವನಮೂರ್ತಿ ಸದ್ಗುರು ಕೃಪಾನಿಧಿ ಬೋಧಿಸಿದಂ ಶಿವಾಥವಾ

**ಟೀಕೆ :** ಪಾವನಮೂರ್ತಿ - ಪವಿತ್ರರೂಪನಾದ, ಕೃಪಾನಿಧಿ - ದಯಾನಿಧಿಯಾದ, ಸದ್ಗುರು - ಶ್ರೀಗುರುವು, ಸ್ಥಾವರ ……… ಭಕ್ತಿ - ಸ್ಥಾವರ ಜಂಗಮ - ಇಷ್ಟಲಿಂಗ ಜಂಗಮಲಿಂಗವೆಂಬ, ದ್ವಿವಿಧಲಿಂಗ - ಎರಡು ತೆರನಾದ ಲಿಂಗದಲ್ಲಿ, ಸಮಾಹಿತ - ಸಂಬಂಧಿಸಲ್ಪಟ್ಟ, ಭಕ್ತಿ - ಭಕ್ತಿಯು, ತಾನೆ - ಅದು ತಾನೆ, ಜನ್ಮವೊಂದರಲ್ಲಿಯೇ, ಸಂಭಾವಿಸಿ - ಪ್ರಾಪ್ತವಾಗಿ, ಸಿದ್ಧಿಪ - ಕೈಸೇರುವ, ಕೇವಲನಿತ್ಯಮುಕ್ತಿಯೆಂದು - ಕೇವಲ - ತಾನೆಯಾದ, ನಿತ್ಯಮುಕ್ತಿಯೆಂದು- ಕೇಡಿಲ್ಲದ ಮೋಕ್ಷವೆಂದು, ಸಮಸ್ತ …… ವಾಕ್ಯದಿಂ - ಸಮಸ್ತ - ಬಹಳವಾದ, ಶೈವ - ಶಿವಸಂಬಂಧವಾದ, ವಿಮಳ - ನಿರ್ಮಳವಾದ, ಆಗಮ - ಆಗಮಂಗಳಲ್ಲಿನ, ಧರ್ಮ - ಆಚಾರದ, ರಹಸ್ಯ - ಗೋಪ್ಯವಾದ, ವಾಕ್ಯದಿಂ "ಏಕೇನ ಜನ್ಮನಾ ಮುಕ್ತಿರ್ವೀರಾಣಾಂತು ಮಹೇಶ್ವರಿ" ಎಂಬ ವಾಕ್ಯದಿಂದೆ, ಓದಿ - ಪಾಲಿಸಿ, ಬೋಧಿಸಿದಂ - ಉಪದೇಶಿಸಿದನು.

**ಭಾವಾರ್ಥಬೋಧಿನಿ - ೯೯ :** ಪಾವನಮೂರ್ತಿಯಾದ ಶ್ರೀಗುರುವು ಇಷ್ಟಲಿಂಗ ಜಂಗಮಲಿಂಗವೆರಡರಲ್ಲಿರಿಸಿದ ಭಕ್ತಿಯೇ ಒಂದೇ ಜನ್ಮದಲ್ಲಿ ಪ್ರಾಪ್ತವಾಗುವ ಕೇವಲವಾದ ನಿತ್ಯಮುಕ್ತಿಯೆಂಬುದನ್ನು ಸಕಲ ಶಿವಾಗಮಗಳಲ್ಲಿರುವ ಧರ್ಮದ ರಹಸ್ಯಾರ್ಥವಾದ "ಏಕೇನ ಜನ್ಮನಾ ಮುಕ್ತಿರ್ವೀರಾಣಾಂತು ಮಹೇಶ್ವರಿ" ಎಂಬ ವಾಕ್ಯದಿಂದ ಬೋಧಿಸಿರುವನು. (ಲಿಂಗದಲ್ಲಿಯೂ ಲಿಂಗಮುಖವಾದ ಜಂಗಮದಲ್ಲಿಯೂ ಇರಿಸಿದ ಸದ್ಭಕ್ತಿಶಕ್ತಿಯೇ ಷಟ್‌ಸ್ಥಲಮಾರ್ಗದಿಂದ ವಿಕಾಸವಾಗಿ ನಿತ್ಯಮುಕ್ತಿಯಾಗಿ ಪರಿಣಮಿಸುವುದೆಂದು ತಾತ್ಪರ್ಯ).

**ಚಂಪಕಮಾಲಾವೃತ್ತಂ**

೧೦೦ ತುದಿಮೊದಲಿಲ್ಲದಿಂದ್ರಧನು ಮೂಡಿದ ಹಾಂಗೆ ಶರೀರಭಾವಮೆಂ
ಬುದೆ ಸಹಜಂ ಪರಾಪರವಿಕಲ್ಪವಿಹೀನ ಶಿವೈಕ್ಯಭಕ್ತಿಯೋ
ಗದ ಪರಮಾರ್ಥಮಂ ತಿಳಿದ ಲಿಂಗನಿಜೈಕ್ಯ ಸುಖಾಸ್ಪದಂಗೆ ತ
ಪ್ಪದುಭಯಕರ್ಮಭೋಗಫಲಮಿಲ್ಲದೆ ಪೋಪುದರಿಂ ಶಿವಾಥವಾ

**ಟೀಕೆ :** ಪರಾ......ಯೋಗದ-ಪರಾಪರ-ಇದು ಉತ್ಕೃಷ್ಟ ಇದು ನಿಕೃಷ್ಟವೆಂಬ, ವಿಕಲ್ಪ-ಸಂಕಲ್ಪದಿಂದ, ವಿಹೀನ-ರಚಿತವಾದ, ಶಿವೈಕ್ಯಭಕ್ತಿಯೋಗದ-ಶಿವನಲ್ಲಿ ಏರಕವಾದ ಭಕ್ತಿಯು ಕೂಟದ, ಪರಮಾರ್ಥಮಂ-ಯಥಾರ್ಥವನ್ನು, ತಿಳಿದ-ಅರಿದಂಥ, ಲಿಂಗನಿಜೈಕ್ಯಸುಖಾಸ್ಪದಂಗೆ-ಲಿಂಗ-ಶಿವಲಿಂಗದಲ್ಲಿ, ನಿಜೈಕ್ಯ-ಸಹಜ ಸಾಮರಸ್ಯದಿಂದಲಾದ, ಸುಖ - ಆನಂದಕ್ಕೆ, ಆಸ್ಪದಂಗೆ - ಸ್ಥಾನವಾದಾತಂಗೆ, ತಪ್ಪದೆ-ಓರೆಯಾಗದೆ, ಉಭಯಕರ್ಮಭೋಗಫಲಂ-ಪುಣ್ಯಪಾಪರೂಪ ಕರ್ಮಫಲ ಭೋಗವು, ಇಲ್ಲದೆ-ಏನೂ ಇಲ್ಲದೆ, ಪೋಪುವರಿಂ-ಹೋಗುವುದರಿಂದೆ, ತುದಿಮೊದಲಿಲ್ಲವ, ಆದಿ ಅಂತ್ಯಗಳಿಲ್ಲದ, ಇಂದ್ರಧನು-ಸುರಚಾಪವು, ಮೂಡಿವ ಹಾಂಗೆ-ತೋರಿದಂತೆ, ಶರೀರಭಾವಮೆಂಬುದೆ-ದೇಹಮಾತ್ರವೆಂಬುದು ತಾನೆ, ಸಹಜಂ-ಸ್ವಭಾವವು (ಶರಣನು ನಿರ್ದೇಹನೆಂಬುವರ್ಥಂ) ಈ ಅರ್ಥವಲ್ಲಿ—

ತಥಾ ವಿದ್ವಾನ್ ಪುಣ್ಯ ಪಾಪೇ ವಿಧೂಯ ನಿರಂಜನಃ
ಪುರುಷ ಸಾಮ್ಯಮುಪೈತಿ

ಎಂದು ಬ್ರಹ್ಮಬಿಂದೂಪನಿಷತ್ತುಂಟು.

**ಭಾವಾರ್ಥಬೋಧಿನಿ - ೧೦೦ :** ತರತಮಭಾವರಹಿತವಾದ ಶಿವನೊಡನೊಂದಾಗುವ ಭಕ್ತಿಯೋಗದ ಯಥಾರ್ಥವನ್ನು ತಿಳಿದುಕೊಂಡು, ಶಿವಲಿಂಗದಲ್ಲಿ ಸಹಜಸಾಮರಸ್ಯವಾಗುವುದರಿಂದುಂಟಾದ ಆನಂದಕ್ಕೆ ಆಶ್ರಯನಾದ ಶರಣನಿಗೆ ಪುಣ್ಯಪಾಪರೂಪವಾದ ಕರ್ಮಫಲದ ಭೋಗವಿಲ್ಲ. ಶರಣನಿಗೆ ಶರೀರಭಾವನೆಯು ಆದ್ಯಂತರಹಿತವಾದ ಇಂದ್ರಧನುಸ್ಸಿನ ಹಾಗೆ ತೋರಿಕೆಗೆ ಮಾತ್ರ ಕಾಣುವುದು ಎಂದರೆ ಆತನು ನಿರ್ದೇಹಿಯೆಂಬುದರ್ಥವು.

## ಉತ್ಪಲಮಾಲಾವೃತ್ತಂ

೧೦೧ ಈಪರಿ ಷಟ್‌ಸ್ಥಲಾತ್ಮಕ ವಿಶಿಷ್ಟಮಹತ್ತರ ಭಕ್ತಿಯೋಗ ವಿ
ದ್ಯಾಪರಮಾರ್ಥತತ್ವಮಯಮಪ್ಪ ಲಸಚ್ಛತಕ ಪ್ರಬಂಧಮಂ
ರೂಪಿಸಿ ಮಾಯಿದೇವವಿಭು ಲಕ್ಷಣಲಕ್ಷಿತಮಾಗಿ ಪೇಳ್ದನೊ
ಲ್ದೈಪುರಸೋಮನಾಥ ಚರಣಾಂಬುಜಷಟ್‌ಚರಣಂ ಶಿವಾಧವಾ

**ಟೀಕೆ :** ಐಪುರಸೋಮನಾಥ ............ ಚರಣಂ - ಐಪುರ - ಪಹರಾಕಾಪವೆಂಬ ಪಟ್ಟಣದ, ಸೋಮನಾಥ, ಚಿಚ್ಛಕ್ತಿವಲ್ಲಭನಾದ ಮಹಾಲಿಂಗದ, ಚರಣಾಂಬುಜ - ಪದಕಮಲದಲ್ಲಿ, ಷಟ್‌ಚರಣಂ - ತುಂಬಿಯಾದಂಥ, ಮಾಯಿದೇವವಿಭು - ಮಾಯಿದೇವನೆಂಬಾಚಾರ್ಯನು, ಈಪರಿ – ಈ ರೀತಿಯಾಗಿ, ಷಟ್‌ಸ್ಥಲ......... ಮಯಮಪ್ಪ - ಷಟ್‌ಸ್ಥಲಾತ್ಮಕ - ಷಟ್‌ಸ್ಥಲ ಸ್ವರೂಪವಾದ, ವಿಶಿಷ್ಟ - ಶ್ರೇಷ್ಠವಾದ, ಮಹತ್ತರ - ಅತ್ಯಂತಪೂಜ್ಯವಾದ, ಭಕ್ತಿಯೋಗ - ಶಿವಭಕ್ತಿಯೋಗವೆಂಬ, ವಿದ್ಯಾ - ಜ್ಞಾನದಲ್ಲಿ, ಪರಮಾರ್ಥತತ್ವಮಯಮಪ್ಪ - ಯಥಾರ್ಥಸ್ವರೂಪವಾದ, ಲಸಚ್ಛತಕಪ್ರಬಂಧಮಂ - ಲಸತ್ - ಪ್ರಕಾಶಿಸುವ, ಶತಕಪ್ರಬಂಧಮಂ – ಭಕ್ತಿಪ್ರತಿಪಾದಕವಾದ ಶತಕಗ್ರಂಥವನ್ನು, ರೂಪಿಸಿ- ಕುರುಹುಗೊಳಿಸಿ, ಲಕ್ಷಣಲಕ್ಷಿತಮಾಗಿ - ಭಕ್ತಿಯೋಗಲಕ್ಷಣಗಳಿಂ ಕಾಣಲ್ಪಟ್ಟುದನ್ನಾಗಿ, ಪೇಳ್ದಂ - ನಿರೂಪಿಸಿರ್ದನು.

### ಗದ್ಯ

ಇದು ಸಮಸ್ತಶಿವಯೋಗಿಜನಮನೋನಿಲಯ ಶ್ರೀಮನ್ನಿರಂಜನ ಲಿಂಗಚರಣಸರಸೀರುಹ ಸೌರಭಾಸಕ್ತ ಮತ್ತ ಮಧುಕರಾಯ ಮಾಣಷಟ್‌ಸ್ಥಲ ಲಿಂಗಾಂಗ

ಸಂಯೋಗಸನ್ಮಾರ್ಗಸಿದ್ಧಾಂತಸ್ಥಾಪನಾಚಾರ್ಯ ಪರಮಸುಜ್ಞಾನಸತ್ಕ್ರಿಯಾಯುಕ್ತ ಭಕ್ತಿಭರಿತಾಂತರಂಗ - ಪ್ರಣವಪೂರ್ವಕ ಪಂಚಾಕ್ಷರೀಮಂತ್ರೋಚ್ಚಾರಿತ ಮಂಜುಳಭಾಷಾವಿಲಾಸನಪ್ಪ ತೋಂಟದ ಸಿದ್ಧಲಿಂಗದೇಶಿಕನಿಂ ವಿರಚಿತಮಪ್ಪ ಶ್ರೀಮದ್ವೀರಶೈವಾಚಾರಸಾರೋದ್ಧಾರ ಭಕ್ತಿಜ್ಞಾನವೈರಾಗ್ಯಪ್ರತಿಪಾದಕ ಶತಕತ್ರಯ ಮಹಾವ್ಯಾಖ್ಯಾನದೋಳ್ ಭಕ್ತಿಪ್ರತಿಪಾದಕ ಶಿವಾಧವಶತಕಂ

**ಸಂಪೂರ್ಣಂ**

**ಭಾವಾರ್ಥಬೋಧಿನಿ – ೧೦೧ :** ಐಪುರಸೋಮನಾಥನ – ಅಥವಾ-ಚಿಚ್ಛಕ್ತಿವಲ್ಲಭನಾದ ಮಹಾಲಿಂಗದ - ಪಾದಕಮಲದಲ್ಲಿ ತುಂಬಿಯಾದ ಮಾಯಿದೇವಾಚಾರ್ಯನು ಈ ರೀತಿಯಿಂದ ಷಟ್‌ಸ್ಥಲಸ್ವರೂಪವಾದ ಮತ್ತು ಶ್ರೇಷ್ಠವೂ ಪರಮಪೂಜ್ಯವೂ ಆದ ಶಿವಭಕ್ತಿಯೋಗಕ್ಕೆ ಸಂಬಂಧಿಸಿದ ಜ್ಞಾನದ ಯಥಾರ್ಥ ಸ್ವರೂಪವನ್ನು ಪ್ರತಿಪಾದಿಸುವ ಈ ಶಿವಾಧವ ಶತಕವನ್ನು ಷಟ್‌ಸ್ಥಲಭಕ್ತಿಯೋಗದ ಲಕ್ಷಣಗಳೆಲ್ಲವೂ ಗೋಚರಿಸುವಂತೆ ರಚಿಸಿರುವನು.

ಎಂಬಲ್ಲಿಗೆ ಶಿವಾಧವಶತಕದ ಭಾವಾರ್ಥಬೋಧಿನಿಯು

**ಸಂಪೂರ್ಣವಾದುದು**



ಓಂ

# ಶಿವಾವಲ್ಲಭಶತಕಂ

## ಶಾರ್ದೂಲ ವಿಕ್ರೀಡಿತ ವೃತ್ತಂ

ಶ್ರೀ ಮಜ್ಜಾಂಭವ ಭಕ್ತಿಯೋಗವಿಲಸನ್ನಿರ್ವಾಣ ನಿತ್ಯೋತ್ಸವ
ಪ್ರೇಮಾನಂದರಸಾಬ್ಧಿ ವರ್ಧನ ಸದಾಚಾರ ಕ್ರಿಯಾ ಕೌಶಲಾ
ರಾಮೋದ್ದಾಮಗುಣ ಪ್ರಭೂತಮಹದೈಶ್ವರ್ಯಾನುಭೂತಿಪ್ರಭಾ
ಧಾಮಂ ತತ್ಪರಮಂ ಪದಂ ಗುರುಪದಂ ವಂದೇ ಶಿವಾವಲ್ಲಭಾ ೧

### ಟೀಕಾಕಾರನ ಮಂಗಳಂ

ಕಂದ || ಪರಮತರಭಕ್ತರಂತಃ
ಕರಣಮೆ ನೆಲೆದನೆ ಯದಾಗಿ ರಾಜಿಪಸಾಕ್ಷಾ
ತ್ಪರಶಿವ ನೀನೆಮಗರಿವಂ
ಕರುಣಿಪುದೊಲವಿಂದೆ ಗುರುನಿರಂಜನಲಿಂಗಾ

ಅವತಾರಿಕೆ : ಇಂತು ಮಾಯಿದೇವಾಚಾರ್ಯಂ ಭಕ್ತಿಪ್ರತಿಪಾದಕಮಾದ ಶತಕಮಂ ನಿರೂಪಿಸಿದನಂತರದಲ್ಲಿ ಜ್ಞಾನಪ್ರತಿಪಾದಕಮಾದ ಪೇಳಲುದ್ಯೋಗಿಸಿದಾತನಾಗಿ ಗ್ರಂಥಾರಂಭದಲ್ಲಿ ಶ್ರೀಗುರುನಮಸ್ಕಾರ ರೂಪಮಾದ ಮಂಗಲಾಚರಣೆಯಂ ಮಾಡುತ್ತಿರ್ಪಂ.

**ಟೀಕೆ :** ಶ್ರೀ ಮ......ಪ್ರಭಾಧಾಮಂ-ಶ್ರೀಮತ್-ಜ್ಞಾನೈಶ್ವರ್ಯವನುಳ್ಳ, ಶಾಂಭವ - ಶಿವಸಂಬಂಧಿಯಾದ, ಭಕ್ತಿಯೋಗ - ಭಕ್ತಿಯನುಕೂಲತೆಯಿಂದ, ವಿಲಸತ್-ಒಪ್ಪುತ್ತಿರ್ಪ, ನಿರ್ವಾಣ-ಮೋಕ್ಷದಲ್ಲಿ, ನಿತ್ಯ-ಕೇಡಿಲ್ಲದ, ಉತ್ಸವ-ಒಸಗೆ ಯಿಂದಾದ, ಪ್ರೇಮ-ಸ್ನೇಹದ, ಆನಂದರಸಾಬ್ಧಿ-ನಿರತಿಶಯಾನಂದ ಸಮುದ್ರದ, ವರ್ಧನ-ಪೆರ್ಚುಗೆಯುಳ್ಳ, ಸದಾಚಾರಕ್ರಿಯಾ-ಸದಾಚಾರ ವರ್ತನೆಯಲ್ಲಿ, ಕೌಶಲ ಜಾಣ್ಮೆಯಿಂ, ಆರಾಮ-ಒಪ್ಪುತ್ತಿರ್ಪ, ಉದ್ದಾಮ-ಅಧಿಕವಾದ, ಗುಣ-ಷಡ್ಗುಣಗಳಿಂ, ಪ್ರಭೂತ-ಹೆಚ್ಚಾದ, ಮಹತ್-ಘನವಾದ, ಐಶ್ವರ್ಯ-ಅಷ್ಟಮಹದೈಶ್ವರ್ಯವನುಳ್ಳ, ಅನುಭೂತಿಪ್ರಭಾ-ಜ್ಞಾನಪ್ರಭೆಗೆ, ಧಾಮಂ-ಸ್ಥಾನವಾದ, ಪರಮಂ-ಉತ್ಕೃಷ್ಟವಾದ, ಪದಂ-ಸ್ಥಾನವಾದ, ತತ್-ಹಾಂಗೆ ಪ್ರಸಿದ್ಧವಾದ,ಗುರುಪದಂ-ಶ್ರೀಗುರುಚರಣವನ್ನು, ಶಿವಾವಲ್ಲಭಾ-ಎಲೈ ಚಿಚ್ಛಕ್ತಿ ವಲ್ಲಭನೇ, ವಂದೇ-ನಮಸ್ಕರಿಸುತ್ತಿಹೆನು. ೨

**ಭಾವಾರ್ಥಬೋಧಿನಿ - ಚಿಚ್ಛಕ್ತಿವಲ್ಲಭನಾದ ಶಿವನೆ, ಶಿವಭಕ್ತಿಯೋಗದಿಂದ ಶೋಭಿಸುವ ಮುಕ್ತಿಯಲ್ಲಿರುವ ನಿತ್ಯೋತ್ಸವರೂಪವಾದ ಪ್ರೇಮದ ಆನಂದರಸಾಬ್ಧಿ ವರ್ಧನೆಯುಳ್ಳ ಸದಾಚಾರಾನುಷ್ಠಾನದಲ್ಲಿ ಜಾಣ್ಮೆಯಿಂದೊಪ್ಪುವ ಶ್ರೇಷ್ಠಗುಣ ದಿಂದೊದಗಿದ ಮಹದೈಶ್ವರ್ಯವುಳ್ಳ ಶಿವಾನುಭವದ ಪ್ರಭೆಗೆ ಆಶ್ರಯವಾಗಿರುವ ಶ್ರೇಷ್ಠತರವಾದ ಗುರುಪಾದವನ್ನು ವಂದಿಸುವೆನು. ಹೀಗೆಂದು ಶ್ರೀಮಾಯಿ ದೇವನು ಶ್ರೀಗುರುನಮಸ್ಕಾರರೂಪವಾದ ಮಂಗಳಾಚರಣವನ್ನು ಮಾಡಿರು ವನು. ೧**

**ಅವತಾರಿಕೆ : ಇಂತು ಆಚಾರ್ಯಂ ತನ್ನ ಗುರುನಮಸ್ಕಾರವಂ ಮಾಡಿ, ತದನಂತರದಲ್ಲಿ ಇಷ್ಟದೇವತೆಯಪ್ಪ ಐಪುರದ ಸೋಮೇಶ್ವರನಂ ಸ್ತುತಿಸುತಿರ್ದಪಂ.**

**ಶಾರ್ದೂಲ ವಿಕ್ರೀಡಿತ ವೃತ್ತಂ**

ಸಚ್ಚಿದ್ರೂಪ ಸುಖಾಕೃತಿ ಪ್ರಕೃತಿಸಿದ್ಧ ಪ್ರಸ್ಫುರತ್ ಪ್ರತ್ಯಯೋ
ದ್ಯಚ್ಚೈತನ್ಯ ಕಳಾಪ್ರಶಸ್ತ ಪರಿಪೂರ್ಣಾದ್ಯಂತವರ್ಜಾತ್ಮ ಭಾ
ವೋಚ್ಚಾವಸ್ಥಿತದಿವ್ಯಲಿಂಗಘನತೇಜೋಧಾಮಸೋಮೇಶ್ವರಂ
ಮಚ್ಚಿತ್ತೈಪುರವಾಸಿನಂ ಪ್ರತಿಭಜಾಮಿ ತ್ವಾಂ ಶಿವಾವಲ್ಲಭಾ ೨

**ಟೀಕೆ :** ಸಚ್ಚಿದ್ರೂಪ......ಕಳಾಪ್ರಶಸ್ತ-ಸಚ್ಚಿದ್ರೂಪ-ಸತ್ಯಜ್ಞಾನಸ್ವರೂಪನಾದ, ಸುಖಾಕೃತಿ-ಆನಂದಸ್ವರೂಪನಾದ, ಪ್ರಕೃತಿ-ಸ್ವಭಾವದಿಂ, ಸಿದ್ಧ-ಪ್ರಸಿದ್ಧವಾದ, ಪ್ರಸ್ಫುರತ್-ಮಿಗೆಬೆಳಗುತ್ತಿರ್ಪ, ಪ್ರತ್ಯಯ-ಜ್ಞಾನದಿಂ, ಉದ್ಯತ್-ಪೊರಪೊಣ್ಮುತ್ತಿರ್ಪ, ಚೈತನ್ಯಕಳಾ-ಚಿಚ್ಛಕ್ತಿಯಿಂ, ಪ್ರಶಸ್ತ-ಪ್ರಸಿದ್ಧನಾದ, ಪರಿಪೂರ್ಣ-ಅಖಂಡಿತನಾದ, ಆದ್ಯಂತವರ್ಜ-ತುದಿಮೊದಲಿಲ್ಲದ, ಆತ್ಮಭಾವ-ಪರಮಾತ್ಮಸ್ವರೂಪನಾದ, ಉಚ್ಚಾವಸ್ಥಿತ-ಎಲ್ಲವಕ್ಕೂ ಉಪರಿಯಾಗಿರ್ಪ, ದಿವ್ಯಲಿಂಗ-ಮನೋಹರವಾದ ನಿಷ್ಕಳಲಿಂಗವಾದ, ಘನತೇಜೋಧಾಮ-ಮಹಾಪ್ರಕಾಶಕ್ಕೆ ಸ್ಥಾನವಾದ (ಧಾಮನ್ ಶಬ್ದವು ನಕಾರಾಂತವಾಗಿ, ಸಂಬುದ್ಧಿಯಲ್ಲಿ "ನಲೋಪಃ ಪ್ರಾತಿಪದಿಕಾಂತಸ್ಯ" ಎಂಬ ಸೂತ್ರದಿಂ ಪ್ರತಿಷೇಧಂಬರಲಾಗಿ "ವಾನಪುಂಸಕಾನಾಮಿತಿವಕ್ತವ್ಯಂ" ಎಂಬುಪಸಂಖ್ಯಾನದಿಂ ನಕಾರಲೋಪವು ವೈಕಲ್ಪಿಕವೆಂದರಿವುದು). ಭೋ ಶಿವಾವಲ್ಲಭಾ-ಎಲೆ ಜ್ಞಾನ ಶಕ್ತಿವಲ್ಲಭನಾದ ಶಿವನೆ, ಮಚ್ಚಿತ್ತೈಪುರವಾಸಿನಂ- ಎನ್ನ ಚಿತ್ತವೆಂಬ ಪಟ್ಟಣದಲ್ಲಿ ನೆಲೆಗೊಂಡಿರ್ಪ, ಸೋಮೇಶ್ವರಂ-ಕೋಟಿಚಂದ್ರ ಪ್ರಕಾಶವನುಳ್ಳ, ತ್ವಾಂ ಪ್ರತಿ-ನಿನ್ನನ್ನು ಕುರಿತು, ಭಜಾಮಿ ಸೇವಿಸುತ್ತಿಹೆನು. ೨

**ಭಾವಾರ್ಥಬೋಧಿನಿ** – ಸತ್ಯಜ್ಞಾನಾನಂದಸ್ವರೂಪನೂ, ಸ್ವಭಾವಸಿದ್ಧವಾದ ಪ್ರಕಾಶಮಯ ಜ್ಞಾನದಿಂದ ಪೊರಪೊಣ್ಮುವ ಚಿಚ್ಛಕ್ತಿಯಿಂದ ಕೂಡಿದವನೂ, ಪರಿಪೂರ್ಣನೂ, ಆದ್ಯಂತರಹಿತನೂ, ಪರಮಾತ್ಮಸ್ವರೂಪನೂ, ಸರ್ವೋಪರಿಸ್ಥಿತನೂ, ಮನೋಹರ ನಿಷ್ಕಲ ಲಿಂಗರೂಪನೂ, ಮಹಾತೇಜೋಧಾಮನೂ ಆದ ಶಿವಾವಲ್ಲಭನೆ, ನನ್ನ ಚಿತ್ತವೆಂಬ ಐಪುರದಲ್ಲಿ ನೆಲೆಗೊಂಡಿರುವ ಸೋಮೇಶ್ವರನಾದ (ಕೋಟಿಚಂದ್ರ ಪ್ರಕಾಶವನುಳ್ಳ) ನಿನ್ನನ್ನು ಸೇವಿಸುತ್ತಿರುವೆನು. ೨

ವಿಚಾರ : ಈನೆಯ ಪದ್ಯದಲ್ಲಿ ಮಾಯಿದೇವನು ತನ್ನ ವಾಸಸ್ಥಲವಾದ ಐಪುರದ (ಐವಳ್ಳಿಯ) ಸೋಮೇಶ್ವರನ ಹೆಸರಿನಿಂದ ತನ್ನ ಇಷ್ಟಲಿಂಗವನ್ನೇ ಸ್ತೋತ್ರಮಾಡಿರುವನೆಂದು ವೀರಶೈವ ತತ್ವಜ್ಞರ ಅಭಿಪ್ರಾಯವಿರುವುದು.

ಅವತಾರಿಕೆ : ಇಂತು ಆಚಾರ್ಯರ್ಂ ಸ್ವೇಷ್ಟದೇವತಾನಮಸ್ಕಾರಮಂ ಮಾಡಿ ಸಂಪ್ರದಾಯ ಪ್ರವರ್ತಕರಾದ ಪ್ರಭುದೇವರಂ ಸ್ತುತಿಸುತಿರ್ದಪಂ—

**ಮತ್ತೇಭವಿಕ್ರೀಡಿತಂ**

ವೃಷಭೇಶಂ ಚೆನನಾಮಧೇಯ ವೃಷಭಾಚಾರ್ಯಂ ಗುಹೇಶಾಹ್ವಯಾ
ಭಿಷವಾಲಂ ಪರಿಪೂರ್ಣ ವಾಚಕಲಸದ್ವಾಚ್ಯ ಸ್ವರೂಪಪ್ರದ
ದ್ವಿಷಯಾಖ್ಯ ಪ್ರಭುದೇವದೇವನೆಮಗೀಗಿಷ್ಟಾರ್ಥ ಸಿದ್ಧಿಸ್ಪೃಹಾ
ಸುಷಿರಾಪೂರಣಕೃತ್ಪ್ರಸಾದಸುಖಮಂ ನಿತ್ಯಂ ಶಿವಾವಲ್ಲಭಾ ೩

**ಟೀಕೆ :** ವೃಷಭೇಶಂ-ಬಸವೇಶ್ವರಂಗೆ ಒಡೆಯನಾದ, ಚೆನನಾಮಧೇಯ ವೃಷಭಾಚಾರ್ಯಂ-ಚೆನ್ನ ಎಂಬ ಪೆಸರುಳ್ಳ ಬಸವೇಶ್ವರಂಗೆ ಆಚಾರ್ಯನಾದ, ಗುಹೇಶಾಹ್ವಯಾಭಿಷವಾಲಂ-ಗುಹೇಶಾಹ್ವಯ-ಗುಹೇಶ್ವರನೆಂಬ ಪೆಸರುಳ್ಳ ಲಿಂಗದ, ಅಭಿಷವ-ಸಂಧಾನದಲ್ಲಿ, ("ಸಂಧಾನಂ ಸ್ಯಾದಭಿಷವಂ" ಎಂದಮರಶೇಷವುಂಟು), ಅಲಂ-ಸಾಮರ್ಥ್ಯವನುಳ್ಳ (" ಅಲಂ ಭೂಷಣಪರ್ಯಾಪ್ತಿ ಶಕ್ತಿವಾರಣವಾಚಕಂ " ಎಂದವ್ಯಯ ಕಾಂಡಮುಂಟಾಗಿ), ಪರಿಪೂರ್ಣ-ಅಖಂಡಿತವಾದ, ವಾಚಕ-ಶಬ್ದಂಗಳ, ಲಸತ್-ಒಪ್ಪುತ್ತಿರುವ, ವಾಚ್ಯ-ಅರ್ಥಂಗಳ, ಸ್ವರೂಪ-ಮಾರ್ಗವನ್ನು, ಪ್ರದತ್-ಕೊಡುತ್ತಿರ್ಪ, ವಿಷಯ-ದೇಶಂಗಳಾದ ವೇದಶಾಸ್ತ್ರಪುರಾಣಂಗಳಲ್ಲಿ ("ನೀವೃಜ್ಜನಪದೌದೇಶ ವಿಷಯೌತೂಪವರ್ತನಂ" ಎಂದಮರ ನಿಘಂಟು) ಪ್ರಭುದೇವದೇವಂ-ಪ್ರಭುಸ್ವಾಮಿಯೆಂಬ ಸ್ವಯಂ ಪ್ರಕಾಶವು, ಎಮಗೆ-ಭಕ್ತರಾವಂಥ ನಮಗೆ, ಇಷ್ಟಾರ್ಥ......... ಸುಖಮಂ-ಇಷ್ಟಾರ್ಥಸಿದ್ಧಿ-ಲಿಂಗಾಂಗಸಮರಸಾನಂದಸಿದ್ಧಿಯ, ಸ್ಪೃಹಾ-ಅಭಿಲಾಷೆಯೆಂಬ, ಸುಷಿರ-ದ್ವಾರವ, ಆಪೂರಣಕೃತ್-ಪರಿಪೂರ್ತಿಯಂ ಮಾಡುತ್ತಿರ್ಪ, ಪ್ರಸಾದಸುಖಮಂ-ಪ್ರಸನ್ನತೆಯ ಪರಿಣಾಮವನ್ನು, ನಿತ್ಯಂ-ಎಲ್ಲಾಗಳೂ, ಈಗೆ-ಕೊಡಲಿ. ೩

**ಭಾವಾರ್ಥಬೋಧಿನಿ** – ಬಸವಣ್ಣನ ಒಡೆಯನೂ, ಚೆನ್ನಬಸವಣ್ಣನ ಆಚಾರ್ಯನೂ ಆಗಿ, ಮತ್ತು ಗುಹೇಶ್ವರಲಿಂಗಾನುಸಂಧಾನದಲ್ಲಿ ಸಮರ್ಥನೂ ಪರಿಪೂರ್ಣಶಬ್ದಾರ್ಥಸ್ವರೂಪಪ್ರತಿಪಾದಕ ವೇದಾಗಮಾದಿಗಳ ಜ್ಞಾನದಲ್ಲಿ ಪ್ರಸಿದ್ಧನೂ ಆದ ಪ್ರಭುದೇವರೆಂಬ ದೇವನು ನಮ್ಮ ಲಿಂಗಾಂಗಸಮರಸಾನಂದ ಸಿದ್ಧಿಯ ಅಪೇಕ್ಷೆಯನ್ನು ಪೂರೈಸುವ ಪ್ರಸಾದಸುಖವನ್ನು ಯಾವಾಗಲೂ ಉಂಟು ಮಾಡಲಿ. ೩

**ವಿಚಾರ :** ಮಾಯಿದೇವರು ೧ನೆಯ-೨ನೆಯ-೩ನೆಯ ಪದ್ಯಗಳಲ್ಲಿ ಕ್ರಮವಾಗಿ ಗುರು-ಲಿಂಗ-ಜಂಗಮ-ರೂಪರಾದ ತ್ರಿಮೂರ್ತಿಗಳನ್ನು ಸ್ತೋತ್ರ ಮಾಡಿರುವನೆಂಬುದನ್ನು ಗ್ರಹಿಸಬೇಕು.

**ಅವತಾರಿಕೆ :** ಇನ್ನು ಆಚಾರ್ಯರ್ಂ ಲಿಂಗಾಂಗಸಾಮರಸ್ಯ ರೂಪವಾದ ಮಹಾಜ್ಞಾನಮಂ ಪ್ರತಿಪಾದಿಸುತ್ತಿರ್ಪಂ

**ಶಾರ್ದೂಲ ವಿಕ್ರೀಡಿತ ವೃತ್ತಂ**

ಭಕ್ತಿಜ್ಞಾನಪರಾನುಭೂತಿಪರಿಣಾಮಾನಂದ ಕಂದಾಂಕುರಂ
ವ್ಯಕ್ತಾವ್ಯಕ್ತ ಗುಣಾತಿರಿಕ್ತ ಶಿವಯೋಗೋದ್ಯತ್ಫಲಾಸ್ವಾದನೋ
ದ್ಯುಕ್ತಾನಾದಿವಿಮುಕ್ತ ಷಟ್ಸ್ಥಲಪದಾದ್ವೈತಾಂಗಲಿಂಗಾನುಭಾ
ವೋಕ್ತಾರ್ಥಂ ನಿಜಮಕ್ಕೆ ನಿನ್ನ ಕೃಪೆಯಿಂದೆನ್ನೊಳ್ಶಿವಾವಲ್ಲಭಾ ೪

**ಟೀಕೆ :** ಭೋ ಶಿವಾವಲ್ಲಭಾ - ಎಲೈ ಪಾರ್ವತೀ ರಮಣನೇ, ಭಕ್ತಿ...... ಕುರಂ - ಭಕ್ತಿಜ್ಞಾನ - ಬಾಹ್ಯಾಭ್ಯಂತರಭಕ್ತಿಯ ವಿಚಾರವೆಂಬ, ಪರ - ಉತ್ಕೃಷ್ಟವಾದ, ಅನುಭೂತಿ – ಮಹಾಜ್ಞಾನದಲ್ಲಿ, ಪರಿಣಾಮ – ಪರಿಣಮಿಸುವಂಥ, ಆನಂದ - ಸುಖವೆಂಬ, ಕಂದಾಂಕುರಂ - ಗೆಣಸುಮೊಳೆಕೆಗಳುಳ್ಳ (ಭಕ್ತಿಯೇ ಗೆಣಸು, ಜ್ಞಾನವೇ ಅಂಕುರವೆಂಬುದರ್ಥಂ) ವ್ಯಕ್ತಾ......... ಭಾವೋಕ್ತಾರ್ಥಂ- ವ್ಯಕ್ತಾವ್ಯಕ್ತ, ಗುಣ - ಸಗುಣನಿರ್ಗುಣಂಗಳತ್ತಣಿಂ, ಅತಿರಿಕ್ತ - ಮೀರಿದ, ಶಿವಯೋಗ - ಶಿವಧ್ಯಾನವೆಂಬ, ಉದ್ಯತ್ಫಲ - ಪುಟ್ಟುತ್ತಿರ್ಪ ಫಲದ, ಆಸ್ವಾದನ- ಸವಿಯಲ್ಲಿ, ಉದ್ಯುಕ್ತ - ಉದ್ಯೋಗವನುಳ್ಳ, ಅನಾದಿವಿಮುಕ್ತ - ಮಾಯೆಯಿಂ ಬಿಡಲ್ಪಟ್ಟ, ಷಟ್ಸ್ಥಲಪದ - ಷಟ್ಸ್ಥಲಮಾರ್ಗದಲ್ಲಿ, ಅದ್ವೈತ - ಭಿನ್ನವಿಲ್ಲದ, ಅಂಗಲಿಂಗಾನುಭಾವ - ಅಂಗಲಿಂಗಸಂಬಂಧಜ್ಞಾನದಿಂ, ಉಕ್ತ - ಪೇಳಲ್ಪಟ್ಟ, ಅರ್ಥಂ - ಪ್ರಯೋಜನವು, ನಿನ್ನ ಕೃಪೆಯಿಂದೆ - ನಿನ್ನ ಕಾರುಣ್ಯದಿಂದೆ, ಎನ್ನೊಳ್ - ನನ್ನಲ್ಲಿ, ನಿಜಂ - ಸಹಜವಾಗಿ, ಅಕ್ಕೆ - ಆಗಲಿ ೪

**ಭಾವಾರ್ಥಬೋಧಿನಿ :** ಪಾರ್ವತೀ ಪತಿಯೆ, ಶಿವಭಕ್ತಿಯ ಅನುಭವದಿಂದ ಪರಿಣಮಿಸುವ ಆನಂದವೆಂಬ ಗಡ್ಡೆ, ಮತ್ತು ಶಿವಭಕ್ತಿಗೆ ಸಂಬಂಧಿಸಿದ ಜ್ಞಾನಾನು

ಭವದಿಂದ ಪರಿಣಮಿಸುವ ಆನಂದವೆಂಬ ಮೊಳಕೆ ಇವೆರಡುಳ್ಳುದಾಗಿಯೂ ಸಗುಣ ನಿರ್ಗುಣಗಳಿಗೆ ಮೀರಿದ ಶಿವಯೋಗದ ಫಲದ ಭೋಗದಲ್ಲಿ ಆಸಕ್ತಿಯುಳ್ಳುದಾಗಿಯೂ ಇರುವ ಮಾಯಾದೂರವಾದ ಷಟ್‌ಸ್ಥಲಮಾರ್ಗದಲ್ಲಿರುವ ಭೇದರಹಿತವಾದ ಲಿಂಗಾಂಗಾನುಭವದ ಫಲವು ನಿನ್ನ ಕೃಪೆಯಿಂದ ನನ್ನಲ್ಲಿ ಸಹಜವಾಗಿ ನೆಲಸಲಿ. ೪

**ಶಾರ್ದೂಲ ವಿಕ್ರೀಡಿತ ವೃತ್ತಂ**

ಅಂಗಂ ತ್ವಂಪದ ಮಾತ್ಮರೂಪಮಮಲಂ ಲಿಂಗಂ ಶಿವಂ ತತ್ಪದಂ
ಸಂಗಂ ಸತ್ಯ ಮಸಿಪ್ರಸಿದ್ಧಪದ ಮೆಂಬೀತತ್ತ್ವ ಮಸ್ಯರ್ಥದಿಂ
ಲಿಂಗಾಂಗೈಕ್ಯವಿಶಿಷ್ಟ ಜೀವಪರಮೈಕ್ಯಾಭಿನ್ನಭಾವ ಪ್ರಸಾ
ದಾಂಗೀಕಾರ ಮದಕ್ಕೆ ನಿನ್ನ ಕೃಪೆಯಿಂದೆನ್ನೊಳ್ಶಿವಾವಲ್ಲಭಾ ೫

**ಟೀಕೆ** . ಭೋ ಶಿವಾವಲ್ಲಭಾ - ಎಲೈ ಪಾರ್ವತೀರಮಣನೆ, ಅಂಗಂ - ಅಂಗವೆನಲಾಗಿ, ತ್ವಂಪದಂ - ತ್ವಂಪದವಾಚ್ಯಾರ್ಥವಾದ, ಆತ್ಮರೂಪಂ - ಜೀವಾತ್ಮ ಸ್ವರೂಪವು, ಅಮಲಂ - ನಿರ್ಮಲವಾದ, ಲಿಂಗಂ - ಲಿಂಗವೆನಿಸುವಂಥ, ಶಿವಂ- ಶಿವನು, ತತ್ಪದಂ - ತತ್ಪದವಾಚ್ಯಾರ್ಥವು, ಸಂಗಂ - ಸಂಬಂಧವು, ಸತ್ಯಂ- ಯಥಾರ್ಥವಾಗಿ, ಅಸಿಪ್ರಸಿದ್ಧಪದಂ - ಅಸಿಯೆಂಬ ಪ್ರಸಿದ್ಧಪದವಾಚ್ಯಾರ್ಥವು, ಎಂಬ - ಹೀಗೆಂಬ, ಈ ತತ್ತ್ವಮಸ್ಯರ್ಥದಿಂ - ಈ ತತ್ತ್ವಮಸಿಯೆಂಬ ಮಹಾ ವಾಕ್ಯಾರ್ಥದಿಂ, ಲಿಂಗಾಂಗೈಕ್ಯ – ಲಿಂಗಾಂಗಸಂಬಂಧವೆಂಬ, ವಿಶಿಷ್ಟ - ಅಧಿಕತರ ವಾದ, ಜೀವಪರಮೈಕ್ಯ - ಶಿವಜೀವರಕೂಟವಲ್ಲಿ, ಅಭಿನ್ನಭಾವ - ಭೇದಭಾವವಿಲ್ಲದ, ಪ್ರಸಾದ - ಪ್ರಸನ್ನತೆಯು, ಅಂಗೀಕಾರಂ - ಸ್ವೀಕಾರವು, ಅದು - ತಾನು, ನಿನ್ನ ಕೃಪೆಯಿಂದ - ನಿನ್ನ ಕಾರುಣ್ಯದಿಂದೆ, ಎನ್ನೊಳ್ - ನನ್ನಲ್ಲಿ, ಅಕ್ಕೆ - ಆಗಲಿ ೪

**ಭಾವಾರ್ಥಬೋಧಿನಿ :** ಶಿವೆಯ ವಲ್ಲಭನೆ, ಅಂಗನೆಂಬುದು 'ತ್ವಂ, ಪದದ ಅರ್ಥವೆನಿಸಿದ ಜೀವಾತ್ಮನು. (ದೀಕ್ಷೆಯಿಂದ ಶುದ್ಧನಾದವನು) ಲಿಂಗವೆಂಬುದು 'ತತ್, ಪದದ ಅರ್ಥವೆನಿಸಿದ ಶಿವನು. ಸಂಗವೆಂಬುದು 'ಅಸಿ, ಪದದ ಅರ್ಥವೆನಿಸಿದ ಸಂಬಂಧವಾಗಿರುವುದು ಹೀಗೆ - "ತತ್ತ್ವಮಸಿ„ ಎಂಬ ಮಹಾವಾಕ್ಯದ ಅರ್ಥವೇ ಲಿಂಗಾಂಗಸಂಬಂಧವೆನಿಸಿಕೊಂಡಿರುವ ಪರತರವಾದ ಜೀವಶಿವಸಾಮರಸ್ಯದಲ್ಲಿ

ಜನಿಸುವ ಅಭೇದ ಪ್ರಸನ್ನತೆಯ ಅಂಗೀಕಾರವು ನಿನ್ನ ಕರುಣದಿಂದ ನನ್ನಲ್ಲಿ ಉಂಟಾಗಲಿ. ೫

**ವಿಚಾರ :** ಲಿಂಗಾಂಗಸಾಮರಸ್ಯವೇ "ತತ್ತ್ವಮಸಿ" ಎಂಬ ಮಹಾವಾಕ್ಯದರ್ಥವಿರುವುದೆಂದು ಗ್ರಂಥಕಾರನ ಅಭಿಪ್ರಾಯವಿರುವುದು. ಈ ಅಭಿಪ್ರಾಯವನ್ನೇ ಶಿವಾಧವಶತಕದಲ್ಲಿಯೂ ತನ್ನಿಂದ ಸಂಸ್ಕೃತದಲ್ಲಿ ರಚಿತವಾದ ಶಿವಾನುಭವ ಸೂತ್ರದಲ್ಲಿಯೂ ವಿಸ್ತಾರವಾಗಿ ಸಮರ್ಥಿಸಿರುವನು.

**ಅವತಾರಿಕೆ :** ಇಂತು ಶರಣನ ಮಹಾಜ್ಞಾನಮಂ ಪ್ರಾರ್ಥಿಸಿದನಂತರದಲ್ಲಿ ಪುಣ್ಯಕ್ಷೇತ್ರ ಪುಣ್ಯತೀರ್ಥಂಗಳ ಭ್ರಾಂತಿಯಂ ಶಿವಜ್ಞಾನಕ್ಕೆ ದೂರವೆಂದು ಖಂಡಿಸುತ್ತಿರ್ದಪಂ—

**ಮತ್ತೇಭವಿಕ್ರೀಡಿತಂ**

ಗಿರಿವಾರಾಣಸಿಹೇಮಕೂಟ ಹಿಮಸೇತು ಕ್ಷೇತ್ರ ತೀರ್ಥಂಗಳಂ
ಪರಿದೈದಿ ಸ್ವವಿಮೋಹದಿಂ ಸುಕೃತದಾಪೇಕ್ಷಿತ್ವಮಂ ತಾಳ್ದು ಸಂ
ಚರಿಸುತ್ತಕ್ಕಟ ಮತ್ತೆ ಮಿಕ್ಕ ನೆಲನೀರೊಳ್ಮಾಳ್ಪ ದುಷ್ಕರ್ಮಮಂ
ನರರಾಸ್ಥಾನದೊಳಂಜದೇಕೆ ಭವಿಗಳ್ಮಾಳ್ಪರ್ಶಿವಾವಲ್ಲಭಾ ೬

**ಟೀಕೆ :** ಭವಿಗಳ್-ಸಂಸಾರಭ್ರಾಂತಿಯುಳ್ಳ, ನರರ್-ಮನುಷ್ಯರು, ಗಿರಿ... ತೀರ್ಥಂಗಳಂ-ಗಿರಿ-ಶ್ರೀಗಿರಿಯು, ವಾರಾಣಸಿ-ಕಾಶೀಕ್ಷೇತ್ರವು, ಹೇಮಕೂಟ-ಪಂಪಾಕ್ಷೇತ್ರವು, ಹಿಮಸೇತು-ರಾಮೇಶ್ವರವೆಂಬ ಕ್ಷೇತವು, ಇವು ಮೊದಲಾದ, ಕ್ಷೇತ್ರ-ಕ್ಷೇತ್ರಗಳನ್ನು, ತೀರ್ಥಂಗಳಂ-ಪಾತಾಳಗಂಗೆ, ಭಾಗೀರಥಿ, ತುಂಗಭದ್ರೆ, ಧನುಷ್ಕೋಟಿಯೆಂಬ ತೀರ್ಥಂಗಳನ್ನು ಕುರಿತು, ಸ್ವಮೋಹದಿಂ-ತಮ್ಮ ಅಜ್ಞಾನದಿಂದೆ, ಪರಿದೈದಿ-ಶೀಘ್ರದಿಂದಪೋಗಿ, ಸುಕೃತದ-ಪುಣ್ಯದ, ಅಪೇಕ್ಷಿತ್ವಮಂ-ಬಯಕೆಯನ್ನು, ತಾಳ್ದು-ಉಂಟುಮಾಡಿಕೊಂಡು, ಸಂಚರಿಸುತ್ತೆ-ಎಡೆಯಾಡುತ್ತೆ, ಮತ್ತೆ-ಮರಳಿ, ಮಿಕ್ಕ-ಉಳಿದ, ನೆಲನೀರೊಳ್-ಭೂಮಿಯ ಜಲದಲ್ಲಿ, ಮಾಳ್ಪ-ಮಾಡುವಂಥ, ದುಷ್ಕರ್ಮಮಂ-ದುಷ್ಕೃತವಾದ ವ್ಯಾಪಾರವನ್ನು, ಆಸ್ಥಾನದೊಳ್-ಆ ಕ್ಷೇತ್ರ ತೀರ್ಥಸ್ಥಾನದಲ್ಲಿ, ಅಂಜದೆ-ಭಯವಿಲ್ಲದೆ, ಏಕೆ ಮಾಳ್ಪರ್-ಏಕೆ ಮಾಡುವರೊ? ಅಕ್ಕಟ-ಅಯ್ಯೋ! ೬

**ಭಾವಾರ್ಥಬೋಧಿನಿ** - ಸಂಸಾರಭ್ರಾಂತರಾದ ಮನುಷ್ಯರು ಪುಣ್ಯಸಂಪಾದನೆಯ ಅಪೇಕ್ಷೆಯಿಂದ ಶ್ರೀಗಿರಿ, ಕಾಶಿ, ಹಂಪೆ, ರಾಮಸೇತು ಮೊದಲಾದ ಕ್ಷೇತ್ರಗಳಿಗೆ ಮತ್ತು ಆ ಕ್ಷೇತ್ರಗಳಲ್ಲಿರುವ ಪಾತಾಳಗಂಗೆ, ಭಾಗೀರಥಿ, ತುಂಗಭದ್ರೆ, ಧನುಷ್ಕೋಟಿ ಮೊದಲಾದ ತೀರ್ಥಗಳಿಗೆ ಶೀಘ್ರದಿಂದ ಹೋಗಿ, ಕ್ಷೇತ್ರ ತೀರ್ಥಂಗಳಲ್ಲದ ನೆಲನೀರುಗಳಲ್ಲಿ ಮಾಡತಕ್ಕ ದುಷ್ಟವಾದ ಕಾರ್ಯಗಳನ್ನು ಅಜ್ಞಾನದಿಂದ ಅಯ್ಯೋ! ಆ ಪುಣ್ಯಸ್ಥಲಗಳಲ್ಲಿಯೇ ಅಂಜದೆ ಅದೇಕೆ ಮಾಡುವರು ? ೬

**ಮತ್ತೇಭವಿಕ್ರೀಡಿತಂ**

ಭರದಿಂ ಪಾವನತೀರ್ಥಮೆಂದು ಬಗೆದಂದಾಸರ್ವತೋಯಂಗಳೊ
ಳ್ನರರಾ ತೀರ್ಥದೊಳಾಹ ಮಿಕ್ಕ ಜಲದೊಳ್ಮಾಳ್ಪಂತೆ ವಿಣ್ಮೂತ್ರದು
ಶ್ಚರಿತೋಚ್ಛಿಷ್ಟಮಲಾಂಗಮಂ ತೊಳೆದು ಪಾಪಂಗೆಯ್ದು ನಿಷ್ಕಾರಣಂ
ನಿರಯಕ್ಕೇತಕೆ ಪೋಪರಯ್ಯೊ ಭವಿಗಳ್ಪೇಳಾ ಶಿವಾವಲ್ಲಭಾ ೭

**ಟೀಕೆ** : ಭವಿಗಳ್ - ಭವಿಗಳಾದ, ನರರ್ - ಮನುಷ್ಯರು, ಸರ್ವತೋಯಂಗಳೊಳ್ - ಸಮಸ್ತವಾದ ಉದಕಂಗಳಲ್ಲಿ (ಒಂದು ತಾಣದ ಉದಕವನ್ನು) ಭರದಿಂ - ಬೇಗದಿಂದೆ, ಪಾವನತೀರ್ಥಮೆಂದು - ಪುಣ್ಯತೀಥಮೆಂದು, ಬಗೆದು- ಭಾವಿಸಿ, ಆ ತೀರ್ಥದೊಳ್ - ಆ ಜಲದಲ್ಲಿ, ಮಿಕ್ಕಜಲದೊಳ್ - ಉಳಿದ ಸಾಮಾನ್ಯ ಜಲದಲ್ಲಿ, ಮಾಳ್ಪಂತೆ-ಮಾಡುವಂತೆ, ವಿಣ್ಮೂತ್ರದುಶ್ಚರಿತೋಚ್ಛಿಷ್ಟ ಮಲಾಂಗಮಂ- ವಿಣ್ಮೂತ್ರ - ಮಲಮೂತ್ರಗಳಿಂದ, ದುಶ್ಚರಿತ - ಪಾಪವರ್ತನೆಯುಳ್ಳ, ಉಚ್ಛಿಷ್ಟ- ಅಪವಿತ್ರಸ್ವರೂಪವಾದ, ಮಲಾಂಗಮಂ - ಮಲಶರೀರವನ್ನು, ತೊಳೆದು - ನಿರಯಕ್ಕೆ - ನರಕಕ್ಕೆ, ಏತಕ್ಕೆಪೋಪರ್ - ಏತಕ್ಕೆ ಪೋಗುವರು ? ಅಯ್ಯೊ- ಅಕ್ಕಟ, ಆಹಾ - ಆಶ್ಚರ್ಯವಲಾ. ೭

**ಭಾವಾರ್ಥಬೋಧಿನಿ** : ಭವಿಗಳಾದ ಮನುಷ್ಯರು ನೀರುಗಳಲ್ಲಿ, ಒಂದೊಂದು ಸ್ಥಲದ ನೀರನ್ನು ಪುಣ್ಯತೀರ್ಥವೆಂದು ಬಗೆದು, ಆ ಪುಣ್ಯತೀರ್ಥದಲ್ಲಿ ಮಿಕ್ಕ ಸಾಮಾನ್ಯಜಲದಲ್ಲಿ ಮಾಡಿಕೊಳ್ಳುವಂತೆ ಮಲಮೂತ್ರಗಳಿಂದ ಅಪವಿತ್ರವಾದ ಮಲಾಂಗವನ್ನು ಪ್ರಕ್ಷಾಲನಮಾಡಿಕೊಂಡು, ಪಾಪವಂ ಮಾಡಿ, ನಿಷ್ಕಾರಣವಾಗಿ ನರಕಕ್ಕೆ ಹೋಗುವರೇಕೆ ? ಅಯ್ಯೋ; ಇದಾಶ್ಚರ್ಯ. ೭

## ಶಾರ್ದೂಲ ವಿಕ್ರೀಡಿತ ವೃತ್ತಂ

ಕ್ಷೇತ್ರಜ್ಞಾನವಿಹೀನ ರಕ್ಕಟ ಮಹೀಭಾಗಂಗಳೊಳ್ಪಾವನಂ
ಕ್ಷೇತ್ರಂ ತಾನಿದು ಸೇವ್ಯಮೆಂದು ಬಗೆದೊಂದಂ ತಮ್ಮದುರ್ಮೋಹದಿಂ
ಮೂತ್ರೋಚ್ಛಿಷ್ಟಪುರೀಷವಿಚ್ಯುತಿಗಳಂ ಮತ್ತಲ್ಲಿಯೇ ಮಾಳ್ಪರಾ
ಯಾತ್ರಾ ಶೋಪಹತರ್ಕಳಪ್ಪ ಭವಿಗಳ್ನೋಡಾ ಶಿವಾವಲ್ಲಭಾ ೮

**ಟೀಕೆ :** ಕ್ಷೇತ್ರ ಜ್ಞಾನವಿಹೀನರ್ - ಕ್ಷೇತ್ರ ವಿಚಾರವಿಲ್ಲದವರಾದ, ಯಾತ್ರಾಶೋಪಹತರ್ಕಳ್ - ಯಾತ್ರ - ತೀರ್ಥಯಾತ್ರೆಗಳಲ್ಲಿ, ಆಶಾ - ಅಪೇಕ್ಷೆಯಿಂ, ಉಪಹತರ್ಕಳಪ್ಪ - ಕೆಟ್ಟಂಥವರುಗಳಾದ, ಭವಿಗಳ್ - ಅಜ್ಞಾನಿಗಳು, ಮಹೀಭಾಗಂಗಳೊಳ್ - ಭೂಮಂಡಲದಲ್ಲಿ, ಒಂದಂ - ಒಂದುಸ್ಥಾನವನ್ನು, ಪಾವನಕ್ಷೇತ್ರಂ-ಪುಣ್ಯಕ್ಷೇತ್ರವು, ತಾಂ - ತಾನು, ಇದು - ಇದೀಗ, ಸೇವ್ಯಮೆಂದು - ಸೇವಿಸಲ್ತಕ್ಕದೆಂದು, ಬಗೆದು - ಭಾವಿಸಿ,ತಮ್ಮ ದುರ್ಮೋಹದಿಂ - ಬೆಂದ ತಮ್ಮ ಅಜ್ಞಾನದಿಂದೆ ಮತ್ತೆ - ಮರಳಿ, ಅಲ್ಲಿಯೇ - ಆ ಕ್ಷೇತ್ರಂಗಳಲ್ಲಿಯೇ, ಮೂತ್ರೋಚ್ಛಿಷ್ಟಪುರೀಷ ವಿಚ್ಯುತಿಗಳಂ – ಮೂತ್ರ ಎಂಜಲು ಅಮೇಧ್ಯಗಳ ಬಿಡುವುದನ್ನು, ಮಾಳ್ಪರ್ - ಮಾಡುವರು. ೮

**ಭಾವಾರ್ಥಬೋಧಿನಿ :** ಕ್ಷೇತ್ರದ ವಿಚಾರವಿಲ್ಲದವರೂ, ಕ್ಷೇತ್ರ ಯಾತ್ರೆಯ ಆಶೆಯಿಂದ ಪೀಡಿತರೂ ಆದ ಅಜ್ಞಾನಿಗಳು ಭೂಭಾಗದಲ್ಲಿರುವ ಒಂದು ಸ್ಥಲ-ವನ್ನು ಸೇವ್ಯವಾದ ಪವಿತ್ರಕ್ಷೇತ್ರವೆಂದು ತಿಳಿದು, ಅಜ್ಞಾನದಿಂದ ಅಂತಹ ಸ್ಥಲ-ದಲ್ಲಿಯೇ ಮಲ, ಮೂತ್ರ, ಎಂಜಲು ಇವುಗಳನ್ನು ಬಿಡುವದನ್ನು ಮಾಡುವರು. ನೋಡಿದಿಯಾ ಶಿವಾವಲ್ಲಭನೆ, ೮

## ಶಾರ್ದೂಲ ವಿಕ್ರೀಡಿತ ವೃತ್ತಂ

ತೀರ್ಥಕ್ಷೇತ್ರಮಹಾಹ ಕೀರ್ತಿಸುವ ತನ್ಮಾಹಾತ್ಮ್ಯಮಂ ಕೇಳ್ವಸಾ
ರಾರ್ಥಗ್ರಾಹಕಸತ್ವದಿಂ ನೆನೆವ ಯಾತ್ರಾರಂಭಮಂ ಮಾಳ್ಪಪು
ಣ್ಯಾರ್ಥಿತ್ವಂ ನೆರೆ ಪಾಪಮಾದುದಕಟಾ ಬಂದಲ್ಲಿ ಮುಂದುಂಡು ನೈ
ರರ್ಥಂ ಮೂತ್ರಪುರೀಷವಿಚ್ಯುತಿಗಳಂ ಮಾಡಲ್ ಶಿವಾವಲ್ಲಭಾ ೯

**ಟೀಕೆ :** ತೀರ್ಥಕ್ಷೇತ್ರಮಂ - ಪುಣ್ಯತೀರ್ಥಕ್ಷೇತ್ರಂಗಳನ್ನು, ಕೀರ್ತಿಸುವ- ಕೊಂಡಾಡುವ, ತನ್ಮಾಹಾತ್ಮ್ಯಮಂ - ಅವರ ಮಹಿಮೆಯನ್ನು, ಕೇಳ್ವ - ಲಾಲಿಸುವ, ಸಾರಾರ್ಥಗ್ರಾಹಕಸತ್ವದಿಂ - ಸಾರ - ಶ್ರೇಷ್ಠವಾದ, ಅರ್ಥಗ್ರಾಹಕಸತ್ವದಿಂ- ಅರ್ಥವನ್ನು ಗ್ರಹಿಸುವಸಾಮರ್ಥ್ಯದಿಂದೆ, ನೆನೆವ - ಸ್ಮರಿಸುವ, ಯಾತ್ರಾರಂಭಮಂ ಮಾಳ್ಪ - ತೀರ್ಥಯಾತ್ರೆಯ ಉಪಕ್ರಮಮಂ ಮಾಳ್ಪ, ಪುಣ್ಯಾರ್ಥಿತ್ವಂ-ಪುಣ್ಯವಬಯಸುವ ತನವು, ಅಲ್ಲಿ - ಆ ಕ್ಷೇತ್ರಂಗಳಲ್ಲಿ, ಬಂದು, ಮಿಂದು - ಸ್ನಾನಮಾಡಿ, ಉಂಡು - ಭೋಜನಮಂ ಮಾಡಿ, ನೈರರ್ಥಂ - ವ್ಯರ್ಥವಾಗಿ, ಮೂತ್ರಪುರೀಷವಿಚ್ಯುತಿಗಳಂ - ಮಲಮೂತ್ರೋತ್ಸರ್ಗಮಂ, ಮಾಡಲ್, ನೆರೆ - ಚೆನ್ನಾಗಿ, ಪಾಪಮಾದುದು - ಪಾಪವಾಯಿತು, ಅಕಟ - ಅಯ್ಯೊ ! ಆಹ - ಆಶ್ಚರ್ಯವು !

**ಭಾವಾರ್ಥಬೋಧಿನಿ :** ಗಿರಿಜಾವಲ್ಲಭನೆ, ತೀರ್ಥಕ್ಷೇತ್ರಗಳನ್ನು ಕೊಂಡಾಡಿ, ಅವುಗಳ ಮಹತ್ವವನ್ನು ಕೇಳಿ ಆ ತೀರ್ಥಕ್ಷೇತ್ರಗಳ ಮಹಿಮೆಯನ್ನುಸಾರುವ ಶ್ರೇಷ್ಠವಾದ ಅರ್ಥವನ್ನು ಗ್ರಹಿಸುವ ಬಲ್ಮಿನಿಂದ ಸ್ಮರಿಸಿಕೊಂಡು, ಆ ತೀರ್ಥಕ್ಷೇತ್ರಗಳಿಗೆ ಬಂದು ಅಲ್ಲಿ ಸ್ನಾನಮಾಡಿ, ಉಂಡು ವ್ಯರ್ಥವಾಗಿ ಅಲ್ಲಿ ಮೂತ್ರಪುರೀಷಗಳನ್ನು ಬಿಡುವುದರಿಂದ ಯಾತ್ರಾರಂಭವನ್ನು ಮಾಡಿದ ಪುಣ್ಯಾಪೇಕ್ಷೆಯು ಪಾಪವಾಗಿ ಪರಿಣಮಿಸುವುದು ಅಯ್ಯೋ ! ಆಶ್ಚರ್ಯ; ೯

## ಮತ್ತೇಭವಿಕ್ರೀಡಿತಂ

ಮಲಮೂತ್ರ ಕ್ರಿಮಿಮಾಂಸಶೋಣಿತಮಯಾಪೂತಾಂಗಮಂ ಪೂತನಿ
ರ್ಮಲ ತೀರ್ಥೋದಕದೊಳ್ ಮುಳುಂಗಿಸಿ ವೃಥಾ ತತ್ತೀರ್ಥಮಂ
ದುಷ್ಟದು
ರ್ಜಲಮಂ ಮಾಡಿ ವಿಮೋಹದಿಂದಕಟ ಪುಣ್ಯಕ್ಕೋಸುಗಂ ಪಾಪಮಂ
ವಿಲಸದ್ಭಕ್ತಿ ವಿಶುದ್ಧಿಹೀನಭವಿಗಳ್ಮಾಳ್ಪರ್ಶಿವಾವಲ್ಲಭಾ ೧೦

**ಟೀಕೆ :** ವಿಲಸದ್ಭಕ್ತಿ ವಿಶುದ್ಧಿಹೀನಭವಿಗಳ್-ವಿಲಸತ್-ಒಪ್ಪುತ್ತಿರುವಭಕ್ತಿ, ಆ ತೀರ್ಥಕ್ಷೇತ್ರಂಗಳ ಭಕ್ತಿಯ, ವಿಶುದ್ಧಿಹೀನ-ಪಾರಿಶುದ್ಧವಿಲ್ಲದ-ಭವಿಗಳ್-ಆ ಸಂಸ್ಕಾರಿಗಳು, ವಿಮೋಹದಿಂದೆ-ಅಜ್ಞಾನದಿಂದೆ, ಮಲಮೂತ್ರ-ಕ್ರಿಮಿಮಾಂಸ

ಶೋಣಿತಮಯಾಪೂತಾಂಗಮಂ - ಮಲಮೂತ್ರಕ್ರಿಮಿ - ಮಲಮೂತ್ರವುಳುಗಳು, ಮಾಂಸಶೋಣಿತ-ಮಾಂಸರುಧಿರ ಇವುಗಳಿಂದ, ಮಯ-ಪ್ರಚುರವಾದ, ಅಪೂತಾಂಗ ಮಂ-ಅಪವಿತ್ರ ಶರೀರವನ್ನು, ಪೂತನಿರ್ಮಳ ತೀರ್ಥೋದಕದೊಳ್-ಪೂತ ಪವಿತ್ರ ವಾದ, ನಿರ್ಮಳ-ಸ್ವಚ್ಛವಾದ, ತೀರ್ಥೋದಕದೊಳ್-ಪುಣ್ಯ ತೀರ್ಥೋದಕ ಮಧ್ಯ ದಲ್ಲಿ, ಮುಳುಂಗಿಸಿ-ಆಳಿಸಿ, ವೃಥಾ-ವ್ಯರ್ಥವಾಗಿ, ತತ್ತೀರ್ಥಮಂ-ಆ ತೀರ್ಥವನ್ನು, ದುಷ್ಟ ದುರ್ಜಲಮಂ-ಅಶುದ್ಧ ಜಲಮಂ, ಮಾಡಿ, ಪುಣ್ಯಕ್ಕೋಸುಗಂ-ಪುಣ್ಯ ಕ್ಕೋಸ್ಕರವಾಗಿ, ಪಾಪಮಂ-ಪಾಪ ಕೃತ್ಯವನ್ನು, ಮಾಳ್ಪರ್-ಮಾಡುತ್ತಿಹರು, ಅಕಟ-ಅಯ್ಯೊ !

ಭಾವಾರ್ಥಬೋಧಿನಿ – ಪಾರ್ವತಿಪತಿಯೆ,ವಿಲಸಿತವಾದ ಭಕ್ತಿಯ ಪವಿತ್ರತೆ ಯಿಲ್ಲದ ಭವಿಗಳು ಅಜ್ಞಾನದಿಂದ ಮಲ, ಮೂತ್ರ, ಕ್ರಿಮಿ, ಮಾಂಸ, ರಕ್ತ ಇವು ಗಳಿಂದ ಕೂಡಿ ಅಪವಿತ್ರವಾದ ಅಂಗವನ್ನು ಪವಿತ್ರವಾದ ಸ್ವಚ್ಛ ತೀರ್ಥಜಲದಲ್ಲಿ ಮುಳುಗಿಸಿ, ವ್ಯರ್ಥವಾಗಿ ಆ ತೀರ್ಥವನ್ನು ಅಶುದ್ಧವನ್ನು ಮಾಡುವುದರಿಂದ ತಾವು ಪುಣ್ಯಕ್ಕಾಗಿ ಯಾತ್ರೆಗೆ ಹೋಗಿ ಪಾಪವನ್ನು ಗಳಿಸುವರು ಅಯ್ಯೊ ! ೧೦

## ಮತ್ತೇಭವಿಕ್ರೀಡಿತಂ

ಮೊದಲೊಳ್ಗುಹ್ಯಗುದಂಗಳಂ ತೊಳೆದು ಮತ್ತಾತೀರ್ಥಮಂ ಕಾಲ್ಗಳಿಂ
ದೊದೆದಾತೀರ್ಥದೊಳಾಹಪೊಕ್ಕಕಟ ಮತ್ತಾ ತೀರ್ಥದಿಂ ಮೋರೆಯುಂ
ಸದೆದಾತೀರ್ಥಮನಾತಹ ಮುಕ್ಕಳಿಸಿ ಮತ್ತಾ ತೀರ್ಥಮಂ ಮಿಂದು ಲೋ
ಕದ ಮರ್ತ್ಯರ್ ಕೃತಪುಣ್ಯರಪ್ಪುದಿದು ತಾಂ ಚೋದ್ಯಂ ಶಿವಾವಲ್ಲಭಾ ೧೧

**ಟೀಕೆ :** ಲೋಕದ ಮರ್ತ್ಯರ್-ಲೌಕಿಕ ಮನುಷ್ಯರು, ಮೊದಲೊಳ್-ಮೊದ ಲಲ್ಲಿ, ಗುಹ್ಯ ಗುದಂಗಳಂ-ಪಾಯಾಪಸ್ಥಂಗಳಂ, ತೊಳೆದು-ಪ್ರಕ್ಷಾಳನಮಂ ಮಾಡಿ, ಮತ್ತೆ-ಮರಳಿ, ಆ ತೀರ್ಥದಿಂ-ಆ ತೀರ್ಥವನ್ನು, ಕಾಲ್ಗಳಿಂ-ಕಾಲೆರಡರಿಂದೆ ಒದೆದು-ತುಳಿದು, ಆ ತೀರ್ಥದೊಳ್-ಆ ತೀರ್ಥದಲ್ಲಿ, ಪೊಕ್ಕು-ಪೊಕ್ಕವರುಗಳಾಗಿ, ಮತ್ತೆ-ಮರಳಿ, ಆ ತೀರ್ಥದಿಂ-ಆ ತೀರ್ಥದಿಂದ, ಮೋರೆಯುಂ-ಮುಖವನ್ನು, ಸದೆದು-ತೊಳೆದುಕೊಂಡು, ಆ ತೀರ್ಥಮಂ-ಆ ತೀರ್ಥವನ್ನು, ಮುಕ್ಕಳಿಸಿ-

ಗಂಡೂಷಮಂ ಮಾಡಿ, ಮತ್ತೆ-ಮರಳಿ, ಆ ತೀರ್ಥಮಂ-ಆ ತೀರ್ಥದಲ್ಲಿ, ಮಿಂದು-ಸ್ನಾನಂ ಮಾಡಿ, ಕೃತಪುಣ್ಯರಪ್ಪುದು-ಮಾಡಲ್ಪಟ್ಟ ಸುಕೃತವನುಳ್ಳವರಾಗುವುದು, ಇದು ತಾಂ-ಇದು ತಾನು, ಚೋದ್ಯಂ-ಚೋದ್ಯವು, ಅಕಟ-ಅಶ್ಚರ್ಯವು, ಅಹ-ಆಶ್ಚರ್ಯವು !!

**ಭಾವಾರ್ಥಬೋಧಿನಿ** - ಶಿವಾವಲ್ಲಭನೆ, ಲೌಕಿಕವಾದ ಮನುಷ್ಯರು ಪ್ರಾರಂಭದಲ್ಲಿ ತಮ್ಮ ಗುದಗುಹ್ಯಂಗಳನ್ನು ತೊಳೆದುಕೊಂಡು, ಮರಳಿ, ಆ ತೀರ್ಥ ಜಲವನ್ನೇ ಕಾಲಿನಿಂದ ತುಳಿದು. ಅದರಲ್ಲಿ ಹೊಕ್ಕು, ಮರಳಿ ಅಯ್ಯೋ ! ಆ ತೀರ್ಥ ಜಲದಿಂದಲೇ ಮುಖವನ್ನು ತೊಳೆದುಕೊಂಡು, ಆ ಜಲದಿಂದಲೇ ಮುಕ್ಕುಳಿಸಿ, ಅದರಲ್ಲಿ ಮುಳುಗಿ ಸ್ನಾನ ಮಾಡಿ ಪುಣ್ಯಾತ್ಮರಾಗುವುದು ಆಶ್ಚರ್ಯವಲ್ಲವೆ ! ೧೧

**ಮತ್ತೇಭವಿಕ್ರೀಡಿತಂ**

ಸಲೆ ತೀರ್ಥಾರ್ಥಿಯೆನಿಪ್ಪವಂ ಪರಿದು ಬಂದಾಕ್ಷೇತ್ರಮಂ ಮೆಟ್ಟದಾ
ಜಲಮಂ ಮುಟ್ಟದೆ ಶೌಚಕರ್ಮಮುಮಂ ನೇನಂ ಮಾಡದಾಸ್ಥಾನದೊ
ಳ್ನೆಲೆಗೊಂಡಿರ್ದು ಕೃತಾರ್ಥ ನಪ್ಪೊಡದು ತೀರ್ಥಕ್ಷೇತ್ರ ಯಾತ್ರಾಮಹಾ
ಫಲಮಿಂತಲ್ಲದೆ ಬೇರೆ ತತ್ಫಲಮದುಂಟೇ ಪೇಳ್ಶಿವಾವಲ್ಲಭಾ ೧೨

**ಟೀಕೆ :** ತೀರ್ಥಾರ್ಥಿಯೆನಿಪ್ಪವಂ-ತೀರ್ಥಂಗಳಲ್ಲಿ ವಾಂಛೆಯುಳ್ಳವನೆಂಬಾತನು, ಸಲೆ-ಚೆನ್ನಾಗಿ, ಪರಿದುಬಂದು-ಬೇಗದಿ ಬಂದು, ಆ ಕ್ಷೇತ್ರಮಂ-ಆ ಕ್ಷೇತ್ರವನ್ನು, ಮೆಟ್ಟದೆ-ತುಳಿಯದೆ,ಆ ಜಲಮಂ-ಆ ಉದಕವನ್ನು, ಮುಟ್ಟದೆ-ಸೋಂಕದೆ, ಶೌಚಕರ್ಮಮುಮಂ ಏನಂ-ಗುದಗುಹ್ಯ ಪ್ರಕ್ಷಾಲನವನೇನನ್ನೂ ಮಾಡದೆ,ಆ ಸ್ಥಾನದೊಳ್-ಆ ಸಮೀಪಸ್ಥಳವಲ್ಲಿ, ನೆಲೆಗೊಂಡಿರ್ದು-ವಾಸವಾಗಿರ್ದು, ಕೃತಾರ್ಥನಪ್ಪೊಡೆ-ಸುಕೃತಿಯಪ್ಪೊಡೆ, ಇದು-ಇದು ತಾನು, ತೀರ್ಥಕ್ಷೇತ್ರಯಾತ್ರಾಮಹಾಫಲಂ-ಪುಣ್ಯಕ್ಷೇತ್ರ ಪುಣ್ಯ ಯಾತ್ರೆಗಳ ಅಧಿಕವಾದ ಫಲವು, ಇಂತಲ್ಲದೆ-ಹೀಗಲ್ಲದೆ, ಬೇರೆ-ಮತ್ತೊಂದು, ತತ್ಫಲಂ-ಅವರ ಫಲವು, ಅದು-ಅದುತಾನು, ಉಂಟೆಪೇಳ್-ಉಂಟೆ ಹೇಳು ? ಇಲ್ಲವೆಂಬುದರ್ಥವು.

**ಭಾವಾರ್ಥಬೋಧಿನಿ** – ಗಿರಿಜಾವಲ್ಲಭನೆ, ಕ್ಷೇತ್ರತೀರ್ಥಗಳ ಯಾತ್ರೆಯನ್ನು ಮಾಡಲಪೇಕ್ಷಿಸುವವನು ಚೆನ್ನಾಗಿ ಬಂದು ಕ್ಷೇತ್ರಸ್ಥಾನವನ್ನು ತುಳಿದು ಅಪವಿತ್ರಗೊಳಿಸದೆ, ತೀರ್ಥದಲ್ಲಿ ಗುದಗುಹ್ಯ ಪ್ರಕ್ಷಾಲನಾದಿಯಾದೇನೊಂದನ್ನೂ ಮಾಡದೆ, ಆ ತೀರ್ಥಕ್ಷೇತ್ರಗಳ ಸಮೀಪದಲ್ಲಿದ್ದು ಅವುಗಳ ಸೇವೆಯನ್ನು ಮಾಡಿ ಕೃತಾರ್ಥನಾದ ಪಕ್ಷದಲ್ಲಿ ತೀರ್ಥಕ್ಷೇತ್ರಯಾತ್ರೆಯು ಮಹಾಫಲವುಂಟಾಗುವುದು. ಹೀಗಲ್ಲದೆ ಬೇರೆ ತೆರನಾಗಿ ಮಾಡಿದರೆ ಅದರ ಫಲವುಂಟಾಗುವುದೆ ! ಉಂಟಾಗಲಾರದು. ೧೨

**ಶಾರ್ದೂಲವಿಕ್ರೀಡಿತಂ**

ಪಂಚಕ್ರೋಶ ಸಮಾಂತರಾವಳಿಯದೊಳ್ತೀರ್ಥಾರ್ಥಿಯಾಗಿರ್ಪ ಪು
ಣ್ಯಾಂಚತ್ಸಚ್ಚರಿತಂ ಪುರೀಷವಿಧಿಮೂತ್ರೋತ್ಸರ್ಜನೋಚ್ಛಿಷ್ಟ ಕೃ
ತ್ಸಂಚಾರಂಗಳನೆಲ್ಲಮಂ ತ್ಯಜಿಸಿ ತತ್ ಕ್ಷೇತ್ರಾಧಿವಾಸಕ್ರಿಯಾ
ಚಂಚತ್ಸೌಖ್ಯಮನೆಯ್ದಲಾತನೆ ಕೃತಾರ್ಥಂ ಕೇಳ್ ಶಿವಾವಲ್ಲಭಾ ೧೩

**ಟೀಕೆ** : ತೀರ್ಥಾರ್ಥಿಯಾಗಿರ್ಪ-ಪುಣ್ಯತೀರ್ಥಂಗಳಲ್ಲಿ ಬಯಕೆಯುಳ್ಳವನಾಗಿರ್ಪ, ಪುಣ್ಯಾಂಚತ್-ಪುಣ್ಯದಿಂದೊಪ್ಪುತ್ತಿರ್ಪ, ಸಚ್ಚರಿತಂ-ಒಳ್ಳಿತ್ತಾದ ಚರಿತ್ರವುಳ್ಳತನು, ಪಂಚಕ್ರೋಶಸಮಾಂತರಾವಳಿಯದೊಳ್-ಐದು ಹರದಾರಿಯುಪ್ಪರೊಳಗೆ ಪುರೀಷವಿಧಿಮೂತ್ರೋತ್ಸರ್ಜನೋಚ್ಛಿಷ್ಟಕೃತ್ಸಂಚಾರಂಗಳಂ ಎಲ್ಲಮಂ-ಪುರೀಷವಿಧಿ-ಮಲವಿಸರ್ಜನ, ಮೂತ್ರೋತ್ಸರ್ಜನ - ಮೂತ್ರಿಸುವುದು, ಉಚ್ಛಿಷ್ಟಕೃತ್-ಎಂಜಲನ್ನು ಮಾಡುವುದು, ಸಂಚಾರಂಗಳನೆಲ್ಲಮಂ-ಸಂಚಾರ ಮೊದಲಾದ ಇವುಗಳೆಲ್ಲವನ್ನೂ, ತ್ಯಜಿಸಿ-ಬಿಟ್ಟು, ತತ್‌ಕ್ಷೇತ್ರಾಧಿವಾಸಕ್ರಿಯಾಚಂಚತ್ಸೌಖ್ಯಮಂ-ತತ್‌ಕ್ಷೇತ್ರ-ಆ ಕ್ಷೇತ್ರದಲ್ಲಿ, ಅಧಿವಾಸಕ್ರಿಯಾ-ಮನೆಮಾಡಿಕೊಂಡಿರ್ಪ ವ್ಯಾಪಾರವಲ್ಲಿ, ಚಂಚತ್-ಒಪ್ಪುತ್ತಿರ್ಪ, ಸೌಖ್ಯಮಂ-ಸೌಖ್ಯವನ್ನು, ಎಯ್ದಲ್-ಹೊಂದಲಾಗಿ, ಆತನೆ-ಹಾಂಗಿರ್ಪಾತನೆ, ಕೃತಾರ್ಥಂ ಕೇಳ್-ಸುಕೃತಿಯಲಾ ೧೩

**ಭಾವಾರ್ಥಬೋಧಿನಿ** – ಪುಣ್ಯತೀರ್ಥದಲ್ಲಿ ಬಯಕೆಯುಳ್ಳವನೂ, ಪುಣ್ಯಾತ್ಮನೂ, ಸಚ್ಚರಿತ್ರನೂ ಆದವನು ಕ್ಷೇತ್ರದ ಪಂಚಕ್ರೋಶದ (ಐದು ಹರದಾರಿಯ) ಅಗಲದ ಪುಣ್ಯಸ್ಥಲದೊಳಗೆ ಮಲಮೂತ್ರವಿಸರ್ಜನ-ಎಂಜಲು ಮಾಡುವುದಕ್ಕೆ-ತಿರು

ಗಾಟ-ಇವುಗಳೊಂದನ್ನೂ ಮಾಡದೆ, ಆ ಕ್ಷೇತ್ರದಲ್ಲಿ ನೆಲಸಿ, ಕ್ಷೇತ್ರಾನಂದವನ್ನನುಭವಿಸುವನಾದರೆ ಅವನೇ ಸುಕೃತಿಯಲ್ಲವೆ ! ೧೩

**ಮತ್ತೇಭವಿಕ್ರೀಡಿತಂ**

ಗುರುದೈವಂ ವರಪುಣ್ಯತೀರ್ಥ ಮಮಲಕ್ಷೇತ್ರಂ ಸಮಾನಂಗಡಾ
ಗುರುವಂ ದೈವಮುನಾಹ ಕಾಲ್ಮರೆದು ಸೋಂಕಲ್ಪಾಪ ಮೆಂಬಾಗಳಾ
ಗುರುದೈವಕ್ಕೆಣೆಯಾದ ತೀರ್ಥಪರಮಕ್ಷೇತ್ರಂಗಳಂ ಮೆಟ್ಟುವಾ
ನರರ್ಗಿನ್ನೆಲ್ಲಿಯ ಮುಕ್ತಿ ಭಕ್ತಿರಹಿತರ್ಗಯ್ಯೋ ಶಿವಾವಲ್ಲಭಾ ೧೪

**ಟೀಕೆ :** ಗುರು - ಗುರುವು, ದೈವಂ - ದೈವವು, ವರಪುಣ್ಯತೀರ್ಥಂ - ಶ್ರೇಷ್ಠವಾದ ಪುಣ್ಯತೀರ್ಥವು, ಅಮಲಕ್ಷೇತ್ರಂ - ನಿರ್ಮಲಕ್ಷೇತ್ರವು, ಸಮಾನಂಗಡಾ-ಸಮಾನವಲ್ಲವೆ ? ಗುರುವಂ-ಗುರುವನ್ನು, ದೈವಮುಂ-ತನ್ನ ಇಷ್ಟ ದೈವವನ್ನು, ಕಾಲ್-ಪಾದವು, ಮರೆದು-ಎಚ್ಚರದಪ್ಪಿ, ಸೋಂಕಲ್-ತಾಗಲಾಗಿ, ಪಾಪಮೆಂಬಾಗಳ್-ಪಾಪ ಬಂದೀತೆಂದು ಹೇಳುವಲ್ಲಿ, ಆ ಗುರುದೈವಕ್ಕೆ-ಆ ಗುರುದೈವಗಳೆರಡಕ್ಕೆಯೂ ಎಣೆಯಾದ-ಸಮಾನವಾದ, ತೀರ್ಥ ಪರಮ ಕ್ಷೇತ್ರಂಗಳಂ-ಉತ್ಕೃಷ್ಟವಾದ ತೀರ್ಥ ಕ್ಷೇತ್ರಂಗಳನ್ನು, ಮೆಟ್ಟುವ-ತುಳಿವ, ಭಕ್ತಿರಹಿತರ್ಗೆ-ವಿಶ್ವಾಸಹೀನರಾದ, ಆ ನರರ್ಗೆ-ಆ ಮನುಷ್ಯರ್ಗೆ, ಇನ್ನೆಲ್ಲಿಯ ಮುಕ್ತಿ-ಇನ್ನೆಲ್ಲಿಯ ಮೋಕ್ಷವು ? ಅಯ್ಯೋ-ಅಕಟಾ, ಆಹಾ-ಆಶ್ಚರ್ಯವು.

**ಭಾವಾರ್ಥಬೋಧಿನಿ :** ಗುರುವೂ, ದೈವವೂ, ಶ್ರೇಷ್ಠವಾದ ಪುಣ್ಯತೀರ್ಥವೂ ನಿರ್ಮಲಕ್ಷೇತ್ರವೂ ಸೇವ್ಯ ವಿಷಯದಲ್ಲಿ ಸಮಾನವಲ್ಲವೆ ? ಗುರುವನ್ನೂ ತನ್ನ ಇಷ್ಟ ದೈವವನ್ನೂ ಎಚ್ಚರದಪ್ಪಿ ಕಾಲಿನಿಂದ ತಾಕಲಾಗಿ ಪಾಪವುಂಟಾಗುವುದೆಂದು ಹೇಳುವಾಗ, ಗುರುವಿಗೂ ದೈವಕ್ಕೂ ಸಮಾನವಾದ ಪುಣ್ಯತೀರ್ಥಕ್ಷೇತ್ರಗಳನ್ನು ಕಾಲಿನಿಂದ ತುಳಿಯುವ ಭಕ್ತಿರಹಿತರಿಗೆ ಇನ್ನೆಲ್ಲಿಯ ಮೋಕ್ಷ ? ಅಯ್ಯೋ ! ಇದಾಶ್ಚರ್ಯ. ೧೪

**ಮತ್ತೇಭವಿಕ್ರೀಡಿತಂ**

ಅಕಟಾ ಲಿಂಗಮನೀಕ್ಷಿಪೊಂದು ಭರದಿಂ ತಲ್ಲಿಂಗಮಂ ಪ್ರೇಮದಿಂ
ಸ್ವಕಮಸ್ತಸ್ಥಲದಲ್ಲಿ ತಾಳ್ದ ಗಿರಿಯಂ ಲಿಂಗಾಂಗಿಯಂ ಭಕ್ತನಂ
ವಿಕಳಾತ್ಮರ್ಕೆಡೆಮೆಟ್ಟಿ ಬಂದಡರಿ ನೋಡಲ್ಮುಕ್ತರೇನಪ್ಪರೇ
ಪ್ರಕಟಜ್ಞಾನವಿಶಿಷ್ಟ ಭಕ್ತಿರಹಿತರ್ನೋಡಾ ಶಿವಾವಲ್ಲಭಾ ೧೫

**ಟೀಕೆ :** ಪ್ರಕಟಜ್ಞಾನವಿಶಿಷ್ಟ ಭಕ್ತಿರಹಿತರ್-ಪ್ರಕಟಜ್ಞಾನ-ಪ್ರಸಿದ್ಧವಾದ ಜ್ಞಾನವೂ, ವಿಶಿಷ್ಟಭಕ್ತಿ-ವಿಶೇಷವಾದ ಭಕ್ತಿಯೂ, ರಹಿತರ್-ಇಲ್ಲದವರಾದ, ವಿಕಳಾತ್ಮರ್-ಅಜ್ಞಾನಿಮನುಜರು, ಲಿಂಗಮಂ-ಲಿಂಗವನ್ನು, ಈಕ್ಷಿಪ-ನೋಡುವ, ಒಂದು ಭರದಿಂ - ಒಂದು ಕುತೂಹಲದಿಂದ, ತಲ್ಲಿಂಗಮಂ-ಆ ಲಿಂಗವನ್ನು, ಪ್ರೇಮದಿಂ - ಸ್ನೇಹದಿಂದ, ಸ್ವಕಮಸ್ತ ಸ್ಥಲದಲ್ಲಿ-ತನ್ನ ಸಂಬಂಧವಾದ ಶಿರಸ್ಸಿನಲ್ಲಿ, ತಾಳ್ದ-ಧರಿಸಿದಂಥ, ಗಿರಿಯಂ-ಪರ್ವತಮುನೀಶ್ವರನೆಂಬ, ಲಿಂಗಾಂಗಿಯಂ-ಲಿಂಗಸಂಬಂಧಿಯಾದ, ಭಕ್ತನಂ-ಶಿವಭಕ್ತನನ್ನು, ಕೆಡೆಮೆಟ್ಟಿ ಬಂದು-ತುಳಿದು ಬಂದು, ಅಡರಿ-ಏರಿ, ನೋಡಲ್-ನೋಡಲಾಗಿ, ಮುಕ್ತರ್ ಅಪ್ಪರೇಂ-ಮುಕ್ತರಾಗುವರೇನು ? ಆಗರೆಂಬುದರ್ಥಂ, ನೋಡಾ-ಎಲೆ ಶಿವನೆ ನೋಡು.

**ಭಾವಾರ್ಥಬೋಧಿನಿ -** ಶಿವನೆ, ಶ್ರೇಷ್ಠವಾದ ಶಿವಜ್ಞಾನ ಶಿವಭಕ್ತಿಗಳಿಲ್ಲದ ಅಜ್ಞಾನಿಗಳು ಶ್ರೀ ಶೈಲದ ಮೇಲಿರುವ ಶಿವಲಿಂಗದ ದರ್ಶನ ಮಾಡಿಕೊಳ್ಳಬೇಕೆಂಬ ಆತುರದಿಂದ, ಆ ಶಿವಲಿಂಗವನ್ನು ಪ್ರೇಮದಿಂದ ತನ್ನ ಮಸ್ತಕದಲ್ಲಿ ಧರಿಸಿಕೊಂಡು ಲಿಂಗಾಂಗಿಯಾಗಿ ಭಕ್ತನಾಗಿರುವ ಆ ಶ್ರೀಶೈಲವನ್ನು ಕಾಲಿನಿಂದ ತುಳಿಯುತ್ತಾ ಬಂದು ಮೇಲೇರಿ, ಆ ಲಿಂಗದರ್ಶನವನ್ನು ಮಾಡಿದರೆ, ಆ ಅಜ್ಞಾನಿಗಳು ಅಯ್ಯೊ ! ಮುಕ್ತರಾಗುವರೇನು ? ಆಗರು. ೧೫

**ಶಾರ್ದೂಲ ವಿಕ್ರೀಡಿತ ವೃತ್ತಂ**

ಲಿಂಗಕ್ಕಾಶ್ರಯಮಾದ ಪರ್ವತಮೆ ಲಿಂಗಂ ಲಿಂಗದಿಂದಾ ಘನಂ
ಲಿಂಗಂ ತನ್ನೊಳಡಂಗಿ ತನ್ನ ಬಹುಳತ್ವಂ ತೋರ್ಪ ತತ್ಕಾರಣಂ
ಲಿಂಗಾಲೋಕನಕಾಂಕ್ಷಿಗಳ್ಪರಿದೆ ಭಕ್ತಿಜ್ಞಾನಯೋಗಕ್ರಿಯಾ
ಲಿಂಗಾಲೋಕನ ಮಿಲ್ಲದೇಕೆಬಳಲ್ಪರ್ಪೇಳಾ ಶಿವಾವಲ್ಲಭಾ ೧೬

**ಟೀಕೆ :** ಲಿಂಗಂ - ಶಿವಲಿಂಗವು, ತನ್ನೊಳ್ - ತನ್ನಲ್ಲಿ, ಅಡಂಗಿ - ಸಂಬಂಧವಾಗಿ, ತನ್ನ, ಬಹುಳ್ವತಂ - ಪೆರ್ಚುಗೆಯು, ತೋರ್ಪ - ತೋರುವ, ತತ್ಕಾರಣಂ - ಆಕಾರಣವಾಗಿ, ಲಿಂಗಕ್ಕೆ - ಶಿವಲಿಂಗಕ್ಕೆ, ಆಶ್ರಯವಾದ - ಆಧಾರ ವಾದ, ಪರ್ವತಮೆ - ಶ್ರೀಗಿರಿಯೆ, ಲಿಂಗಂ - ಶಿವಲಿಂಗವು, ಲಿಂಗದಿಂದಂ - ಆ ಶಿವಲಿಂಗಕ್ಕಿಂದೆಯೂ, ಘನಂ - ಹೆಗ್ಗಳವು, ಲಿಂಗಾಲೋಕನಕಾಂಕ್ಷಿಗಳ್ - ಲಿಂಗವ ನೋಡಬೇಕೆಂಬ ವಾಂಛೆಯನುಳ್ಳವರು, ಭಕ್ತಿಜ್ಞಾನಯೋಗಕ್ರಿಯಾಲಿಂಗಾಲೋ ಕನಂ - ಶಿವಭಕ್ತಿ ಶಿವಜ್ಞಾನ ಶಿವಯೋಗದ ಕ್ರಿಯೆಯಿಂದ ಲಿಂಗವಂ ನೋಡು ವುದು, ಇಲ್ಲದೆ, ಬರಿದೆ - ವ್ಯರ್ಥವಾಗಿ, ಏಕೆಬಳಲ್ವರ್ - ಏತಕ್ಕೆ ಆಯಾಸಗೊ ಳ್ಳುತ್ತಿಹರು ? ೧೬

**ಭಾವಾರ್ಥಬೋಧಿನಿ :** ಶಿವನೆ, ಆ ಪರ್ವತದಲ್ಲಿ ಲಿಂಗಸಂಬಂಧವುಂಟಾ- ಗಲಾಗಿ, ಆ ಪರ್ವತದ ಮಹತ್ವವು ಅಧಿಕವಾದುದರಿಂದ ಲಿಂಗಧಾರಿಯಾದ ಆ ಶ್ರೀಗಿರಿಯೇ ಲಿಂಗವೂ, ಲಿಂಗಕ್ಕಿಂತ ಮಿಗಿಲಾದುದೂ ಆಗಿರುವುದು. ಆ ಗಿರಿಯ ಮೇಲಿರುವ ಲಿಂಗದ ದರ್ಶನವನ್ನು ಮಾಡಿಕೊಳ್ಳಬೇಕೆಂಬಾಶೆಯುಳ್ಳ ಜನರು, ಲಿಂಗ ಭಕ್ತಿ - ಲಿಂಗಜ್ಞಾನ - ಲಿಂಗಯೋಗಕ್ರಿಯೆ - ಇವುಗಳನ್ನರಿತು ಲಿಂಗದರ್ಶನಮಾಡಿ ಕೊಳ್ಳದೆ ವ್ಯರ್ಥವಾಗಿ ಅದೇತಕ್ಕೆ ಆಯಾಸಪಡುವರು ? ಹೇಳು. ( ಈ ಪದ್ಯದ ಭಾವವು ಮುಂದಿನ ಪದ್ಯದಲ್ಲಿ ಇನ್ನೂ ಸುಲಭವಾಗಿರುವುದು ) ೧೬

## ಮತ್ತೇಭವಿಕ್ರೀಡಿತಂ

ಶಿವಭಕ್ತಂ ಶಿವಲಿಂಗಮಂ ನಿಜ ಶಿಖಾಗ್ರಸ್ಥಾನದೊಳ್ತಾಳ್ದೊಡಾ
ಶಿವಲಿಂಗೇಕ್ಷಣಕಾಂಕ್ಷೆಯಿಂವಕಟ ಬಂದಾಭಕ್ತನಂ ಮೆಟ್ಟಿನೋ
ಡುವ ಮೋಕ್ಷಾರ್ಥಿಗಳುಂಟೆ ಲಿಂಗಮನಿದಾವಶ್ರದ್ಧೆ ಸದ್ಭಕ್ತನೇ
ಶಿವನೆಂದೀಕ್ಷಿಸಿ ಭಕ್ತಿಯಿಂ ನಮಿಸರೀಮೂರ್ಖರ್ಶಿವಾವಲ್ಲಭಾ ೧೭

**ಟೀಕೆ :** ಈ ಮೂರ್ಖರ್-ಇಂತಪ್ಪ ಅಜ್ಞಾನಿಗಳು, ಶಿವಭಕ್ತಂ-ಪರ್ವತ ಮುನೀಶ್ವರನಾದ ಶಿವಭಕ್ತನು, ನಿಜಶಿಖಾಗ್ರಸ್ಥಾನದೊಳ್-ತನ್ನ ಶಿಖಾಗ್ರದಲ್ಲಿ, ಶಿವಲಿಂಗಮಂ-ಶಿವಲಿಂಗವನ್ನು, ತಾಳ್ದೊಡೆ-ಧರಿಸಿದೊಡೆ, ಆ ಶಿವಲಿಂಗೇಕ್ಷಣ ಕಾಂಕ್ಷೆಯಿಂದೆ-ಆ ಶಿವಲಿಂಗವ ನೋಡುವ ವಾಂಛೆಯಿಂದೆ, ಬಂದು-ನಡೆದುಬಂದು,

ಆ ಭಕ್ತನಂ-ಆ ಪರ್ವತಮುನೀಶ್ವರನನ್ನು, ಮೆಟ್ಟಿ-ತುಳಿದು, ಲಿಂಗಮಂ-ಶಿವಲಿಂಗವನ್ನು, ನೋಡುವ-ಈಕ್ಷಿಸುವ, ಮೋಕ್ಷಾರ್ಥಿಗಳುಂಟೆ? ಇದಾವ ಶ್ರದ್ಧೆ-ಇದಾವ ವಿಶ್ವಾಸವು ? ಸದ್ಭಕ್ತನೆ-ಲಿಂಗಾಂಗಸಂಬಂಧವನುಳ್ಳ ಶಿವಭಕ್ತನೇ, ಶಿವನೆಂದು-ಸಾಕ್ಷಾತ್ಪರಮೇಶ್ವರನೆಂದು, ಈಕ್ಷಿಸಿ-ನೋಡಿ, ಭಕ್ತಿಯಿಂದೆ-ಭಕ್ತಿಪುರಸ್ಸರವಾಗಿ, ನಮಿಸರ್-ನಮಸ್ಕಾರವಂ ಮಾಡರು, ಅಕಟ-ಅಯ್ಯೊ !

**ಭಾವಾರ್ಥಬೋಧಿನಿ :** ಪಾರ್ವತೀಶನೆ, ಪರ್ವತನೆಂಬ ಶಿವಭಕ್ತನು ತನ್ನ ಶಿಖಾಗ್ರದಲ್ಲಿ ಶಿವಲಿಂಗವನ್ನು ಧರಿಸಲಾಗಿ ಆ ಶಿವಲಿಂಗವನ್ನು ನೋಡಬೇಕೆಂಬ ಅಪೇಕ್ಷೆಯಿಂದ ಬಂದು, ಲಿಂಗಧಾರಿಯಾದ ಆ ಪರ್ವತನಾಮಕ ಶಿವಭಕ್ತನನ್ನು ತುಳಿದು, ಲಿಂಗದರ್ಶನ ಮಾಡಿಕೊಳ್ಳುವ ಮೋಕ್ಷಾರ್ಥಿಗಳಿರುವರೆ ? ಅಯ್ಯೋ ! ಇದಾವ ಬಗೆಯ ಶ್ರದ್ಧೆ ? ಈ ಮೂಢರು ಲಿಂಗಾಂಗಸಂಗಿಯಾದ ಶಿವಭಕ್ತನನ್ನೇ ಪರ್ವತವನ್ನೇ ಸಾಕ್ಷಾತ್ಪರಶಿವನೆಂದು ನೋಡಿ, ಆತನಿಗೆ ಭಕ್ತಿಯಿಂದ ನಮಸ್ಕರಿಸರಲ್ಲಾ ? ೧೭

**ಮತ್ತೇಭವಿಕ್ರೀಡಿತಂ**

ಶರಣಂ ಶಾಂಭವಯೋಗಿಯಿರ್ದ್ದ ನೆಲನೇ ಕ್ಷೇತ್ರಂ ಪವಿತ್ರಂ ಪರಂ
ಭರದಿಂದೇರಿದ ಬೆಟ್ಟಮೇ ಘನತರಂ ಶ್ರೀ ಪರ್ವತಂ ಸ್ವೇಚ್ಛೆಯಿಂ
ದಿರದಾ ಕ್ರೀಡಿಸಲೆಂದು ಪೊಕ್ಕ ಜಲಮೇ ತೀರ್ಥಂ ಮಹಾಪಾವನಂ
ನಿರುತಂ ಲೀಲೆಯೊಳೊಲ್ದು ಮಾಡಿದುದೆ ತಾಂ ದೈವಂ ಶಿವಾವಲ್ಲಭಾ ೧೮

**ಟೀಕೆ :** ಶಾಂಭವಯೋಗಿ - ಶಿವಯೋಗಿಯಾದ, ಶರಣಂ-ಶಿವಶರಣನು, ಇರ್ದನೆಲನೇ-ಇದ್ದಂಥ ಭೂಮಿಯೇ, ಪರಂ-ಮಿಗಿಲಾಗಿ, ಪವಿತ್ರಂ-ಪವಿತ್ರವಾದ, ಕ್ಷೇತ್ರಂ-ಕ್ಷೇತ್ರವು, ಭರದಿಂದೆ-ಶೀಘ್ರದಿಂದೆ, ಏರಿದ-ಅಡರ್ದ, ಬೆಟ್ಟಮೇ-ಗಿರಯೆ, ಘನತರ ಶ್ರೀಪರ್ವತಂ-ದೊಡ್ಡಿತಾದ ಶ್ರೀಗಿರಿಯು, ಸ್ವೇಚ್ಛೆಯಿಂದೆ-ತನ್ನಿಚ್ಛೆಯಿಂದೆ ಇರದೆ-ಬಿಡದೆ, ಆಕ್ರೀಡಿಸಲೆಂದು-ವಿಹಾರವಂ ಮಾಡಬೇಕೆಂದು, ಪೊಕ್ಕ-ಪೊಕ್ಕಂಥ ಜಲಮೇ-ಉದಕವೇ, ಮಹಾಪಾವನಂ-ಅತ್ಯಂತ ಪವಿತ್ರವಾದ, ತೀರ್ಥಂ-ಗಂಗಾದಿ ತೀರ್ಥವು, ನಿರುತಂ-ನಿಶ್ಚಯದಿಂದೆ, ಲೀಲೆಯೊಳ್-ವಿಲಾಸದಲ್ಲಿ, ಒಲ್ದು-ಪ್ರೀತಿಯಿಂ, ಮಾಡಿದುದೆ-ಅರ್ಚನೆಯನ್ನು ಮಾಡಿದುದೇ, ತಾಂ-ತಾನು, ದೈವಂ-ದೈವವು.

**ಭಾವಾರ್ಥಬೋಧಿನಿ :** ಶಿವಾವಲ್ಲಭನೆ, ಶಿವಯೋಗಿಯಾದ ಶರಣನು ನೆಲಸಿರುವ ಸ್ಥಲವೇ ಪರಮ ಪವಿತ್ರ ಕ್ಷೇತ್ರವು ಆತನು ಹತ್ತಿದ ಬೆಟ್ಟವೇ ಉತ್ಕೃಷ್ಟವಾದ ಶ್ರೀಶೈಲವು. ಆ ಶಿವಯೋಗಿಯು ತನ್ನಿಚ್ಛೆಯಂತೆ ಕ್ರೀಡಿಸಲೆಂದು ಪೊಕ್ಕ ಜಲವೇ ಮಹಾಪಾವನತೀರ್ಥವು. ಆತನು ನಿಷ್ಠೆಯುವಾಗಿ ಪ್ರೀತಿಯಿಂದ ವಿಲಾಸದೊಡದೆ ಪೂಜಿಸಿದುದೇ ದೈವವು. ೧೮

**ಮತ್ತೇಭವಿಕ್ರೀಡಿತಂ**

ಶಿವಸಂವಿಚ್ಚರಣಾಬ್ಜರೇಣು ಪತನಂ ಕ್ಷೇತ್ರಂ ತದೀಯಾಂಘ್ರಿಕಂ
ಭವಸಂಕ್ಷಾಲಿತತೋಯಮೇ ವಿಮಲ ತೀರ್ಥಂ ತತ್ಪದಾಂಭೋಜಯು
ಗ್ಮವೆದೈವಂ ಜಡಭೌತಿಕಪ್ರಕೃತಿ ತೀರ್ಥಕ್ಷೇತ್ರ ದೈವಂಗಳೆಂ
ಬಿವು ಮಿಕ್ಕಜ್ಞರಿಗೈಸೆ ನಿಮ್ಮವರಿವಂ ಪೊರ್ದರ್ ಶಿವಾವಲ್ಲಭಾ ೧೯

**ಟೀಕೆ :** ಭೋ ಶಿವಾವಲ್ಲಭಾ-ಎಲೈ ಪಾರ್ವತೀ ರಮಣನೇ! ಶಿವಸಂ ವಿಚ್ಚರ ಣಾಬ್ಜರೇಣುಪತನಂ ಶಿವಜ್ಞಾನಿಗಳ, ಚರಣಾಬ್ಜ-ಪದಕಮಲದ, ರೇಣು-ಧೂಳಿಯ ಪತನಂ-ಬೀಳುವಿಕೆಯುಳ್ಳುದೇ, ಕ್ಷೇತ್ರಂ-ಪುಣ್ಯಕ್ಷೇತ್ರವು,

"ಪಾದಾಗ್ರರೇಣವೋಯತ್ರ ಪತಂತಿ ಶಿವಯೋಗಿನಃ
ತದೇವ ಸದನಂ ಪುಣ್ಯಂ ಪಾವನಂ ಶಿವಮಂದಿರಂ"

ಎಂದುಂಟಾಗಿ, ತದೀಯಾಂಘ್ರಿಕಂ-ಅವರ ಶ್ರೀಪಾದಸಂಬಂಧವಾದ, ಭವ ಸಂಕ್ಷಾಳಿತ ತೋಯಮೇ-ಸಂಸಾರವೆಂಬ ಪಂಕವನ್ನು ತೊಳೆವಂಥ ಉದಕವೇ, ವಿಮಲತೀರ್ಥಂ-ನಿರ್ಮಲವಾದ ತೀರ್ಥವು, ತತ್ಪದಾಂಭೋಜಯುಗ್ಮವೆ-ಅವರ ಪಾದಾರವಿಂದದ್ವಂದ್ವವೆ, ದೈವಂ-ಆರಾಧಿಸುವ ದೈವವು, ಜಡ ಭೌತಿಕಪ್ರಕೃತಿ ತೀರ್ಥಕ್ಷೇತ್ರ ದೈವಂಗಳ್, ಎಂಬ, ಇವು-ತಾವು, ಮಿಕ್ಕ-ಪ್ರಾಕೃತರಾದ, ಅಜ್ಞರಿ ಗೈಸೆ-ಅಜ್ಞಾನಿಗಳಿಗಷ್ಟೆ? "ಇದಂ ತೀರ್ಥಮಿದಂ ಕ್ಷೇತ್ರಂಭ್ರಮಂತಿತಮಸಾನರಾಃ" ಎಂದುಂಟಾಗಿ, ನಿಮ್ಮವರ್-ನಿಮ್ಮ ಶರಣರು, ಇವಂ, ಪೊರ್ದರ್-ಸೋಂಕರು.

**ಭಾವಾರ್ಥಬೋಧಿನಿ** – ಎಲೈ ಗಿರಿಜಾರಮಣನೆ, ಶಿವಜ್ಞಾನಿಗಳಾದ ಶರಣರ ಪಾದಕಮಲಧೂಳಿಯು ಎಲ್ಲಿ ಬೀಳುವುದೋ ಅದು ಪುಣ್ಯಕ್ಷೇತ್ರವೆನಿಸುವುದು.

ಆ ಶರಣರ ಚರಣಸಂಬಂಧಿಯಾದ ಭವದೋಷಹರವಾದ ಜಲವೇ ಪಾವನತೀರ್ಥ ವೆನಿಸುವುದು. ಅವರ ಪಾದಕಮಲಯುಗಳವೇ ದೈವವೆನಿಸುವುದು. ಆ ಚೇತನವೂ ಭೂತಸಂಬಂಧವೂ, ಮಾಯಾಮಯವೂ ಆಗಿರುವ ತೀರ್ಥಕ್ಷೇತ್ರದೈವಂಗಳೆಂಬಿವು ಮಿಕ್ಕ ಪ್ರಾಕೃತರಾದ ಅಜ್ಞಾನಿಗಳಿಗೆ ಸೇವ್ಯವಾಗಿರುವವಷ್ಟೆ. ನಿಮ್ಮ ಶರಣರು ಈ ಪ್ರಾಕೃತತೀರ್ಥಕ್ಷೇತ್ರದೈವಂಗಳನ್ನು ಹೊಂದಲಾರರು. ೧೯

**ಮತ್ತೇಭವಿಕ್ರೀಡಿತಂ**

ಶಿವಭಕ್ತಂ ಗಿರಿ ಕಾಶಿ ಹಂಪೆ ಮೊದಲಾದ ಕ್ಷೇತ್ರತೀರ್ಥಂಗಳೆಂ
ಬಿವನೆಂದುಂ ಪೆಸರ್ಗೊಳ್ಳನಾಲಿಸನತೀವಾಕಾಂಕ್ಷೆಯಿಂ ಪೋಗನು
ತ್ಸವದಿಂ ನೋಡನಕೃತ್ಯಕೃತ್ಯಮುಮನೇನಂ ಮಾಡ ನಿಷ್ಟಾರ್ಥಮಂ
ನೆವದಿಂ ಬೇಡನನನ್ಯಭಾವ ಪರಿಪೂರ್ಣಾತ್ಮಂ ಶಿವಾವಲ್ಲಭಾ ೨೦

**ಟೀಕೆ :** ಅನನ್ಯಭಾವ ಪರಿಪೂರ್ಣಾತ್ಮಂ - ಅನನ್ಯಭಾವ - ಶಿವಂಗೆಯೂ ತನಗೆಯೂ ಅಭೇದಬುದ್ಧಿಯನುಳ್ಳ, ಪರಿಪೂರ್ಣಾತ್ಮಂ - ಅಖಂಡಿತಸ್ವರೂಪನಾದ, ಶಿವಭಕ್ತಂ - ಶಿವಶರಣನು, ಗಿರಿ, ಕಾಶಿ ಹಂಪೆ ಮೊದಲಾದ - ಪರ್ವತ ವಾರಣಾಸಿ ಹಂಪೆ ಮೊದಲಾದ, ಕ್ಷೇತ್ರತೀರ್ಥಂಗಳೆಂಬ - ಪುಣ್ಯಕ್ಷೇತ್ರ ಪುಣ್ಯತೀರ್ಥಂಗಳೆಂಬ, ಇವಂ - ಇವುಗಳನ್ನು, ಎಂದುಂ - ಯಾವಾಗಲೂ, ಪೆಸರ್ಗೊಳ್ಳಂ - ಹೆಸರುಹಿಡಿಯನು, ಆಲಿಸಂ - ಅವರ ಅತಿಶಯವಂ ಕೇಳನು, ಅತೀವಾಕಾಂಕ್ಷೆಯಿಂ - ಅತ್ಯಂತಾಪೇಕ್ಷೆಯಿಂದ, ಪೋಗಂ ಉತ್ಸವದಿಂ - ಒಸಗೆಯಿಂದ, ನೋಡಂ, ಅಕೃತ್ಯಕೃತ್ಯಮುಮಂ - ಮಾಡಬಾರದುದನ್ನೂ ಮಾಡಬೇಕಾದುದನ್ನೂ, ಏನಂ - ಯಾವುದನ್ನೂ, ಮಾಡಂ - ಆಚರಿಸನು, ಇಷ್ಟಾರ್ಥಮಂ - ತನಗೆ ಬೇಕಾದ ಪ್ರಯೋಜನವನ್ನು, ನೆವದಿಂ - ಒಂದುವ್ಯಾಜದಿಂ, ಬೇಡಂ - ಯಾಚಿಸನು. ೨೦

**ಭಾವಾರ್ಥಬೋಧಿನಿ :** ಶಿವನಿಗೂ ತನಗೂ ಭೇದವಿಲ್ಲವೆಂದರಿದು ಪರಿಪೂರ್ಣಾತ್ಮನಾದ ಶಿವಶರಣನು ಶ್ರೀಶೈಲ, ಕಾಶಿ, ಹಂಪೆ ಮೊದಲಾದ ಕ್ಷೇತ್ರಗಳ ಮತ್ತು ತತ್ ಕ್ಷೇತ್ರಗತತೀರ್ಥಂಗಳ ಹೆಸರನ್ನು ಎಂದಿಗೂ ಎತ್ತಲಾರನು; ಆ ಕ್ಷೇತ್ರ ತೀರ್ಥಗಳ ಮಹತ್ವಕ್ಕೆ ಕಿವಿಗೊಡನು, ಪುಣ್ಯದಾಸೆಯಿಂದ ಆ ಸ್ಥಲಗಳಿಗೆ ಹೋಗನು. ಉತ್ಸುಕತೆಯಿಂದ ಆ ಸ್ಥಾನಗಳನ್ನು ನೋಡನು; ಅವುಗಳಿಗೆ

ಸಂಬಂಧಿಸಿದ ವಿಧಿನಿಷೇಧಗಳನ್ನೂ ಆಚರಿಸನು; ತನಗೆ ಬೇಕಾದ ಪ್ರಯೋಜನವನ್ನು ಯಾವ ನೆವದಿಂದಲೂ ಯಾಚಿಸನು. ೨೦

**ಮತ್ತೇಭವಿಕ್ರೀಡಿತಂ**

ಜಲಮುಂ ಪಾವನತೀರ್ಥಮುಂ ವಿಮಲಪುಣ್ಯಕ್ಷೇತ್ರಮುಂ ಕಾಡಪಾ
ಳ್ನೆಲನುಂ ಶ್ರೇಷ್ಠತಮಾದ್ರಿಯುಂ ಮೊರಡಿಯುಂ ಪ್ರಖ್ಯಾತಿಪಾದೈವಮುಂ
ಶಿಲೆಯುಂ ಭಕ್ತಿ ಪರಾನುಭೂತಿ ಶಿವಯೋಗಜ್ಞಾನನಿಷ್ಪನ್ನಷ
ಟ್ಸ್ಥಲಲಿಂಗಾಂಗನಿಜೈಕ್ಯ ದೃಷ್ಟಿಗೆ ಸಮಂ ಸರ್ವಂ ಶಿವಾವಲ್ಲಭಾ ೨೧

**ಟೀಕೆ** : ಭಕ್ತಿಪರಾನುಭೂತಿ ಶಿವಯೋಗಜ್ಞಾನನಿಷ್ಪನ್ನಷಟ್ಸ್ಥಲ ಲಿಂಗಾಂಗ ನಿಜೈಕ್ಯ ದೃಷ್ಟಿಗೆ - ಭಕ್ತಿ - ಶಿವಭಕ್ತಿಯನುಳ್ಳ, ಪರಾನುಭೂತಿ - ಮಹಾಜ್ಞಾನವ ನುಳ್ಳ, ಶಿವಯೋಗಜ್ಞಾನ - ಶಿವಸಾಮರಸ್ಯಜ್ಞಾನದಲ್ಲಿ, ನಿಷ್ಪನ್ನ - ಸಿದ್ಧಿಯುಳ್ಳ, ಷಟ್ಸ್ಥಲ - ಷಟ್ಸ್ಥಲಸಂಬಂಧವಾದ, ಲಿಂಗಾಂಗ ನಿಜೈಕ್ಯ - ಲಿಂಗಾಂಗಸಮರಸೈ ಕ್ಯವುಳ್ಳವರುಗಳ, ದೃಷ್ಟಿಗೆ - ಜ್ಞಾನದೃಷ್ಟಿಗೆ, ಜಲಮುಂ - ಭೌತಿಕಜಲವೂ, ಪಾವನತೀರ್ಥಮುಂ - ಪುಣ್ಯತೀರ್ಥವೂ, ವಿಮಲಪುಣ್ಯ ಕ್ಷೇತ್ರಮುಂ - ವಿಮಲ - ನಿರ್ಮಲವಾದ, ಪುಣ್ಯಕ್ಷೇತ್ರಮುಂ – ಪುಣ್ಯಕ್ಷೇತ್ರವೂ, ಕಾಡ – ಅಡವಿಯ, ಪಾಳ್ನೆಲನುಂ - ಹಾಳುಭೂಮಿಯೂ, ಶ್ರೇಷ್ಠತಮಾದ್ರಿಯುಂ – ಅಧಿಕತರವಾದ ಪರ್ವತವೂ, ಮೊರಡಿಯುಂ - ಕಲ್ಮೊರಡಿಯೂ, ಪ್ರಖ್ಯಾತಿಪ - ಪ್ರಸಿದ್ಧವಾದ, ಆ ದೈವಮುಂ - ದೈವವೂ, ಶಿಲೆಯುಂ - ಪಾಷಾಣವೂ, ಸರ್ವಂ - ಇವೆಲ್ಲವೂ, ಸಮಂ - ಸರಿಯಾಗಿರ್ಪವು. ೨೧

**ಭಾವಾರ್ಥಬೋಧಿನಿ** : ಶಿವಭಕ್ತಿ ಶಿವಜ್ಞಾನದಿಂದ ಕೂಡಿದ ಶಿವಯೋಗಾ ನುಭವದಲ್ಲಿ ಸಿದ್ಧಿಯುಳ್ಳುದಾದ ಷಟ್‌ಸ್ಥಲಲಿಂಗಾಂಗಸಾಮರಸ್ಯವ ಪಡೆದ ಶಿವ ಶರಣರ ದೃಷ್ಟಿಗೆ ಸಾಮಾನ್ಯ ಜಲವೂ - ಪವಿತ್ರತೀರ್ಥವೂ, ಪುಣ್ಯಕ್ಷೇತ್ರವೂ - ಅಡವಿಯ ಹಾಳುನೆಲವೂ, ಅಧಿಕತರಪರ್ವತವೂ-ಕಲ್ಮೊರಡಿಯೂ, ಪ್ರಸಿದ್ಧವಾದ ದೇವ ವಿಗ್ರಹವೂ - ಸಾಮಾನ್ಯಶಿಲೆಯೂ, ಇವೆಲ್ಲವೂ ಸಮಾನವಾಗಿಯೇ ತೋರು ವವು. ಎಂದರೆ - ಶಿವಯೋಗಿಯಾದ ಶರಣನಿಗೆ ತರತಮಭಾವವಡಗಿರುವುದರಿಂದ

ಆತನ ಶಿವದೃಷ್ಟಿಗೆ ಸರ್ವವೂ ಶಿವಮಯವಾಗಿಯೇ ಕಾಣುವುದೆಂದು ತಾತ್ಪರ್ಯ. ೨೧



**ಶಾರ್ದೂಲ ವಿಕ್ರೀಡಿತ ವೃತ್ತಂ**

ತಾನೇನಿರ್ಮಲತೀರ್ಥ ಮುತ್ತಮಮಹಾಕ್ಷೇತ್ರಂ ಪರಂ ದೈವತಂ
ಜ್ಞಾನಧ್ಯಾನಸಮಾಧಿ ಮಂತ್ರಜಪಪೂಜಾಹೋಮನೇಮಾದ್ಯನು
ಷ್ಠಾನಂ ಸಿದ್ಧಿಯು ಮೈಹಿಕಂ ಸುಖದ ಮಪ್ಪಾಮುಷ್ಮಿಕಂ ಸರ್ವಮುಂ
ನೀನಾನೆಂಬೆರಡಿಲ್ಲದಿರ್ಪ ಶಿವಯೋಗೀಂದ್ರಂ ಶಿವಾವಲ್ಲಭಾ ೨೨

**ಟೀಕೆ :** ನೀಂ ಆಂ ಎಂಬ - ನೀನು ನಾನು ಎಂಬ, ಎರಡಿಲ್ಲದಿರ್ಪ - ಭಿನ್ನಭಾವವಿಲ್ಲದಿರ್ಪ - ಶಿವಯೋಗೀಂದ್ರಂ - ಶಿವಯೋಗೀಶ್ವರನು, ನಿರ್ಮಲ ತೀರ್ಥಂ - ಶುದ್ಧವಾದ ತೀರ್ಥವು, ಉತ್ತಮ ಮಹಾಕ್ಷೇತ್ರವು - ದೊಡ್ಡಿತ್ತಾದ ಮಹಾಕ್ಷೇತ್ರವು, ಪರದೈವತಂ - ಅಧಿಕವಾದ ಮಹಾದೈವವು, ಜ್ಞಾನ......... ಅನುಷ್ಠಾನಂ - ಜ್ಞಾನ - ಜ್ಞಾನವು, ಧ್ಯಾನ - ಧ್ಯಾನವು, ಸಮಾಧಿ - ಸಮಾಧಿಯು, ಮಂತ್ರಜಪ - ಮಂತ್ರಜಪವು, ಪೂಜಾ - ಪೂಜೆಯು, ಹೋಮ - ಹೋಮ, ನೇಮ - ನಿಯಮವು ಇವೇ ಆದಿಮೊದಲಾದವುಗಳ, ಅನುಷ್ಠಾನಂ-ಆಚರಣೆಯೂ, ಸಿದ್ಧಿಯುಂ – ಅವರಿಂದಪ್ಪಸಿದ್ಧಿಗಳು, ಐಹಿಕಂ – ಇಹಲೋಕದ ಸುಖವು, ಸುಖದಮಪ್ಪ - ಪರಿಣಾಮವ ಕೊಡುವಂಥ, ಆಮುಷ್ಮಿಕಂ - ಪರಲೋಕ ಸುಖವು, ಸರ್ವಮುಂ - ಇವೆಲ್ಲವೂ, ತಾನೆ - ಶರಣತಾನೆಯಾಗಿರ್ಪನು. ೨೨

**ಭಾವಾರ್ಥ ಬೋಧಿನಿ :** ತನಗೂ ಶಿವನಿಗೂ ಭೇದವಿಲ್ಲೆಂಬ ಅನುಭವದಿಂದ ತಾನೇ ಶಿವನಾಗಿ ಶೋಭಿಸುವ ಶಿವಯೋಗೀಂದ್ರನೇ ನಿರ್ಮಲತೀರ್ಥವೂ, ಮಹಾ ಕ್ಷೇತ್ರವೂ, ಅಧಿಕವಾದ ದೈವವೂ, ಜ್ಞಾನ - ಧ್ಯಾನ - ಸಮಾಧಿ - ಮಂತ್ರಜಪ- ಅರ್ಚನ - ಹೋಮ - ನಿಯಮ ಇವೇ ಮೊದಲಾದವುಗಳ ಆಚರಣೆಯೂ, ಅವುಗಳ ಸಿದ್ಧಿಯೂ, ಇಹಪರಸುಖಗಳೂ, ಆಗಿ ರಾಜಿಸುವನು. ೨೨

## ಶಾರ್ದೂಲ ವಿಕ್ರೀಡಿತ ವೃತ್ತಂ

ಎಲ್ಲಂ ತನ್ನೊಳು ತಾನದೆಲ್ಲದರೊಳೇಕಾಕಾರವಾಗಿರ್ದು ಮ
ತ್ತಿಲ್ಲೆಂಬಂತೆ ತದನ್ಯವಾಗಿ ಚರಿಸುತ್ತಿರ್ಪಂದಮಂ ನೆಟ್ಟನಾ
ರ್ಬಲ್ಲರ್ ಷಟ್ಸ್ಥಲನಿಷ್ಕಳಾಮಳಪರಬ್ರಹ್ಮಾಂಗಲಿಂಗೈಕ್ಯ ಸೌ
ಖ್ಯೋಲ್ಲಾಸಾಸ್ಪದನಪ್ಪ ಭಕ್ತನನುವಂ ಪೇಳಾ ಶಿವಾವಲ್ಲಭಾ ೨೩

**ಟೀಕೆ :** ಎಲ್ಲಂ-ತೀರ್ಥಕ್ಷೇತ್ರ ಮೊದಲಾದುವೆಲ್ಲವೂ, ತನ್ನೊಳು-ಶರಣನಾದ ತನ್ನಲ್ಲಿ, ತಾಂ-ಆ ಶರಣನು ತಾನು, ಅದೆಲ್ಲದರೊಳ್-ಆ ಎಲ್ಲದರಲ್ಲಿಯೂ, ಏಕಾಕಾರ ವಾಗಿರ್ದು-ಏಕ ಸ್ವರೂಪವಾಗಿರ್ದು, ಮತ್ತೆ-ಮರಳಿ, ಇಲ್ಲೆಂಬಂತೆ-ಅವರಲ್ಲಿ ಪೊರ್ದದ ಹಾಂಗೆ, ತದನ್ಯನಾಗಿ-ಅದಕ್ಕೆ ವಿಲಕ್ಷಣನಾಗಿ, ಚರಿಸುತ್ತಿರ್ಪ-ಆಚರಿಸು ತ್ತಿರ್ಪ, ಅಂದಮಂ-ಮಾರ್ಗವನ್ನು, ನೆಟ್ಟನೆ-ಚೆನ್ನಾಗಿ, ಆರ್ಬಲ್ಲರ್-ನೀನಲ್ಲದೆ ಯಾರು ಬಲ್ಲರು ! ಷಟ್ಸ್ಥಲ.........ಸ್ಪದನಪ್ಪ-ಷಟ್ಸ್ಥಲದಲ್ಲಿಯ, ನಿಷ್ಕಳ-ಕಳಾ ರಹಿತವಾದ, ಅಮಳ-ನಿರ್ಮಳವಾದ, ಪರಬ್ರಹ್ಮ-ಪರಬ್ರಹ್ಮವೆಂಬ, ಅಂಗಲಿಂಗೈಕ್ಯ-ಲಿಂಗಾಂಗಸಮರಸದ, ಸೌಖ್ಯ-ಪರಿಣಾಮದ, ಉಲ್ಲಾಸ-ವಿಲಾಸಕ್ಕೆ, ಆಸ್ಪದನಪ್ಪ-ಸ್ಥಾನವಾದ, ಭಕ್ತನ-ಶಿವಶರಣನ, ಅನುವಂ-ಇರವನ್ನು, ಪೇಳಾ-ಪೇಳು.

**ಭಾವಾರ್ಥಬೋಧಿನಿ** - ಶಿವಾಧವನೆ, ಷಟ್‌ಸ್ಥಲಗತನಿಷ್ಕಳಲಿಂಗಾಂಗ ಸಾಮರಸ್ಯವನುಳ್ಳ ಶಿವಶರಣನ ಸ್ಥಿತಿಯು ಅಸದೃಶವು. ಆತನಲ್ಲಿ ಸರ್ವತೀರ್ಥ ಕ್ಷೇತ್ರಗಳೂ, ಸರ್ವತೀರ್ಥಕ್ಷೇತ್ರಗಳಲ್ಲಿ ಆತನೂ ಏಕರೂಪವಾಗಿದ್ದರೂ ಆ ಶರಣನು ಅವುಗಳನ್ನು ಹೊಂದದೆ ಅವುಗಳಿಗೆ ಅನ್ಯನಾಗಿ ವರ್ತಿಸುವನು. ಆ ಮಹಿಮನ ವರ್ತನದ ಗುಟ್ಟನ್ನು ನೀನಲ್ಲದೆ ಮತ್ತಾರರಿವರು ಹೇಳು. (ಶರಣನ ವರ್ತನವು ಲೋಕವಿಲಕ್ಷಣವೆಂದು ತಾತ್ಪರ್ಯ) ೨೩

## ಮತ್ತೇಭವಿಕ್ರೀಡಿತಂ

ಶಿವಲಿಂಗಂ ಪತಿ ತಾನೆ ತತ್ಸತಿಯೆನಿಪ್ಪಾಭಾವಸತ್ಯವ್ರತೋ
ತ್ಸವ ತಾತ್ಪರ್ಯ ಪತಿವ್ರತೈಕನಿಯಮಾತ್ತ ಪ್ರಾಣಲಿಂಗಾಂಗ ಸಂ
ಗವಿಲಾಸಾಸ್ಪದನಿಷ್ಠೆಯಿಂದಿತರ ತೀರ್ಥಕ್ಷೇತ್ರದೈವಂಗಳಿಂ
ಬಿವನೆಂಮುಂಬಗೆಗೊಳ್ಳನುದ್ಧತಗುಣಂ ಭಕ್ತಂ ಶಿವಾವಲ್ಲಭಾ ೨೪

**ಟೀಕೆ :** ಉದ್ಧತಗುಣಂ-ಅಧಿಕವಾದ ಗುಣವನುಳ್ಳ, ಭಕ್ತಂ-ಶಿವಭಕ್ತನು, ಶಿವಲಿಂಗಂ-ಶಿವಲಿಂಗವು, ಪತಿ-ಪುರುಷನು, ತಾನೆ, ಆ ಶರಣ ತಾನೆ, ತತ್ಸತಿ-ಆ ಶಿವ ಲಿಂಗದ ಸತಿಯು, ಎನಿಪ್ಪ-ಹೀಗೆಂಬ, ಆಭಾವಸತ್ಯವ್ರತೋತ್ಸವತಾತ್ಪರ್ಯ ಪತಿವ್ರತೈಕ ನಿಯಮಾತ್ತ (ಪ್ರಾಣಲಿಂಗಾಂಗಸಂಗವಿಲಾಸಾಸ್ಪದ ನಿಷ್ಠೆಯಿಂದೆ-ಆಭಾವ-ಆ ನಿಲುಗಡೆಯಲ್ಲಿಯು, ಸತ್ಯವ್ರತ-ಸಹಜವ್ರತದಲ್ಲಿ, ಉತ್ಸವ-ಒಸಗೆಯುನುಳ್ಳ, ತಾತ್ಪರ್ಯ-ಎರಕದಿಂದೆ, ಪತಿವ್ರತೈಕ ನಿಯಮ-ಪಾತಿವ್ರತ್ಯವೊಂದೆಯೆಂಬ ನಿಯಮದಿಂ, ಆತ್ತ-ಸ್ವೀಕರಿಸಲ್ಪಟ್ಟ, ಪ್ರಾಣಲಿಂಗಾಂಗಸಂಗ-ಪ್ರಾಣ ಲಿಂಗಾಂಗಸಂಬಂಧದ, ವಿಲಾಸ-ಲೀಲೆಗೆ, ಆಸ್ಪದ-ಸ್ಥಾನವಾದ, ನಿಷ್ಠೆಯಿಂದೆ-ಧೃಢತ್ವದಿಂದೆ, ಇತರ ತೀರ್ಥಕ್ಷೇತ್ರದೈವಂಗಳ್-ಅನ್ಯವಾದ ಪುಣ್ಯತೀರ್ಥ ಪುಣ್ಯ ಕ್ಷೇತ್ರದೈವಂಗಳು, ಎಂಬ ಇವಂ-ಎಂಬಿವುಗಳನ್ನು, ಎಂದುಂ-ಆವ ಕಾಲದಲ್ಲಿಯೂ ಬಗೆಗೊಳ್ಳಂ-ಮನಸ್ಸಿಗೆ ತಾರನು.

**ಭಾವಾರ್ಥಬೋಧಿನಿ** - ಶ್ರೇಷ್ಠಗುಣಯುತನೂ, ತಾನೇ ಸತಿ ಲಿಂಗವೇ ಪತಿಯೆಂಬ ದೃಢಭಾವವುಳ್ಳವನೂ, ಲಿಂಗಪೂಜಾವ್ರತದ ಸಂತೋಷವುಳ್ಳವನೂ ಆದ ಶರಣನು, ನಿಜಲಿಂಗಪಾತಿವ್ರತ್ಯ ನಿಯಮದಿಂದ ಪ್ರಾಪ್ತವಾದ ಪ್ರಾಣಲಿಂಗಾಂಗ ಸಂಬಂಧ ಲೀಲಾಸ್ಪದವಾದ ನಿಷ್ಠೆಯಿಂದಿರ್ದು, ಇತರ ತೀರ್ಥಕ್ಷೇತ್ರದೈವಂಗಳೆಂಬಿವುಗಳನ್ನು ಎಂದಿಗೂ ಮನಸ್ಸಿಗೆ ತಂದುಕೊಳ್ಳನು. (ಶರಣನು ತೀರ್ಥಕ್ಷೇತ್ರ ಕಾಂಕ್ಷೆಗೆ ದೂರನಿರುವನೆಂದು ಭಾವ) ೨೪

**ಮತ್ತೇಭವಿಕ್ರೀಡಿತಂ**

ನೆಲನಂ ನೀರುಮನಾಹ ಬೆಟ್ಟಮಿದೆಂ ಕೊಂಡಾಡುವರ್ ಕ್ಷೇತ್ರಮೆಂ
ದೆಲೆ ಪುಣ್ಯಾಮಳತೀರ್ಥಮೆಂದು ಗಿರಿಯೆಂದಯ್ಯೋ ಶಿವಜ್ಞಾನಯೋ
ಗಲಸದ್ಭಕ್ತಿವಿಹೀನರಪ್ಪ ಭವಿಗಳ್ ಸುಕ್ಷೇತ್ರಮುಂ ತೀರ್ಥಮುಂ
ಕುಲಶೈಲಂ ಶಿವಭಕ್ತನೆಂದು ತಿಳಿಯಲ್ನೋಡಾ ಶಿವಾವಲ್ಲಭಾ ೨೫

**ಟೀಕೆ :** ಶಿವಜ್ಞಾನಯೋಗಲಸದ್ಭಕ್ತಿವಿಹೀನರಪ್ಪ - ಶಿವಜ್ಞಾನಯೋಗ-ಶಿವಜ್ಞಾನಯೋಗಸಂಬಂಧದಿಂದ, ಲಸತ್-ಒಪ್ಪುತ್ತಲಿರುವ, ಭಕ್ತಿ-ಭಕ್ತಿಯುತ್ತಿಹಿಂ,

ವಿಹೀನರಪ್ಪ-ರಹಿತರಾದ, ಭವಿಗಳ್-ಪಾಶಬದ್ಧರು, ಕ್ಷೇತ್ರಮೆಂದು-ಪುಣ್ಯಕ್ಷೇತ್ರ ವೆಂದು, ಪುಣ್ಯಾಮಳತೀರ್ಥಮೆಂದು-ಪುಣ್ಯ-ಪವಿತ್ರವಾದ, ಅಮಳ-ನಿರ್ಮಳವಾದ, ತೀರ್ಥಮೆಂದು-ತೀರ್ಥವು ಎಂದು, ಗಿರಿಯೆಂದು-ಪರ್ವತಮೆಂದು, ನೆಲನಂ-ನೆಲ ವನ್ನು, ನೀರುಮಂ-ನೀರನ್ನೂ, ಬೆಟ್ಟಮಂ-ಮೊರಡಿಯನ್ನು, ಇದೇಂ ಕೊಂಡಾಡು ವರ್-ಇದೇನು ಕೊಂಡಾಡುವರು, ಅಯ್ಯೋ-ಅಕ್ಕಟಾ, ಆಹಾ-ಆಶ್ಚರ್ಯವು, ಸುಕ್ಷೇತ್ರಮುಂ-ಒಳ್ಳೆತ್ತಾದ ಕ್ಷೇತ್ರವೂ, ತೀರ್ಥಮುಂ-ಪುಣ್ಯತೀರ್ಥವೂ,ಕುಲಶೈಲಂ-ಕುಲಪರ್ವತವೂ, ಶಿವಭಕ್ತನೆಂದು-ಶಿವಶರಣನೆಂದು, ತಿಳಿಯರ್-ಅರಿಯರು, ನೋಡಾ-ನೋಡು.

**ಭಾವಾರ್ಥಬೋಧಿನಿ** – ಪಾರ್ವತೀಪತಿಯೆ, ಶಿವಜ್ಞಾನ-ಶಿವಯೋಗ-ಶಿವ ಭಕ್ತಿಗಳಿಗೆ ದೂರಾದ ಭವಿಗಳು ನೆಲ ನೀರು ಬೆಟ್ಟ ಇವುಗಳನ್ನೇ ಕ್ರಮವಾಗಿ-ಪುಣ್ಯ ಕ್ಷೇತ್ರ, ಪವಿತ್ರತೀರ್ಥ, ಶ್ರೀಗಿರಿಯೆಂದು ಕೊಂಡಾಡುತ್ತಿಪ್ಪರು. ಅಯ್ಯೋ! ಶಿವ ಶರಣನೇ ಕ್ಷೇತ್ರಸ್ವರೂಪನೂ, ಪುಣ್ಯತೀರ್ಥಸ್ವರೂಪನೂ, ಶ್ರೀಗಿರಿಯೂ ಆಗಿರುವ ನೆಂಬುದನ್ನು ಅವರು ತಿಳಿಯರೇಕೆ ? ನೋಡು. ೨೫

**ಮತ್ತೇಭವಿಕ್ರೀಡಿತಂ**

ಸಲೆ ನೀರ್ಮೀನ್ಮಿಡಿಚಿಲ್ಲಮುತ್ತಮ ಮಹಾತೀರ್ಥಂ ಶಿವಜ್ಞಾನಯೋ
ಗಲಸದ್ಭಕ್ತಿ ಪರಾಯಣಂ ಗುಳಿತೆವರ್ ಮಣ್ಣಿಲ್ಲದುತ್ಕೃಷ್ಟನಿ
ರ್ಮಲ ಸುಕ್ಷೇತ್ರಮಖಂಡಪೂರ್ಣ ಸುಮಹಲ್ಲಿಂಗಾಂಗಸಂಬಂಧಿತಾ
ನೆಲೆಕೇಳ್ ಕಲ್ಮರಮಟ್ಟಯಿಲ್ಲದ ಮಹಾಶೈಲಂ ಶಿವಾವಲ್ಲಭಾ ೨೬

**ಟೀಕೆ :** ಶಿವಜ್ಞಾನಯೋಗಲಸದ್ಭಕ್ತಿಪರಾಯಣಂ - ಶಿವಜ್ಞಾನಯೋಗ-ಶಿವಜ್ಞಾನ ಸಂಬಂಧದಿಂದ, ಲಸತ್ - ಒಪ್ಪುತ್ತಿರುವ, ಭಕ್ತಿಪರಾಯಣಂ - ಭಕ್ತಿಯಲ್ಲಿ ತಾತ್ಪರ್ಯವನುಳ್ಳ, ಅಖಂಡಪೂರ್ಣಸುಮಹಲ್ಲಿಂಗಾಂಗಸಂಬಂಧಿ - ಅಖಂಡ-ಒಂದೆಯಾದ, ಪೂರ್ಣ - ಪರಿಪೂರ್ಣವಾದ, ಸುಮಹತ್ - ಮಿಗೆದೊಡ್ಡಿತ್ತಾದ ಲಿಂಗಾಂಗಸಂಬಂಧಿ - ಲಿಂಗಾಂಗಸಂಬಂಧವನುಳ್ಳ, ತಾಂ - ಆ ಶರಣತಾನು, ಸಲೆ - ಚೆನ್ನಾಗಿ, ನೀರ್ಮೀನ್ಮಿಡಿಚು – ನೀರುಮೀನುಮಿಡತೆ, ಇಲ್ಲದ,

ಉತ್ತಮ ಮಹಾತೀರ್ಥ-ಸರ್ವೋತ್ಕೃಷ್ಟವಾದ ಮಹಾತೀರ್ಥವು, ಗುಳತೆವರ್ ಮಣ್ಣಿಲ್ಲದ-ಹಳ್ಳತಿಟ್ಟು ಮಣ್ಣಿಲ್ಲದ, ಉತ್ಕೃಷ್ಟ ನಿರ್ಮಲ ಸುಕ್ಷೇತ್ರಂ-ಉತ್ಕೃಷ್ಟ-ಉತ್ತಮವಾದ, ನಿರ್ಮಲ-ಸ್ವಚ್ಛವಾದ, ಸುಕ್ಷೇತ್ರಂ-ಒಳ್ಳೆತ್ತಾದ ಕ್ಷೇತ್ರವು, ಕಲ್ಮರಮಟ್ಟೆಯಿಲ್ಲದ-ಪಾಷಾಣಮರಮಣ್ಣುಗಳಿಲ್ಲದ, ಮಹಾಶೈಲಂ-ದೊಡ್ಡದಾದ ಪರ್ವತವು.

**ಭಾವಾರ್ಥಬೋಧಿನಿ** – ಶಿವಾವಲ್ಲಭನೆ, ಕೇಳು, ಶಿವಜ್ಞಾನಸಂಬಂಧದಿಂದ ಬೆಳಗುವ ಶಿವಭಕ್ತಿಗೆ ಅಧೀನನಾಗಿಯೂ, ಅಖಂಡವೂ ಪರಿಪೂರ್ಣವೂ ಆದ ಮಹಾಲಿಂಗಸಾಮರಸ್ಯವುಳ್ಳವನೂ ಆದ ಶಿವಶರಣನೇ, ನೀರು, ಮೀನು ಮಿಡತೆಗಳೊಂದೂ ಇಲ್ಲದ ಮಹಾತೀರ್ಥವಾಗಿರುವನು. ಆತನೇ ಹಳ್ಳ ತಿಟ್ಟು ಮಣ್ಣಿಲ್ಲದ ಉತ್ಕೃಷ್ಟವಾದ ಕ್ಷೇತ್ರವೂ, ಕಲ್ಮರಮಟ್ಟೆಗಳಿಲ್ಲದ ಶ್ರೀಗಿರಿಯೂ ಆಗಿರುವನು. ಎಂದರೆ, ಶಿವಶರಣನೇ ತೀರ್ಥಕ್ಷೇತ್ರಾದಿರೂಪನಾಗಿ ಸೇವ್ಯನಾಗಿರುವನೆಂದು ಭಾವ. ೨೬.

**ವಿಚಾರ :** ೬ ರಿಂದ ೨೬ ನೆಯ ಪದ್ಯದ ವರೆಗೂ ಇರುವ ಪದ್ಯಗಳಲ್ಲಿ ತೀರ್ಥ ಕ್ಷೇತ್ರಗಳ ವಿಚಾರವಿರುವುದಷ್ಟೆ. ಈ ಪದ್ಯಗಳಲ್ಲಿ ವೀರಶೈವರಿಗೆ ಸ್ಥಾವರ ಲಿಂಗಗಳ ಮತ್ತು ಇತರ ದೇವತೆಗಳ ಕ್ಷೇತ್ರಗಳೂ ಆ ಕ್ಷೇತ್ರಗತವಾದ ತೀರ್ಥಗಳೂ ಸೇವ್ಯವಲ್ಲವೆಂದು ಹೇಳಿರುವುದಲ್ಲದೆ, ಲಿಂಗಾಂಗಸಾಮರಸ್ಯವುಳ್ಳ ಶರಣನೇ ದೈವವು. ಆತನಿದ್ದ ಸ್ಥಳವೇ ಪುಣ್ಯಕ್ಷೇತ್ರವು. ತತ್ಪಾದತೀರ್ಥವೇ ಪವಿತ್ರತೀರ್ಥವು ಎಂದು ಹೇಳಿರುವುದರಿಂದ ಶರಣರ ಮತ್ತು ಗುರುಜಂಗಮರ ಮಹತ್ವದ ಸ್ಥಾನಗಳು ವೀರಶೈವರಿಗೆ ಸೇವ್ಯವಾಗಿರುವವೆಂಬುದನ್ನು ಮರೆಯಬಾರದು. ಮತ್ತು ವೀರಶೈವರಲ್ಲದವರು ತೀರ್ಥಕ್ಷೇತ್ರಯಾತ್ರೆಯನ್ನು ಮಾಡಬಯಸಿದರೆ, ಹೇಗೆ ಮಾಡಿದರೆ ಪುಣ್ಯವು ಬರುವುದು, ಹೇಗೆ ಮಾಡಿದರೆ ಪಾಪವು ಸಂಭವಿಸುವುದೆಂಬ ವಿಚಾರವೂ ಬಂದಿರುವುದೆಂಬುದನ್ನು ಗ್ರಹಿಸಬೇಕು.

**ಅವತಾರಿಕೆ :** ಇಂತು ಏಕಲಿಂಗನಿಷ್ಠಾಪರನಪ್ಪ ವೀರಮಾಹೇಶ್ವರಂಗೆ ತೀರ್ಥ ಕ್ಷೇತ್ರ ಯಾತ್ರಾಗಮನವೂ ಯೋಗ್ಯಮಲ್ಲೆಂದು ಪೇಳ್ದು ಅನಂತರದಲ್ಲಿ ಅಂತಪ್ಪನಾದಿ ಭಕ್ತನ ಮಹತ್ವಮಂ ಹೇಳುತಿರ್ದಪಂ-

**ಮತ್ತೇಭವಿಕ್ರೀಡಿತಂ**

ಅವಿಭಕ್ತಂ ಶಿವನ ಪ್ರಮೇಯನನುಪಾಸ್ಯಂ ಪೂರ್ಣನಾತ್ಮೈಕರೂ
ಪವಿಶಿಷ್ಟಂ ಭಜಿಸಲ್ಕಸಾಧ್ಯತರನೆಂದೆಂ ದಾತನಂ ಭಕ್ತಿ ಗೌ
ರವದಿಂ ಭಾವಿಸಿ ಭಕ್ತನಾದ ಪರಮಸ್ವಾತಂತ್ರ್ಯಲೀಲಾಕೃತ
ದ್ವಿವಿಧಾಕಾರನನಾದಿಸಿದ್ಧ ಶಿವಭಕ್ತಂ ಕೇಳ್ ಶಿವಾವಲ್ಲಭಾ ೨೭

**ಟೀಕೆ** : ಅವಿಭಕ್ತಂ-ಬೇರ್ಪಡಿಸಲ್ಪಡದಿರ್ಪಂಥ, ಶಿವಂ-ಮಾಂಗಲ್ಯರೂಪ ನಾದಂಥ, ಅಪ್ರಮೇಯಂ-ತಿಳಿಯಲಳವಲ್ಲವಂಥ, ಅನುಪಾಸ್ಯಂ-ಉಪಾಸಿಸಲಳ ವಲ್ಲದಂಥ, ಪೂರ್ಣಂ-ಅಖಂಡಿತನಾದಂಥ, ಆತ್ಮೈಕರೂಪವಿಶಿಷ್ಟಂ-ಆತ್ಮೈಕರೂಪ-ಪರಮಾತ್ಮನೆಂಬೊಂದೇ ರೂಪನಾದ, ವಿಶಿಷ್ಟಂ-ಅಧಿಕತರನಾದ, ಭಜಿಸಲ್ಕೆ-ಅಸಾಧ್ಯ ತರಂ-ಸೇವಿಸುವುದಕ್ಕಸಾಧ್ಯನಾದಾತನು, ಎಂದು-ಹೀಗೆಂದು, ಎಂದೂ-ಆವಾಗಳೂ, ಆತನಂ-ಆ ಮಹಾದೇವನನ್ನು, ಭಕ್ತಿಗೌರವದಿಂ-ಭಕ್ತಿಯ ಅತಿಶಯದಿಂದೆ, ಭಾವಿಸಿ-ತಿಳಿದು, ಭಕ್ತನಾದ-ಭಕ್ತಿಯುಳ್ಳಾತನಾದ, ಪರಮ ಸ್ವಾತಂತ್ರ್ಯಲೀಲಾ ಕೃತದ್ವಿವಿಧಾಕಾರಂ-ಪರಮ-ಮಿಗಿಲಾದ, ಸ್ವಾತಂತ್ರ್ಯ-ಸ್ವತಂತ್ರತ್ವದ, ಲೀಲಾಕೃತ-ವಿಲಾಸದಿಂ ಮಾಡಲ್ಪಟ್ಟ, ದ್ವಿವಿಧಾಕಾರಂ-ಶರಣ ಲಿಂಗವೆಂಬೆರಡು ರೂಪವನುಳ್ಳ, ಅನಾದಿಸಿದ್ಧ ಶಿವಭಕ್ತಂ-ಅನಾದಿಸಂಸಿದ್ಧನಾದ ಶಿವಭಕ್ತನಲಾ.

**ಭಾವಾರ್ಥಬೋಧಿನಿ** - ಶಿವನು ಬೇರ್ಪಡಿಸಲಾಗದವನೂ, ಮಂಗಲ ಮಯನೂ, ತಿಳಿಯಲಸಾಧ್ಯನೂ, ಉಪಾಸಿಸಲಸದಳವಾದವನೂ, ಪೂರ್ಣನೂ, ಪರಮಾತ್ಮನೆಂಬೊಂದೇ ಸ್ವರೂಪವುಳ್ಳವನೂ, ಸೇವಿಸಲಿಕ್ಕೆ ಅಸುಲಭನೂ ಆಗಿರುವ ನೆಂದು, ಯಾವಾಗಲೂ ಆ ಮಹಾದೇವನನ್ನು ಅತಿಶಯವಾದ ಭಕ್ತಿಯಿಂದ ಭಾವಿಸಿ, ಭಕ್ತನಾದ ಶರಣನು ಪರಮ ಸ್ವತಂತ್ರಲೀಲೆಯಿಂದ ಶರಣ, ಲಿಂಗವೆಂಬೆರಡು ರೂಪ ವುಳ್ಳವನಾಗಿ, ಅನಾದಿ ಸಂಸಿದ್ಧ ಭಕ್ತನಾಗಿರುವವನು. ಎಂದರೆ ಶಿವನಿಗೂ ಶಿವಭಕ್ತ ನಿಗೂ ಭೇದವಿಲ್ಲ. ಶಿವನೇ ಅನಾದಿಭಕ್ತನೆನಿಸಿಕೊಂಡು ತನ್ನ ಸ್ವತಂತ್ರಲೀಲೆಯಿಂದ ಶರಣ, ಲಿಂಗವೆಂಬೆರಡು ರೂಪವುಳ್ಳವನಾಗಿರುವನೆಂದು ಭಾವವು. ೨೭

## ಮತ್ತೇಭವಿಕ್ರೀಡಿತಂ

ಶ್ರುತಿವಾಕ್ಯ ಪ್ರತಿಪಾದ್ಯಮಾನಸುಮಹಲ್ಲಿಂಗಾಂಗಸಂಬಂಧ ನಿ
ಶ್ಚಿತ ಸತ್ಯಾರ್ಥ ವಿಶಿಷ್ಟ ಷಟ್ಸ್ಥಲಪರಬ್ರಹ್ಮೋಪದೇಶೋಚಿತೋ
ನ್ನತನಿರ್ವಾಣಸುಖಾನುಭೂತಿವರಭಕ್ತಿಜ್ಞಾನಯೋಗಕ್ರಿಯಾ
ಶ್ರಿತನಾಗನ್ಯಮನೇನುಮಂ ಪರಿಕಿಸಂ ಭಕ್ತಂ ಶಿವಾವಲ್ಲಭಾ ೨೮

**ಟೀಕೆ :** ಭಕ್ತಂ-ಅನಾದಿಭಕ್ತನು, ಶ್ರುತಿ......ಆಶ್ರಿತನಾಗಿ-ಶ್ರುತಿವಾಕ್ಯ-ತತ್ವಮಸ್ಯಾದಿ ಮಹಾವಾಕ್ಯಂಗಳಿಂದೆ, ಪ್ರತಿಪಾದ್ಯಮಾನ-ಪ್ರತಿಪಾದಿಸಲ್ಪಡುತ್ತಿರ್ಪ, ಸುಮಹತ್ - ಅಧಿಕತರವಾದ, ಲಿಂಗಾಂಗಸಂಬಂಧ - ಲಿಂಗಾಂಗಸಮರಸದಲ್ಲಿ, ನಿಶ್ಚಿತ-ನಿರ್ಣೈಸಲ್ಪಟ್ಟ, ಸತ್ಯಾರ್ಥ-ಯಥಾರ್ಥವಾದ, ವಿಶಿಷ್ಟ-ಮಿಗೆಶ್ರೇಷ್ಠವಾದ, ಷಟಸ್ಥಲ-ಷಟ್ಸ್ಥಲಾತ್ಮಕವಾದ, ಪರಬ್ರಹ್ಮ-ಪರಬ್ರಹ್ಮದ, ಉಪದೇಶ-ಉಪದೇಶಕ್ಕೆ, ಉಚಿತ-ಯೋಗ್ಯವಾದಂಥ, ಉನ್ನತ-ಪೆರ್ಚುಗೆಯಾದ, ನಿರ್ವಾಣಸುಖ-ಮೋಕ್ಷಾನಂದದ, ಅನುಭೂತಿ-ಅನುಭವದಿಂದೆ, ವರ-ಉತ್ಕೃಷ್ಟವಾದ, ಭಕ್ತಿಜ್ಞಾನಯೋಗ ಕ್ರಿಯಾ-ಶಿವಭಕ್ತಿ ಶಿವಜ್ಞಾನ ಶಿವಯೋಗಮೆಂಬ ಸತ್ಕ್ರಿಯೆಗಳನ್ನು, ಆಶ್ರಿತನಾಗಿ-ಆಶ್ರೈಸಿದವನಾಗಿ, ಅನ್ಯಮಂ ಏನುಮಂ-ಉಳಿದುದನೇನುವನ್ನೂ, ಪರಿಕಿಸಂ-ಲೆಕ್ಕಿಸನು.

**ಭಾವಾರ್ಥಬೋಧಿನಿ.** ಆ ಅನಾದಿಭಕ್ತನು "ತತ್ತ್ವಮಸಿ" ಮೊದಲಾದ ಮಹಾವಾಕ್ಯಗಳಿಂದ ಪ್ರತಿಪಾದಿತವಾದ ಲಿಂಗಾಂಗಸಾಮರಸ್ಯದ ನಿಶ್ಚಿತಾರ್ಥದಿಂದ ಯುಕ್ತವಾದ ಷಟ್‌ಸ್ಥಲಾತ್ಮಕ ಪರಬ್ರಹ್ಮದ ಉಪದೇಶಕ್ಕೆ ಉಚಿತವಾದ ಲಿಂಗಾಂಗ ಸಾಮರಸ್ಯರೂಪಮುಕ್ತಿಯ ಸುಖದ ಅನುಭವವುಳ್ಳಾತನಾಗಿಯೂ, ಶಿವಭಕ್ತಿ-ಶಿವಜ್ಞಾನ-ಶಿವಯೋಗ ಇವುಗಳ ಆಚರಣೆಗೆ ಆಶ್ರಯನಾಗಿಯೂ ಇದ್ದು, ಉಳಿದುದಾವುದನ್ನೂ ಗಣಿಸದಿರುವನು. ೨೮

## ಮತ್ತೇಭವಿಕ್ರೀಡಿತಂ

ಭಸಿತಾಭ್ಯಸ್ತಧೃತತ್ರಿಪುಂಡ್ರ ವರರುದ್ರಾಕ್ಷಾಂಗಲಿಂಗಾಂಗಯೋ
ಗಸಮಾಧಿಸ್ಥಿತಿಸಾಧ್ಯಸಿದ್ಧಮನುರಾಟ್ಪಂಚಾಕ್ಷರೀಮಂತ್ರಬಾ
ಪಸಮೇತಾತ್ಮಶಿವಸ್ವರೂಪವಿಲಸಚ್ಚಿಂತಾಂತರಂಗಾನುಭಾ
ವಸುಖಾಕಾರನಪಾರಪಾರಮಹಿಮಂ ಭಕ್ತಂ ಶಿವಾವಲ್ಲಭಾ ೨೯

**ಟೀಕೆ :** ಭಸಿತಾ......ಸುಖಾಕಾರಂ-ಭಸಿತ-ಶ್ರೀವಿಭೂತಿಯಿಂ, ಅಭ್ಯಸ್ತ-ಸದಾಭ್ಯಾಸಮಾಡಲ್ಪಟ್ಟ, ಧೃತ-ಧರಿಸಲ್ಪಟ್ಟ, ತ್ರಿಪುಂಡ್ರ-ತಿರ್ಯಕ್ಪುಂಡ್ರದಿಂ, ವರ-ಶ್ರೇಷ್ಠವಾದ, ರುದ್ರಾಕ್ಷ-ರುದ್ರಾಕ್ಷದಿಂದ, ಅಂಗ-ಮುಖ್ಯವಾದ, ("ಅಂಗಂ ಮುಖ್ಯಾಭ್ಯುಪಾಯಯೋಃ" ಎಂದು ಜಯಶೋಕವುಂಟು) ಲಿಂಗಾಂಗಯೋಗ-ಲಿಂಗಾಂಗಸಂಬಂಧದಲ್ಲಿ, ಸಮಾಧಿ-ಚಿತ್ತೈಕಾಗ್ರತೆಯು, ಸ್ಥಿತಿ-ನಿಲುಕಡೆಯಿಂದ, ಸಾಧ್ಯ-ಸಾಧಿಸಲ್ಪತಕ್ಕ, ಸಿದ್ಧ-ಪ್ರಸಿದ್ಧವಾದ, ಮನುರಾಟ್ – ಮಂತ್ರರಾಜನಾದ, ಪಂಚಾಕ್ಷರೀ ಮಂತ್ರ-ಶಿವಪಂಚಾಕ್ಷರೀ ಮಂತ್ರದ, ಜಾಪ-ಜಪದೊಡನೆ, ಸಮೇತ-ಕೂಡಿದ, ಆತ್ಮ-ಶರೀರವನುಳ್ಳ, ಶಿವಸ್ವರೂಪ-ಪರಮಮಂಗಲಸ್ವರೂಪವಾದ, ವಿಲಸತ್-ಒಪ್ಪುತ್ತಲಿರುವ, ಚಿಂತಾ-ಧ್ಯಾನವನುಳ್ಳ, ಅಂತರಂಗ-ಅಂತರಂಗವಲ್ಲಿ, ಅನುಭಾವ-ತತ್ವನಿಶ್ಚಯದಿಂದಲಾದ, ಸುಖಾಕಾರಂ-ಪರಿಣಾಮಸ್ವರೂಪನಾವಂಥ, ಅಪಾರಪಾರಮಹಿಮಂ-ಅಪಾರ-ಕಾಣಿಸಿಕೊಳ್ಳದಿರ್ಪ, ಪಾರ-ಕಾಣಿಸಿಕೊಳ್ಳಲ್ಪತಕ್ಕ, ಮಹಿಮಂ-ಮಹತ್ವವನುಳ್ಳಾತನು, ಭಕ್ತಂ-ಅನಾದಿಸಂಸಿದ್ಧನಾವ ಭಕ್ತನು.

**ಭಾವಾರ್ಥಬೋಧಿನಿ** – ಮತ್ತು ಆ ಅನಾದಿಭಕ್ತನು ವಿಭೂತಿಯ ತ್ರಿಪುಂಡ್ರವನ್ನು ಸದಾ ಧರಿಸಿ, ರುದ್ರಾಕ್ಷಧಾರಿಯಾಗಿ, ಲಿಂಗಾಂಗಯೋಗದಲ್ಲಿ ಚಿತ್ತೈಕಾಗ್ರತೆಯಿಂದ ಕೂಡಿ ಮತ್ತು ಪ್ರಸಿದ್ಧ ಮಂತ್ರರಾಜನೆನಿಸಿದ ಶಿವಪಂಚಾಕ್ಷರೀ ಜಪಸಮೇತನಾಗಿ, ಶಿವಸ್ವರೂಪಧ್ಯಾನಾಂತರಂಗನಾಗಿ, ಶಿವಾನುಭವಸೌಖ್ಯಮಯನಾಗಿ, ಭವಿಗಳಿಗೆ ಗೋಚರವಾಗದ ಭಕ್ತರಿಗೆ ಗೋಚರವಾಗುವ ಮಹತ್ವವುಳ್ಳವನಾಗಿ ಒಪ್ಪುತ್ತಿರುವನು. ೨೯

**ಅವತಾರಿಕೆ :** ಇಂತು ಅನಾದಿಭಕ್ತನ ಮಹತ್ವವನ್ನು ಪೇಳಿದನಂತರದಲ್ಲಿ ಆತನ ಏಕಲಿಂಗ ನಿಷ್ಠಾಪರತ್ವಮಂ ಪೇಳುತಿರ್ದಪಂ.

**ಮತ್ತೇಭವಿಕ್ರೀಡಿತಂ**

ಗುರುದತ್ತಾನುಪಮೇಷ್ಟಲಿಂಗಮೆ ನಿಜಪ್ರಾಣೇಶ್ವರಂ ಮಿಕ್ಕಪಾ
ಮರಲೋಕಸ್ಥಿತಮಪ್ಪ ಲಿಂಗಮನಿತೆಲ್ಲಂ ಮಿಥ್ಯೆಯೆಂಬೇಕಭಾ
ವರತಿಪ್ರತ್ಯಯಭಕ್ತಿನಿಷ್ಠೆ ನೆಲೆಗೊಂಡಿರ್ಪಾತನೇ ಶಶ್ವದು
ತ್ತರನಿರ್ವಾಣಪದ ಪ್ರಸಿದ್ಧ ಶರಣಂ ಸತ್ಯಂ ಶಿವಾವಲ್ಲಭಾ ೩೦

**ಟೀಕೆ :** ಗುರುದತ್ತಾನುಪಮೇಷ್ಟಲಿಂಗಮೆ - ಗುರು - ಶ್ರೀಗುರುವಿನಿಂದೆ, ದತ್ತ - ಕೊಡಲ್ಪಟ್ಟ, ಅನುಪಮ - ಉಪಮಿಸಬಾರದ, ಇಷ್ಟಲಿಂಗಮೆ - ಇಷ್ಟಲಿಂಗವೆ, ನಿಜಪ್ರಾಣೇಶ್ವರಂ - ತನ್ನ ಪ್ರಾಣವಲ್ಲಭನು, ಮಿಕ್ಕ - ಉಳಿದ, ಪಾಮರಲೋಕಸ್ಥಿತಮಪ್ಪ - ಪಾಮರ - ಜಡಮಾದ, ಲೋಕ - ಲೋಕದಲ್ಲಿ, ಸ್ಥಿತಮಪ್ಪ - ಇರುತ್ತಲಿರುವ, ಲಿಂಗಂ - ಲಿಂಗವು, ಅನಿತೆಲ್ಲಂ - ಅಷ್ಟೆಲ್ಲವೂ, ಮಿಥ್ಯೆಯೆಂಬ - ಪುಸಿಯೆಂಬ, ಏಕಭಾವ - ಏಕನಿಷ್ಠೆಯಲ್ಲಿ, ರತಿ - ಪ್ರೀತಿಯಿಂದ, ಪ್ರತ್ಯಯ - ಜ್ಞಾನದಿಂದ, ಭಕ್ತಿನಿಷ್ಠೆ - ಶಿವಭಕ್ತಿಯ ದೃಢತ್ವವು, ನೆಲೆಗೊಂಡಿ ರ್ಪಾತನೆ - ಸ್ಥಿರವಾಗಿರ್ಪಾತನೆ, ಶತ್ವತ್ - ಎಲ್ಲಾಗಳೂ, ಉತ್ತರನಿರ್ವಾಣಪದ ಪ್ರಸಿದ್ಧಶರಣಂ - ಉತ್ತರ - ಶ್ರೇಷ್ಠವಾದ, ನಿರ್ವಾಣಪದ - ಮೋಕ್ಷಪದದಿಂದ, ಪ್ರಸಿದ್ಧ - ಪ್ರಖ್ಯಾತನಾದ, ಶರಣಂ ಶರಣನು, ಸತ್ಯಂ - ಯಥಾರ್ಥವು.

**ಭಾವಾರ್ಥಬೋಧಿನಿ :** ಶ್ರೀಗುರುವಿನಿಂದ ಕೊಡಲ್ಪಟ್ಟ ಅನುಪಮವಾದ ಇಷ್ಟಲಿಂಗವೇ ತನ್ನ ಪ್ರಾಣವಲ್ಲಭವಾಗಿರುವುದು. ಜಡಲೋಕದಲ್ಲಿರುವ ಮಿಕ್ಕ ಲಿಂಗಗಳೆಲ್ಲವೂ ಪುಸಿಯಾಗಿರುವವೆಂಬ ಏಕನಿಷ್ಠೆಯೂ ಪ್ರೀತಿಯೂ, ತಿಳುವಳಿಕೆಯೂ, ಭಕ್ತಿಯೂ ಸ್ಥಿರವಾಗುಳ್ಳವನೇ ಉತ್ತಮವಾದ ಲಿಂಗಾಂಗಸಾಮರಸ್ಯ ರೂಪ ಮುಕ್ತಿಪದವಿಯಿಂದ ಪ್ರಸಿದ್ಧನಾದ (ಜೀವನ್ಮುಕ್ತನಾದ) ಶರಣನೆನಿಸಿಕೊಳ್ಳುವನೆಂಬುದು ನಿಜ. ೩೦

**ಮತ್ತೇಭವಿಕ್ರೀಡಿತಂ**

ಪುರುಷಾಕಾರ ಸಮತ್ವದಿಂ ಪುರುಷರಂ ಮಿಕ್ಕಾದರಂ ತನ್ನ ಸ
ತ್ಪುರುಷಂಗೇಂ ಸರಿಗಾಣ್ಬಳೇ ಪರಮಪಾತಿವ್ರತ್ಯಸಂಪನ್ನೆಯಾ
ಪರಿಲಿಂಗಾಕೃತಿಯಿಂ ಸಮಾನತೆಯದಾಗಲ್ ಸ್ವೇಷ್ಟಲಿಂಗಕ್ಕೆ ಪಾ
ಮರಲಿಂಗಂಗಳನಾಹಕಾಣ್ಬನೆಸಮಂ ಭಕ್ತಂ ಶಿವಾವಲ್ಲಭಾ ೩೧

**ಟೀಕೆ :** ಪರಮಪಾತಿವ್ರತ್ಯಸಂಪನ್ನೆ - ಪರಮ - ಉತ್ಕೃಷ್ಟವಾದ, ಪಾತಿವ್ರತ್ಯ - ಪತಿವ್ರತಾಧರ್ಮದಿಂದೆ, ಸಂಪನ್ನೆ - ಕೂಡಿದಂಥವಳು, ಪುರುಷಾಕಾರ ಸಮತ್ವದಿಂ - ಪುರುಷ - ಪುರುಷನ, ಆಕಾರ - ದೇಹದ, ಸಮತ್ವದಿಂ - ಸಾಮ್ಯ ದಿಂದೆ, ಪುರುಷರಂ - ಪುರುಷರುಗಳಾದ, ಮಿಕ್ಕಾದರಂ - ಉಳಿದವರುಗಳನ್ನು,

ತನ್ನ ಸತ್ಪುರುಷಂಗೆ - ತನ್ನ ಪ್ರಾಣವಲ್ಲಭಂಗೆ, ಸರಿಗಾಣ್ಬಳೇ - ಸದೃಶವೆಂದು ನೋಡುವಳೆ? ಆಪರಿ - ಆ ತೆರದಿಂದೆ, ಭಕ್ತಂ - ಶಿವಭಕ್ತನು, ಲಿಂಗಾಕೃತಿಯಿಂ- ಲಿಂಗಾಕಾರದಿಂದೆ, ಅದುಸಮಾನತೆ - ಆಸದೃಶತ್ವವು, ಆಗಲ್ - ಆಗಲಾಗಿ, ಸ್ವೇಷ್ಟ ಲಿಂಗಕ್ಕೆ - ತನ್ನ ಇಷ್ಟಲಿಂಗಕ್ಕೆ, ಪಾಮರಲಿಂಗಂಗಳಂ - ಜಡಲಿಂಗಗಳನ್ನು, ಸಮಂ - ಸರಿಯಾಗಿ, ಕಾಣ್ಬನೆ - ನೋಡುವನೆ? (ನೋಡನೆಂಬುದರ್ಥ) ಆಹ- ಆಶ್ಚರ್ಯವು. ೩೧

**ಭಾವಾರ್ಥಬೋಧಿನಿ :** ಪರಮಪಾತಿವ್ರತ್ಯಧರ್ಮವುಳ್ಳ ಸತಿಯು ತನ್ನ ಪ್ರಾಣವಲ್ಲಭನಿಗೆ ಉಳಿದ ಪುರುಷರು ಸಮಾನಾಕಾರವುಳ್ಳವರಾಗಿ ಕಂಡರೂ ಆಕೆಯು ಅವರೆಲ್ಲರನ್ನೂ ತನ್ನ ಪತಿಯನ್ನು ನೋಡುವ ದೃಷ್ಟಿಯಿಂದ ನೋಡುವಳೆ? ಎಂದಿಗೂ ಇಲ್ಲ. ಇದರಂತೆಯೇ ಲಿಂಗವ್ರತಿಯಾದ ಶರಣನು ತನ್ನ ಇಷ್ಟಲಿಂಗಕ್ಕೆ ಉಳಿದ ಸ್ಥಾವರಲಿಂಗಗಳು ಆಕಾರದಿಂದ ಸಮಾನವಾಗಿ ಕಂಡರೂ ಅವುಗಳನ್ನು ತನ್ನಿಷ್ಟಲಿಂಗವನ್ನು ನೋಡುವ ಉಪಾಸನಾದೃಷ್ಟಿಯಿಂದ ನೋಡಿ ಸೇವಿಸುವನೇ? ಇಲ್ಲ. ೩೧

**ವಿಚಾರ :** ಪತಿವ್ರತೆಯು ಸತಿಪತಿಗಳ ಸಾಮರಸ್ಯವನ್ನು ಸಾಧಿಸುವ ದೃಷ್ಟಿ- ಯಿಂದ ತನ್ನ ಪತಿಯ ಸೇವೆಯಲ್ಲಿ ನಿರತಳಾಗಿದ್ದರೂ ತನ್ನ ತಂದೆ, ಮಾವ ಮೊದಲಾದ ಗುರುಹಿರಿಯರನ್ನು ಮತ್ತು ತನ್ನ ಅಣ್ಣತಮ್ಮಂದಿರನ್ನು ಸತ್ಕರಿಸುತ್ತಿ ರುವಂತೆ ಶರಣಸತಿ ಲಿಂಗಪತಿಯೆಂಬ ಭಾವನೆಯುಳ್ಳ ವೀರಶೈವನು ಲಿಂಗಾಂಗ ಸಾಮರಸ್ಯಸಾಧಕದೃಷ್ಟಿಯಿಂದ ತನ್ನ ಇಷ್ಟಲಿಂಗದ ಉಪಾಸನೆಯಲ್ಲಿ ನಿರತ- ನಾಗಿದ್ದರೂ ಇತರ ಸ್ಥಾವರಲಿಂಗಗಳನ್ನು ಗೌರವಿಸಿ, ಆ ಲಿಂಗಗಳ ಆಲಯಾದಿಗಳ ಜೀರ್ಣೋದ್ಧಾರಾದಿ ಕೃತ್ಯಗಳನ್ನು ಮಾಡಬಹುದು. ಆ ಲಿಂಗಗಳಲ್ಲಿ ತಿರಸ್ಕಾರವನ್ನು ತೋರಿಸಬಾರದು. ಸ್ಥಾವರಲಿಂಗಸ್ಥಾನಗಳಿಗೆ ಹೀಗೆ ಸಹಾಯ ಮಾಡುವುದು ವೀರಶೈವರಲ್ಲದವರಲ್ಲಿ ಲಿಂಗಭಕ್ತಿಯನ್ನುಂಟುಮಾಡುವುದಕ್ಕಾಗಿಯೇ ಎಂಬದನ್ನು ಗ್ರಹಿಸಬೇಕು— ಇತ್ಯಾದಿಯಾದ ಅಭಿಪ್ರಾಯವೂ ಕೆಲವೀರಶೈವ ತತ್ವಜ್ಞರಲ್ಲಿ ಇರುವುದುಂಟು.

## ಮತ್ತೇಭವಿಕ್ರೀಡಿತಂ

ಪತಿನಿಷ್ಠಾನಿಯಮವ್ರತಾಂಗಿಯಹ ಪುಣ್ಯಸ್ತ್ರೀಗೆ ಮತ್ತನ್ಯನಿ
ಷ್ಠಿತನೇಮವ್ರತಮೇನುಮಂ ಭಜನೆಯಿಂದಂ ಮಾಡದಿರ್ದಲ್ಲಿ ದು
ಷ್ಕೃತಮುಂಟೇ ಪುಸಿಮಾತದಿಲ್ಲ ಶರಣಂಗಾತ್ಮೇಷ್ಟ ಲಿಂಗವ್ರತೋ
ಚಿತನಿಷ್ಠಾನಿಯತಂಗೆ ಸತ್ಯಮಿದೆ ದೃಷ್ಟಾಂತಂ ಶಿವಾವಲ್ಲಭಾ ೩೨

**ಟೀಕೆ :** ಪತಿನಿಷ್ಠಾನಿಯಮವ್ರತಾಂಗಿಯಹ - ಪತಿ - ಪುರುಷನಲ್ಲಿ, ನಿಷ್ಠಾ- ಭಕ್ತಿಯೆಂಬ, ನಿಯಮ - ನಿತ್ಯವಾದ, ವ್ರತ - ವ್ರತವೆ, ಅಂಗಿಯಹ - ಅಂಗವಾಗುಳ್ಳ, ಪುಣ್ಯಸ್ತ್ರೀಗೆ - ಪತಿವ್ರತಾಸ್ತ್ರೀಗೆ, ಮತ್ತೆ - ಮರಳಿ, ಅನ್ಯನಿಷ್ಠಿತನೇಮವ್ರತಮೇನುಮಂ - ಅನ್ಯ - ಬೇರಾದ, ನಿಷ್ಠಿತ - ಭಕ್ತಿಯಿಂದ, ನೇಮವ್ರತಮೇನುಮಂ - ನೋಂಪಿ ಮೊದಲಾದ ಕಾಮ್ಯವ್ರತಗಳ ನೇಮವನ್ನೂ, ಭಜನೆಯಿಂದಂ - ಭಜಿಸುವುದರಿಂದ, ಮಾಡದಿರ್ದಲ್ಲಿ - ಮಾಡದೆಬಿಟ್ಟಿದ್ದಲ್ಲಿ, ದುಷ್ಕೃತಮುಂಟೇ - ಪಾಪವುಂಟೆ ? ಇಲ್ಲ, ಅದು - ಆ ಪಾಪವು ಎಂಬುದು, ಪುಸಿಮಾತು - ಸಟೆಯುಮಾತು, ಆತ್ಮೇಷ್ಟಲಿಂಗವ್ರತೋಚಿತನಿಷ್ಠಾನಿಯತಂಗೆ - ಆತ್ಮ - ತನ್ನ, ಇಷ್ಟಲಿಂಗ - ಇಷ್ಟಲಿಂಗದ, ವ್ರತ - ವ್ರತದಲ್ಲಿ, ಉಚಿತ - ತಕ್ಕಂಥ, ನಿಷ್ಠಾ - ಭಕ್ತಿಯಲ್ಲಿ, ನಿಯತಂಗೆ - ಯತ್ನವುಳ್ಳಾತನಾದ, ಶರಣಂಗೆ - ಶಿವಶರಣಂಗೆ, ಇದೆ ದೃಷ್ಟಾಂತಂ - ಈ ಪತಿವ್ರತಾಂಗನೆಯ ರೀತಿಯೇ ದೃಷ್ಟಾಂತವು, ತಥ್ಯಂ - ಇದೇ ಸಹಜವು, (ಏಕಲಿಂಗನಿಷ್ಠಾಪರನಾದ ಶರಣಂಗೆ ಕಾಮ್ಯಕರ್ಮಂಗಳು ಯೋಗ್ಯವಲ್ಲವೆಂಬುದಭಿಪ್ರಾಯಂ)

**ಭಾವಾರ್ಥಬೋಧಿನಿ :** ತನ್ನ ಪತಿಯಲ್ಲಿಯೇ ಭಕ್ತಿಯನ್ನು ದೃಢೀಕರಿಸಿ, ತತ್ಪತಿಸೇವೆಯಲ್ಲಿ ನಿರತಳಾದ ಪುಣ್ಯಾಂಗನೆ, ಅನ್ಯವಾದ ಕಾಮ್ಯವ್ರತಗಳನ್ನು ಮಾಡದಿದ್ದರೂ ಆಕೆಗೆ ಪಾಪವಾವುದೂ ಉಂಟಾಗದು. ಉಂಟಾಗುವುದೆಂಬುದು ಹುಸಿ. ಇದರಂತೆ ಇಷ್ಟಲಿಂಗೋಪಾಸನಾತತ್ಪರನಾದ ಶರಣನು ಅನ್ಯದೈವೋಪಾಸನೆ ಮೊದಲಾದ ಕಾಮ್ಯವ್ರತಗಳನ್ನು ಮಾಡದಿದ್ದರೂ ಆತನಿಗೆ ದೋಷವಿಲ್ಲ. ೩೨

## ಶಾರ್ದೂಲ ವಿಕ್ರೀಡಿತ ವೃತ್ತಂ

ಭಕ್ತಂ ಲೋಕವಿಭಕ್ತನೀಶ್ವರಪರಂ ಮಾಹೇಶ್ವರಂ ತತ್ಪ್ರಸಾ
ದಾತ್ತಂ ತಾನೆ ಲಸತ್ಪ್ರಸಾದಿ ನಿಜಲಿಂಗಪ್ರಾಣಿಯುಂ ಪ್ರಾಣಲಿಂ
ಗ್ಯುಕ್ತಾರ್ಥಂ ಸ್ವಸಮರ್ಪಕಂ ಶರಣನೈಕ್ಯಂ ದ್ವೈತಭಾವಾತಿಗಂ
ವ್ಯಕ್ತಂ ಷಟ್ಸ್ಥಲಯೋಗಮಾರ್ಗ ಪರಮಾದ್ವೈತಂ ಶಿವಾವಲ್ಲಭಾ ೩೩

**ಟೀಕೆ :** ಲೋಕವಿಭಕ್ತಂ-ಲೋಕಕ್ಕೆ ವಿಲಕ್ಷಣನಾದಾತನು, ಭಕ್ತಂ-ಭಕ್ತನೆನಿಸುವನು, ಈಶ್ವರಪರಂ-ಈಶ್ವರನೇ ಪರವಾಗುಳ್ಳಾತನು, ಮಾಹೇಶ್ವರಂ-ಮಾಹೇಶ್ವರನು, ತತ್ಪ್ರಸಾದ-ಆ ಶಿವಪ್ರಸಾದದಿಂದ, ಆತ್ತಂ-ಸ್ವೀಕರಿಸಲ್ಪಟ್ಟ, ತಾನೆ-ಆತನೇ, ಲಸತ್ಪ್ರಸಾದಿ - ಒಪ್ಪುವ ಪ್ರಸಾದಿಯು, ನಿಜಲಿಂಗಪ್ರಾಣಿಯುಂ - ನಿಜಲಿಂಗ-ತನ್ನ ಲಿಂಗವೇ, ಪ್ರಾಣಿಯುಂ-ಪ್ರಾಣವಾಗಿಯುಳ್ಳಾತನು, ಪ್ರಾಣಲಿಂಗ್ಯುಕ್ತಾರ್ಥಂ-ಪ್ರಾಣಲಿಂಗಿಸ್ಥಲದಲ್ಲಿ, ಉಕ್ತ-ಹೇಳಲ್ಪಟ್ಟ, ಅರ್ಥಂ-ಅರ್ಥವುಳ್ಳಾತನು, ಸ್ವಸಮರ್ಪಕಂ-ತನ್ನನೇ ಲಿಂಗಕ್ಕೆ ಸಮರ್ಪಿಸುವಾತನು, ಶರಣಂ-ಶರಣನು, ದ್ವೈತಭಾವಾತಿಗಂ-ಭೇದಭಾವವ ಮೀರಿ ವರ್ತಿಸುವಾತನು, ಐಕ್ಯಂ-ಲಿಂಗೈಕ್ಯನು, ಷಟ್ಸ್ಥಲಯೋಗಮಾರ್ಗ ಪರಮಾದ್ವೈತಂ - ಷಟ್ಸ್ಥಲಯೋಗಮಾರ್ಗ - ಷಟ್ಸ್ಥಲಸಂಬಂಧವಾದ ಮಾರ್ಗವೇ, ಪರಮ-ಉತ್ಕೃಷ್ಟವಾದ, ಅದ್ವೈತಂ ಎರಡಿಲ್ಲಮುದೆಂದು, ವ್ಯಕ್ತಂ-ಸ್ಫುಟವು.

**ಭಾವಾರ್ಥ ಬೋಧಿನಿ** - ಷಡಂಗಸ್ಥಲಗಳ ಸಾಮಾನ್ಯಸ್ವರೂಪವಿಂತಿರುವುದು : ಪ್ರಾಕೃತಲೋಕಕ್ಕೆ ಭಿನ್ನವಾದ ವರ್ತನವುಳ್ಳಾತನು ಭಕ್ತನು. ಶಿವನೇ ಸರ್ವೋತ್ತಮನೆಂದು ನಂಬಿ ಅನ್ಯದೈವವಿಮುಖನಾದವನು ಮಹೇಶ್ವರನು. ಭೋಗ್ಯವಾದುದೆಲ್ಲವನ್ನೂ ಶಿವನಿಗರ್ಪಿಸಿ, ತತ್ಪ್ರಸಾದವನ್ನು ಭೋಗಿಸುವಾತನು ಪ್ರಸಾದಿಯು. ನಿಜಲಿಂಗವೇ ತನ್ನ ಪ್ರಾಣವಾಗುಳ್ಳವನು ಪ್ರಾಣಲಿಂಗಿಯು. ಲಿಂಗಕ್ಕೆ ಆತ್ಮಾರ್ಪಣವನ್ನು ಮಾಡಿದಾತನು ಶರಣನು. ತನಗೂ ಶಿವನಿಗೂ ಭೇದವಿಲ್ಲದೆ ಶಿವನಲ್ಲಿ ಸಾಮರಸ್ಯವನ್ನು ಹೊಂದಿದಾತನು ಐಕ್ಯನು. ಇದೇ ಷಟ್‌ಸ್ಥಲಸಂಬಂಧವಾದ ಮಾರ್ಗದ ಪರಮಾದ್ವೈತವು. ೩೩

**ಅವತಾರಿಕೆ :** ಇಂತು ಏಕಲಿಂಗನಿಷ್ಠಾಪರನಾಗಿ ಷಟ್ಸ್ಥಲಜ್ಞಾನಿಯಾದ ಶರಣಂಗೆ ಪ್ರಪಂಚಾಧ್ಯಾಸವಿಲ್ಲೆಂದು ಪೇಳುತ್ತಿರ್ದಪಂ.

**ಮತ್ತೇಭವಿಕ್ರೀಡಿತಂ**

ಪರಿಪೂರ್ಣಭ್ರಮೆಯಿಂ ಬಯಲ್ವಿಡಿದು ಭಕ್ತಿಜ್ಞಾನಯೋಗಕ್ರಿಯಾ
ಚರಣಂಗೆಟ್ಟು ವೃಥಾಂತ್ಯದಲ್ಲಿ ತೊಳಲಂ ಪ್ರಾದೇಶಿಕ ಭ್ರಾಂತಿಯಿಂ
ಪರಿದಾಡಂ ನಿಜನಿಷ್ಠೆಯಂ ಮರೆದು ಮತ್ತನ್ಯತ್ರ ಕಾಣ್ಬಾಸೆಯಿಂ
ಶರಣಂ ದ್ವಂದ್ವವಿಮುಕ್ತನಿರ್ಪಿರವ ನೇನೆಂಬೆಂ ಶಿವಾವಲ್ಲಭಾ ೩೪

**ಟೀಕೆ :** ಪರಿಪೂರ್ಣ ಭ್ರಮೆಯಿಂ – ತುಂಬಲ್ಪಟ್ಟ ಭ್ರಾಂತಿಯಿಂದ, ಬಯಲ್ವಿಡಿದು - ನಿರಾಕಾರವೇ ಬ್ರಹ್ಮವೆಂದುಪಿಡಿದು, ಭಕ್ತಿಜ್ಞಾನಯೋಗಕ್ರಿಯಾ ಚರಣಂಗೆಟ್ಟು - ಭಕ್ತಿ - ಶಿವಭಕ್ತಿಯ, ಜ್ಞಾನ - ಶಿವಜ್ಞಾನದ, ಯೋಗ - ಶಿವ ಯೋಗದ, ಕ್ರಿಯಾ - ಸತ್ಕ್ರಿಯೆಗಳ, ಆಚರಂಗೆಟ್ಟು - ಆಚಾರಭ್ರಷ್ಟನಾಗಿ, ವೃಥಾ - ವ್ಯರ್ಥವಾಗಿ, ಅಂತ್ಯದಲ್ಲಿ - ಕಡೆಯಲ್ಲಿ, ತೊಳಲಂ - ಭವಕ್ಕೆಬಾರನು, ಮತ್ತೆ - ಮರಳಿ, ಅನ್ಯತ್ರ - ಬೇರೊಂದು ತಾಣದಲ್ಲಿ, ಕಾಣ್ಬಾಸೆಯಿಂ - ನೋಡುವ ಬಯಕೆಯಿಂದ, ನಿಜನಿಷ್ಠೆಯಂ - ತನ್ನಭಕ್ತಿಯಂ, ಮರೆದು - ಅದರ ನೆನೆಪಿಲ್ಲದ, ಪ್ರಾದೇಶಿಕ ಭ್ರಾಂತಿಯಿಂ - ಇಲ್ಲಿಯುಂಟು ಅಲ್ಲಿಯುಂಟೆಂದು ಪರಿಚ್ಛಿನ್ನ ಭ್ರಾಂತಿ ಯಿಂದ, ಪರಿದಾಡಂ - ಎಡೆಯಾಡನು, ದ್ವಂದವಿಮುಕ್ತಂ - ದ್ವಂದ್ವದುಃಖವಿಲ್ಲ ದಾತನಾದ, ಶರಣಂ - ಶರಣನು, ಇರ್ಪಿರವಂ - ಇರುವ ಮಾರ್ಗವನ್ನು, ಏನೆಂಬೆಂ- ಏನೆಂದು ಪೇಳುವೆನು ! ೩೪

**ಭಾವಾರ್ಥಬೋಧಿನಿ .** ಏಕಲಿಂಗನಿಷ್ಠಾಪರನಾದ ಶರಣನು, ಪರಿಪೂರ್ಣ ಭ್ರಾಂತಿಯಿಂದ ನಿರಾಕಾರವೇ ಬ್ರಹ್ಮವೆಂಬ ಭಾವನೆಯನ್ನು ಹಿಡಿದು ಕೊಂಡು, ಶಿವಭಕ್ತಿ - ಶಿವಜ್ಞಾನ - ಶಿವಯೋಗಗಳ ಆಚರಣೆಯನ್ನು ನಡೆಸುವುದನ್ನು ಬಿಟ್ಟು, ಕೊನೆಯಲ್ಲಿ ಭವದಲ್ಲಿ ವ್ಯರ್ಥವಾಗಿ ತಿರುಗುವುದಿಲ್ಲ. ಮತ್ತು ತನ್ನ ನಿಷ್ಠೆಯು ನೆನಪಿಲ್ಲದೆ, ಅಲ್ಲಿ ದೇವರುಂಟು ಇಲ್ಲಿ ದೇವರುಂಟೆಂಬ ಭ್ರಾಂತಿಯಿಂದ ಕಂಡ ಕಡೆಯಲ್ಲಿ ಅಡ್ಡಾಡುವುದಿಲ್ಲ. ಪಾಪಪುಣ್ಯಾದಿ ದ್ವಂದ್ವದುಃಖವಿಲ್ಲದ ಆ ಶರಣನ ಮಾರ್ಗವನ್ನು ನಾನೇನು ಹೇಳಲಿ ! ೩೪

## ಮತ್ತೇಭವಿಕ್ರೀಡಿತಂ

ಕುರುಹಂ ತೋರುವ ಹಾಂಗೆ ತಾನೆ ಶಿವನೆಂದೆಲ್ಲರ್ಗೆ ತನ್ನಂಗದೊಳ್
ಕುರುಹಿಲ್ಲೆಂದೆನಿಸಿರ್ಪ ದಿವ್ಯಶಿವಲಿಂಗಾಕಾರದಿಂ ದೊಪ್ಪುವಾ
ಕುರುಹಂ ತಾಳ್ದಿಹನೈಸೆ ಜೀವಪರಮೈಕ್ಯ ಪ್ರತ್ಯಯಾರ್ಥಾತ್ಮಕಂ
ಕುರುಹುಂಟೇ ಶರಣಂಗೆ ಬೇರೆ ಪೆರತೊಂದೋಹೋ ಶಿವಾವಲ್ಲಭಾ ೩೩

**ಟೀಕೆ :** ಜೀವಪರಮೈಕ್ಯಪ್ರತ್ಯಯಾರ್ಥಾತ್ಮಕಂ – ಜೀವಪರಮೈಕ್ಯ - ಲಿಂಗಾಂಗೈಕ್ಯದಲ್ಲಿ, ಪ್ರತ್ಯಯ - ಜ್ಞಾನವೇ, ಅರ್ಥ - ಪ್ರಯೋಜನವಾಗುಳ್ಳ ಶರಣನು, ತಾನೆಶಿವನೆಂಮು – ಪರಶಿವನೆಂದು, ಎಲ್ಲರ್ಗೆ – ಸರ್ವರ್ಗೆಯೂ, ಕುರುಹಂ - ಆಕಾರವನು, ತೋರುವಹಾಂಗೆ - ಕಾಣಿಸುವಹಾಂಗೆ, ತನ್ನಂಗದೊಳ್- ತನ್ನ ಶರೀರದಲ್ಲಿ, ಕುರುಹಿಲ್ಲೆಂದೆನಿಸಿರ್ಪ - ಸಾಕಾರರೂಪಿಲ್ಲೆಂದೆನಿಸಿರ್ಪ, ದಿವ್ಯ ಶಿವಲಿಂಗಾಕಾರದಿಂದೆ - ದಿವ್ಯ - ಮನೋಹರವಾದ, ಶಿವಲಿಂಗಾಕಾರದಿಂದೆ - ಮಂಗಲವಾದ ಲಿಂಗಾಕಾರದಿಂದೆ, ಒಪ್ಪುವ - ಮಿಗೆರಂಜಿಸುವ, ಕುರುಹಂ - ಆಕಾರ ವನ್ನು, ತಾಳ್ದಿಹನೈಸೆ— "ಧ್ಯಾನಪೂಜಾನಿಮಿತ್ತಾರ್ಥಂ ನಿಷ್ಕಳಂ ಸಕಳಂ ಭವೇತ್" ಎಂಬ ವಾತುಳತಂತ್ರಾರ್ಥ ಪ್ರಮಾಣದಿಂ ಧರಿಸಿರ್ಪನಷ್ಟೆ, ಶರಣಂಗೆ - ಶಿವಶರಣಂಗೆ, ಬೇರೆ - ಮತ್ತೆ, ಪೆರತೊಂದು - ಅನ್ಯವಾದುದೊಂದು, ಕುರುಹುಂಟೆ - ಆಕಾರ ವುಂಟೆ? ಇಲ್ಲ. ಓಹೋ ! ಸಾಕು - ಸಾಕು (ಶಿವಶರಣಂಗೆ ಶಿವಲಿಂಗದ ಶರೀರವೇ ಶರೀರವಲ್ಲದೆ ಬೇರೆಪ್ರಾಕೃತ ಶರೀರವಿಲ್ಲವೆಂಬುದಭಿಪ್ರಾಯಂ). ೩೩

**ಭಾವಾರ್ಥಬೋಧಿನಿ** - ಲಿಂಗಾಂಗೈಕ್ಯಜ್ಞಾನವೇ ಪರಮಪ್ರಯೋಜನವಾ- ಗುಳ್ಳ ಶರಣನು, ತಾನೇ ಪರಶಿವನೆಂದು ಸರ್ವರಿಗೂ ಶಿವಾಕಾರವನ್ನು ತೋರಿಸು- ವಂತೆ ತನ್ನಂಗದಲ್ಲಿ ನಿರಾಕಾರನಾಗಿದ್ದರೂ ಧ್ಯಾನಪೂಜಾನಿಮಿತ್ತವಾಗಿ ಸಾಕಾರ ನಾದ ಶಿವನ ದಿವ್ಯಲಿಂಗಾಕಾರವನ್ನು ಧರಿಸಿರುವನಲ್ಲವೆ ? ಅಂತಪ್ಪ ಶರಣನಿಗೆ ಶಿವ ಲಿಂಗದ ಶರೀರವೇ ಶರೀರವಲ್ಲದೆ ಬೇರೊಂದು ಪ್ರಾಕೃತ ಶರೀರದ ಆಕಾರವಿರುವುದೆ ? ಇಲ್ಲ. ೩೩

## ಮತ್ತೇಭವಿಕ್ರೀಡಿತಂ

ಅರಿಯರ್ಗಂ ತಾನರಿದಿರ್ದ ತನ್ನಮರಹಿಂದಂ ತೋರ್ಪ ಮಿಥ್ಯಾರ್ಥಮಂ
ಮರೆಯಂ ತಾಂ ಮರೆದಿರ್ದ ತನ್ನರಿವಿನಿಂದಂ ತೋರ್ಪ ಸತ್ಯಾರ್ಥಮಂ
ಮರಹಂ ತಟ್ಟದೆ ಮುಟ್ಟದೊಂದರಿವಿನೇಕಾಕಾರಮಾದಂಗೆ ಮ
ತ್ತರಿವೆಂದುಂ ಮರಹೆಂದು ಮೋಹೊ ಕುರುಹೆಂದುಂಟೇ ಶಿವಾವಲ್ಲಭಾ ೩೬

**ಟೀಕೆ :** ತಾನರಿದಿರ್ದ-ಇದೇ ನಿತ್ಯವೆಂದು ತಾಂ ತಿಳಿದಿರ್ದಂಥ, ತನ್ನಮರ ಹಿಂದಂ-ಮಾಯೆಯಿಂದ, ತೋರ್ಪ-ತೋರುವ, ಮಿಥ್ಯಾರ್ಥಮಂ-ಮಿಥ್ಯಾಪ್ರಪಂಚ ವನ್ನು, ಅರಿಯಂ-ಜ್ಞಾನೋದಯವಾದನಂತರದಲ್ಲಿ ಅರಿಯನು, ತಾಂ ಮರೆದಿರ್ದ-ತಾನೆ ನಿತ್ಯವೆಂಬುವದನ್ನು ಮರೆತಿರ್ದಂಥ ಶರಣನು, ತನ್ನರಿವಿನಿಂದಂ-ತನ್ನ ಜ್ಞಾನ ದಿಂದೆ, ತೋರ್ಪ-ತೋರುವಂಥ, ಸತ್ಯಾರ್ಥಮಂ-ಪರಮಾರ್ಥವನ್ನು, ಮರೆಯಂ-ಮೊದಲಂತೆ ಮರೆಯನು, ಮರಹಂ ಅಜ್ಞಾನವನ್ನು, ತಟ್ಟದೆಮುಟ್ಟದೆ-ಏನನ್ನೂ ಸೋಂಕದೆ, ಒಂದರಿವಿನ-ಒಂದು ಜ್ಞಾನದ, ಏಕಾಕಾರಮಾದಂಗೆ-ಒಂದು ಸ್ವರೂಪ ವಾದಾತಂಗೆ, ಮತ್ತೆ-ಮರಳಿ, ಅರಿವೆಂದುಂ-ಜ್ಞಾನವೆಂದೂ, ಮರಹೆಂದುಂ-ಅಜ್ಞಾನವೆಂದೂ, ಕುರುಹೆಂದು-ಆಕಾರವೆಂದೂ, ಉಂಟೆ? ಇಲ್ಲ, ಓಹೋ-ಸಾಕು ಸಾಕು, ("ಸ್ವಾವಿದ್ಯಯಾಸಂಸರತಿ ಸ್ವವಿದ್ಯಯಾಮುಚ್ಯತೇ" ಎಂದು ಮಹೋಪ ನಿಷತ್ತುಂಟು)

**ಭಾವಾರ್ಥಬೋಧಿನಿ** - ತನಗೆ ಅರಿವುಂಟಾಗುವುದಕ್ಕೆ ಮೊದಲು ತನ ಮರವಿನಿಂದ ಯಾವುದನ್ನು ಸತ್ಯವೆಂದು ತಿಳಿದಿದ್ದನೋ; ಅದನ್ನು ಅರಿವುಂಟಾದ ಬಳಿಕ ಸತ್ಯವೆಂದೇ ಅರಿಯನು. ಮತ್ತು ತಾನು ಮರೆತಿದ್ದ ತಾನೇ ನಿತ್ಯವೆಂಬ ನಿಜತತ್ವವನ್ನು ಅರಿವುಂಟಾದ ಬಳಿಕ ಎಂದಿಗೂ ಮರೆಯನು. ಕಿಂಚಿತ್ತಾದರೂ ಮರವು ಸೋಂಕದ ಸುಜ್ಞಾನಸ್ವರೂಪವೇ ತಾನಾದ ಮೇಲೆ ಅಂತಹ ಶರಣನಿಗೆ ಮತ್ತೆ ಅರಿವೆಂದೂ, ಮರವೆಂದೂ, ಕುರುಹೆಂದೂ ಯಾವುದೊಂದಾದರೂ ಇರುವು ದುಂಟೆ? ಇಲ್ಲವೆಂದು ಭಾವವು. (ಈ ವಿಷಯದಲ್ಲಿ ಮರವಿನಿಂದ ಸಂಸಾರವುಂಟು. ಅರುವಿನಿಂದ ತತ್ಸಂಸಾರವಿಮೋಚನವಾಗುವುದೆಂಬರ್ಥದ ಉಪನಿಷದ್ವಾಕ್ಯವನ್ನು ಟೀಕೆಯಲ್ಲಿ ನೋಡಬಹುದು) ೩೬

**ಅವತಾರಿಕೆ :** ಇನ್ನು ಆಚಾರ್ಯಂ ಬಾಹ್ಯಾಭ್ಯಂತರ ಪೂಜೆಗಳನೆರಡು ಪದ್ಯಂಗಳಿಂ ಪೇಳುತ್ತಿರ್ದಪಂ.

**ಮತ್ತೇಭವಿಕ್ರೀಡಿತಂ**

ಜಲಗಂಧಾಕ್ಷತಪುಷ್ಪ ಧೂಪವಿಲಸದ್ದೀಪಾನುನೈವೇದ್ಯ ನಿ
ರ್ಮಲ ತಾಂಬೂಲ ಸಮರ್ಚನಾರ್ಪಣ ವಿವೇಕಾದಿ ಕ್ರಿಯಾಕಾರ ನಿ
ಷ್ಕಳ ಲಿಂಗಾನುಭವೈಕ್ಯ ಭಾವಭರಿತಂ ಪ್ರತ್ಯಕ್ಪ್ರಸಾದಪ್ರಭಾ
ವಲಯಜ್ಯೋತಿರಖಂಡ ಪೂರ್ಣ ಚರಿತಂ ಭಕ್ತಂ ಶಿವಾವಲ್ಲಭಾ ೩೭

**ಟೀಕೆ :** ಭಕ್ತಂ-ಶಿವಶರಣನು, ಜಲ......ಭಾವಭರಿತಂ-ಜಲ-ಉದಕವು, ಗಂಧ-ಗಂಧವು, ಅಕ್ಷತ-ಅಕ್ಷತೆಯು, ಪುಷ್ಪ-ಪುಷ್ಪವು, ಧೂಪ-ಧೂಪವು, ವಿಲಸತ್-ಒಪ್ಪುವ, ದೀಪ-ದೀಪವು, ಅನು-ಬಳಿಕ, ನೈವೇದ್ಯ-ನಿವೇದನವು, ನಿರ್ಮಲ-ಶುದ್ಧವಾದ, ತಾಂಬೂಲ-ತಾಂಬೂಲವು, ಈ ವಿಧವಾದ, ಸಮರ್ಚನ-ಪೂಜೆಯು, ಅರ್ಪಣ-ಸಮರ್ಪಿಸುವುದರಲ್ಲಿ, ವಿವೇಕ-ವಿಚಾರವು, ಆದಿ-ಮೊದಲಾದ, ಕ್ರಿಯಾಕಾರ-ಜ್ಞಾನ ಕ್ರಿಯಾಕಾರ ರೂಪವಾದ, ನಿಷ್ಕಳ-ಕಳಾತೀತವಾದ, ಲಿಂಗ-ಶಿವಲಿಂಗದ, ಅನುಭವ-ಜ್ಞಾನದಿಂದ, ಐಕ್ಯ-ಸಾಮರಸ್ಯದಲ್ಲಿ, ಭಾವ-ತಾರತಮ್ಯದಿಂದ, ಭರಿತಂ-ತುಂಬಲ್ಪಟ್ಟಾತನು, ಪ್ರತ್ಯಕ್ಪ್ರಸಾದ-ಪ್ರತ್ಯಕ್-ಜೀವನಿಯಾಮಕವಾದ ಪರಬ್ರಹ್ಮದ, ಪ್ರಸಾದ-ಪ್ರಸನ್ನತೆಯಿಂದ, ಪ್ರಭಾವಲಯ-ಕಾಂತಿಮಂಡಲದ, ಜ್ಯೋತಿಃ-ಜ್ಞಾನಪ್ರಕಾಶದಿಂದೆ, ಅಖಂಡ-ಎಡೆವಿಡದಿರ್ಪ, ಪೂರ್ಣ-ಸಕಲಜಗತ್ಪರಿಪೂರ್ಣವಾದ, ಚರಿತಂ-ಚರಿತ್ರವುಳ್ಳಾತನು, "ಅತ್ರಾಯಂ ಪುರುಷಸ್ಸ್ವಯಂ ಜ್ಯೋತಿಃ" ಎಂದು ಬ್ರಹ್ಮಬಿಂದೂಪನಿಷತ್ತುಂಟು.

**ಭಾವಾರ್ಥಬೋಧಿನಿ -** ಆ ಶಿವಶರಣನು ಬಾಹ್ಯದಲ್ಲಿ ಕ್ರಿಯಾಲಿಂಗವೆನಿಸಿರುವ ಇಷ್ಟಲಿಂಗಕ್ಕೆ ಜಲ-ಗಂಧ-ಅಕ್ಷತ-ಪುಷ್ಪ-ಧೂಪ-ದೀಪ-ನೈವೇದ್ಯ-ತಾಂಬೂಲ ಇವುಗಳಿಂದ ಮಾಡುವ ಅರ್ಚನಾರ್ಪಣ ವಿಷಯದಲ್ಲಿರುವ ಜ್ಞಾನಕ್ರಿಯೆಗಳುಳ್ಳವನಾಗಿ, ಮತ್ತು ನಿಷ್ಕಳ ಶಿವಲಿಂಗದನುಭವದಿಂದುಂಟಾದ ಲಿಂಗಾಂಗಸಾಮರಸ್ಯದಿಂದ ಭರಿತನಾಗಿ, ಮತ್ತು ಪರಬ್ರಹ್ಮದ ಪ್ರಸನ್ನತೆಯಿಂದಲೂ ತೇಜಃಪುಂಜದ ಜ್ಞಾನ

ಪ್ರಕಾಶದಿಂದಲೂ ತುಂಬಿದವನಾಗಿಯೂ, ಲೋಕವ್ಯಾಪಕ ಸಚ್ಚರಿತ್ರವುಳ್ಳವನಾಗಿಯೂ ಇರುವನು. (ಇದು ಬಾಹ್ಯಪೂಜೆಯ ವಿಷಯ) ೩೭

**ಶಾರ್ದೂಲ ವಿಕ್ರೀಡಿತ ವೃತ್ತಂ**

ಒಂದೇಯುಗ್ಗಣಿಯೊಂದೆಗಂಧರಸ ಮೊಂದೇಯುಕ್ಷತಂ ಪುಷ್ಪಮು
ತ್ತೊಂದೇ ಧೂಪಮುದೊಂದೆ ದೀಪವಿಧಿಯೊಂದೇ ನೋಡೆನೈವೇದ್ಯರೂ
ಪೊಂದೇಯರ್ಚನಮೊಂದೆಯರ್ಪಣಮುತಂ ತಾಂಬುಲಮೊಂದೇ ಸಮಂ
ತೊಂದೇ ಲಿಂಗಮನಾದಿಮಧ್ಯನಿಧನಂ ಸತ್ಯಂ ಶಿವಾವಲ್ಲಭಾ ೩೮

**ಟೀಕೆ :** ಒಂದೇಯುಗ್ಗಣಿ - ಕ್ಷಮೆಯೆಂಬುದೊಂದೇ ಲಿಂಗಕ್ಕೆ ಮಜ್ಜನೋದಕವು, ಒಂದೆಗಂಧರಸಂ - ಸಮಾಧಿಸಂಪತ್ತಿಯೆಂಬುದೊಂದೇ ಗಂಧವು, ಒಂದೇ ಅಕ್ಷತಂ - ನಿರಹಂಕಾರವೆಂಬುದೊಂದೇ ಅಕ್ಷತೆಯು, ಮತ್ತೆ - ಮರಳಿ, ಪುಷ್ಪವೊಂದೆ - ವೈರಾಗ್ಯವೊಂದೇ ಪುಷ್ಪವು, ಧೂಪಮುದೊಂದೆ - ವಿಶ್ವಾಸವೆಂಬುದೊಂದೇ ಆಧೂಪವು, ದೀಪವಿಧಿಯೊಂದೇ - ಜ್ಞಾನವೊಂದೇ ದೀಪವಿಧಿಯು, ನೋಡೆ-ವಿಚಾರಿಸಲಾಗಿ, ನೈವೇದ್ಯರೂಪೊಂದೇ - ಸ್ವಾತ್ಮಾರ್ಪಣರೂಪಮೊಂದೇ ನೈವೇದ್ಯವು, ತಾಂಬೂಲವೊಂದೇ - ಭಕ್ತಿರಾಗರಸವೊಂದೇ ತಾಂಬೂಲವು, ಅರ್ಚನವೊಂದೇ-ಒಂದೆಯಾದ ನಿರ್ಗುಣಪೂಜೆಯು, ಅರ್ಪಣಮುತಂ - ಸಮರ್ಪಿಸುವ ಸ್ವರೂಪವು, ಸಮಂತು - ಹಾಂಗೆ, ಅನಾದಿಮಧ್ಯನಿಧನಂ - ಆದಿಮಧ್ಯಾವಸಾನವಿಲ್ಲದ, ಲಿಂಗಂ-ಮಹಾಲಿಂಗವು, ಒಂದೇ - ಈ ಪೇಳ್ದಿಂಟು ತೆರನಾದುದೂ ಒಂದೇ, ಸತ್ಯಂ-ಯಥಾರ್ಥವು. ೩೮

**ಭಾವಾರ್ಥಬೋಧಿನಿ :** ಇನ್ನು ಅಂತರ್ಲಿಂಗದ ಪೂಜೆಯನ್ನು ವಿವರಿಸುವನು : ಶಿವಶರಣನು ಆರಾಧಿಸುವ ಹೊರಗಣ ಇಷ್ಟಲಿಂಗವೂ ಒಳಗಿರುವ ಪ್ರಾಣಲಿಂಗವೂ ಒಂದೇ ಇದ್ದು, ಆದಿ - ಮಧ್ಯಾಂತರಹಿತವಾದ ಮಹಾಲಿಂಗವಾಗಿರುವುದು. ಆದುದರಿಂದ ಅಂತರ್ಲಿಂಗಕ್ಕೆ ಕ್ಷಮೆಯೆಂಬುದೊಂದೇ ಮಜ್ಜನೋದಕವು, ಸಮಾಧಿಸ್ಥಿತಿಯೇ ಗಂಧವು, ನಿರಹಂಕಾರವೇ ಅಕ್ಷತೆಯು, ವೈರಾಗ್ಯವೇ ಪುಷ್ಪವು, ಶ್ರದ್ಧೆಯೇ ಧೂಪ, ಜ್ಞಾನಪ್ರಕಾಶವೇ ದೀಪ, ಆತ್ಮಸಮರ್ಪಣೆಯೇ ನೈವೇದ್ಯ, ಇವೆಲ್ಲವೂ

ಏಕರೂಪದಿಂದಿರುವವು. ಮತ್ತು ಲಿಂಗವಾದರೂ ಬಾಹ್ಯಾಭ್ಯಂತರದಲ್ಲಿ ಏಕರೂಪ ದಿಂದಿರುವ ಮಹಾಲಿಂಗವಾಗಿರುವುದು. ೩೮

**ಅವತಾರಿಕೆ :** ಇಂತು ಬಾಹ್ಯಾಂತರಪೂಜೆಯುಂಪೇಳಿ, ದೇಹಾದಿ ಪ್ರಪಂಚವು ಪರಮಾತ್ಮಸ್ವರೂಪನಾದ ಶರಣಂಗಿಲ್ಲೆಂದು ಪೇಳುತ್ತಿರ್ದಪಂ.

**ಶಾರ್ದೂಲ ವಿಕ್ರೀಡಿತ ವೃತ್ತಂ**

ದೇಹಪ್ರಾಣಮನೋಹೃಷೀಕನಿಕರಂ ಮಿಥ್ಯಾವಿಕಾರಂಗಡಾ
ದೇಹಾದಿವ್ಯತಿರಿಕ್ತನಪ್ಪ ಪುರುಷಂ ನಿತ್ಯಂ ವಿಶುದ್ಧಂಗಡಾ
ಓಹೋ ಪ್ರಾಕೃತತದ್ವಿಕಾರಕೃತಮಿಥ್ಯಾ ಕರ್ಮಮಂ ಮತ್ತೆನಿ
ರ್ದೇಹಾತ್ಮಂಗಿರದುಂಟು ಮಾಳ್ಪರಕಟಾ ಮೂಢರ್ ಶಿವಾವಲ್ಲಭಾ ೩೯

**ಟೀಕೆ :** ದೇಹಪ್ರಾಣಮನೋಹೃಷೀಕನಿಕರಂ - ದೇಹ - ಶರೀರವು, ಪ್ರಾಣ-ಪ್ರಾಣವು, ಮನಃ - ಮನಸ್ಸು, ಹೃಷೀಕ - ಇಂದ್ರಿಯಂಗಳು ಇವುಗಳ, ನಿಕರಂ-ಸಮೂಹವು, ಮಿಥ್ಯಾವಿಕಾಂಗಡಾ - ಮಾಯಾವಿಕಾರವು ಕಂಡ ! ದೇಹಾದಿವ್ಯತಿರಿಕ್ತನಪ್ಪ - ದೇಹೇಂದ್ರಿಯಾದಿ ವಿಲಕ್ಷಣನಾದಂತ, ಪುರುಷಂ - ಆತ್ಮನು, ನಿತ್ಯಂ-ಕೇಡಿಲ್ಲವಾತನಾದ, ವಿಶುದ್ಧಂಗಡಾ - ನಿರ್ಮಲನು ಕಂಡ! ಓಹೋ - ಸಾಕುಸಾಕು, ಮೂಢರ್ - ಅಜ್ಞಾನಿಗಳು, ಮತ್ತೆ - ಮರಳಿ, ನಿರ್ದೇಹಾತ್ಮಂಗೆ - ದೇಹವ್ಯತಿರಿಕ್ತನಾದಾತ್ಮಂಗೆ, ಪ್ರಾಕೃತತದ್ವಿಕಾರಕೃತ ಮಿಥ್ಯಾಕರ್ಮಮಂ - ಪ್ರಾಕೃತ - ಮಾಯಾ ಸಂಬಂಧವಾದ, ತದ್ವಿಕಾರ - ಆ ಮಾಯಾಗುಣವಿಕಾರಂಗಳಿಂ, ಕೃತ- ಮಾಡಲ್ಪಟ್ಟ, ಮಿಥ್ಯಾಕರ್ಮಮಂ - ವ್ಯರ್ಥವಾದ ಕರ್ಮವನ್ನು, ಇರದೆ - ಸುಮ್ಮನಿರದೆ, ಉಂಟು ಮಾಳ್ಪರ್ - ಉಂಟುಮಾಡುವರು, ಅಕಟಾ - ಅಯ್ಯೋ ! ೩೯

**ಭಾವಾರ್ಥಬೋಧಿನಿ :** ದೇಹ - ಪ್ರಾಣ - ಮನಸ್ಸು - ಇಂದ್ರಿಯಸಮೂಹ ಇವೆಲ್ಲವೂ ಮಾಯಾವಿಕಾರಗಳಾಗಿರುವವಲ್ಲವೆ ? ಈ ದೇಹಾದಿಗಳಿಗೆ ವಿಲಕ್ಷಣನಾದ ಆತ್ಮನು ನಿತ್ಯನೂ, ನಿರ್ಮಲನೂ ಆಗಿರುವನು. ಹೀಗೆ ದೇಹಾದಿವ್ಯತಿರಿಕ್ತನಾದಾ ತ್ಮನಿಗೆ ಅಜ್ಞಾನಿಗಳು ಮತ್ತೂ ಪ್ರಕೃತಿಸಂಬಂಧವಾದ ವ್ಯರ್ಥವಾದ ಕರ್ಮದ

ಸಂಬಂಧವನ್ನು ಅದೇಕೆ ಉಂಟುಮಾಡುವರು ? ಅಯ್ಯೋ ! (ಶಿವದೀಕ್ಷೆಯಿಂದ ಅಪ್ರಾಕೃತಶರೀರಿಯಾಗಿ ಲಿಂಗಸ್ವರೂಪನಾದ ಶರಣನಿಗೆ ಪ್ರಾಕೃತ ದೇಹಾದಿಗಳ ಮತ್ತು ಅವುಗಳಿಗೆ ಸಂಬಂಧಿಸಿದ ಕರ್ಮದ ಸಂಬಂಧವಿರುವುದೆಂದು ಹೇಳುವುದು ಅಜ್ಞಾನವೆಂದು ತಾತ್ಪರ್ಯ). ೩೯

**ಶಾರ್ದೂಲ ವಿಕ್ರೀಡಿತ ವೃತ್ತಂ**

ದೇಹ ಪ್ರಾಣ ಮನಂಗಳೈದೆ ತನಗನ್ಯಂ ತಾನಲ್ಲೆಂದುಸಿ
ರ್ದಾಹಾ ಮತ್ತವರಿಚ್ಛೆಯೊಳ್ವಿಷಯಸಂಗಂಗೈದು ನಿಷ್ಕಾರಣಂ
ಹೋಹಾತಂ ನಿರಯಕ್ಕೆ ಯೋಗಿಯೆ ಶಿವೈಕ್ಯಜ್ಞಾನನಿಷ್ಪನ್ನದಾ
ಸೋಹಂಭಾವವಿಶಿಷ್ಟನೇ ಪರಮಯೋಗೀಂದ್ರಂ ಶಿವಾವಲ್ಲಭಾ ೪೦

**ಟೀಕೆ :** ದೇಹಪ್ರಾಣಮನಂಗಳ್-ಶರೀರಪ್ರಾಣಮನಸ್ಸುಗಳು, ಐದೆ-ಚೆನ್ನಾಗಿ, ತನಗೆ-ಆತ್ಮಂಗೆ, ಅನ್ಯಂ-ಭಿನ್ನವು, ಅವು-ಆ ದೇಹಾದಿ ಪ್ರಪಂಚಗಳು, ತಾನಲ್ಲ ವೆಂದು, ತಾನಾಗಿಲ್ಲವೆಂದು, ಉಸಿರ್ದು-ನುಡಿದು, ಮತ್ತೆ-ಮರಳಿ, ಅವರಿಚ್ಛೆ ಯೊಳ್-ಅವರ ವಶದಲ್ಲಿ, ವಿಷಯಸಂಗಂಗೈದು-ವಿಷಯಂಗಳಲ್ಲಿ ಕೂಡಿರ್ದು, ನಿಷ್ಕಾರಣಂ-ಕಾರಣವಿಲ್ಲದೆ, ನಿರಯಕ್ಕೆ-ನರಕಕ್ಕೆ, ಹೋಹಾತಂ-ಹೋಗುವಾತನು, ಯೋಗಿಯೆ-ಶಿವಯೋಗಿಯೆ ? ಅಲ್ಲ, ಶಿವೈಕ್ಯಜ್ಞಾನನಿಷ್ಪನ್ನ - ದಾಸೋಹಂಭಾವ ವಿಶಿಷ್ಟನೇ-ಶಿವೈಕ್ಯಜ್ಞಾನ-ಶಿವಸಾಮರಸ್ಯ ಜ್ಞಾನದಿಂದ, ನಿಷ್ಪನ್ನ-ಆದಂಥ ದಾಸೋಹಂ ಭಾವ-ತಾನೆ ಭೃತ್ಯನೆಂಬ ಭಾವದಿಂದ, ವಿಶಿಷ್ಟನೇ-ಅಧಿಕನಾದಾತನೇ, ಪರಮ ಯೋಗೀಂದ್ರಂ-ಉತ್ಕೃಷ್ಟನಾದ ಯೋಗೀಶ್ವರನು.

**ಭಾವಾರ್ಥಬೋಧಿನಿ :** ವಿಚಾರಿಸಿ ನೋಡಲಾಗಿ, ಶರೀರಪ್ರಾಣಮನಂಗಳು ತಾನಲ್ಲ, ಅವು ತನಗೆ ಭಿನ್ನವಾದವುಗಳೆಂದುಸುರಿ, ಮತ್ತೆ ಆ ಶರೀರಾದಿಗಳಿಗೆ ಅಧೀನನಾಗಿ, ವಿಷಯಸಂಗದಲ್ಲಿದ್ದು ವ್ಯರ್ಥವಾಗಿ ನರಕಕ್ಕೆ ಹೋಗುವಾತನು ಶಿವಯೋಗಿಯಾಗಬಲ್ಲನೆ ? (ಆಗಲಾರನು) ಆದರೆ - ಶಿವಸಾಮರಸ್ಯಜ್ಞಾನದಿಂದ ಜನಿಸಿದ ದಾಸೋಹಂಭಾವ-ಎಂದರೆ - ಪೂಜ್ಯ ಪೂಜಕ ಭಾವದಿಂದ ಕೂಡಿದಾತನೇ ಶ್ರೇಷ್ಠನಾ ಶಿವಯೋಗಿಯೆನಿಸುವನು. (ಶಿವಸಾಮರಸ್ಯದ ಅನುಭವವನ್ನು ಪಡೆದು ಶಿವನಾಗಿ ಶಿವನನ್ನು ಪೂಜಿಸುವ ದಾಸೋಹಂಭಾವವುಳ್ಳವನೇ ನಿಜವಾದ ಶಿವಯೋಗಿಯೆಂದು ಭಾವ.) ೪೦

**ಅವತಾರಿಕೆ:** ಇಂತುದೇಹಾದಿ ಪ್ರಪಂಚದಿಂ ವ್ಯತಿರಿಕ್ತನಾದ ಶರಣನುನಾಹಂ ಕೋಽಹಂ ಸೋಽಹವೆಂಬ ಭ್ರಮತ್ರಯವಿಲ್ಲದ ನಿರಹಂಭಾವಿಯಾಗಿರ್ಪನೆಂದು ಪೇಳುತ್ತಿರ್ದಪಂ.

**ಶಾರ್ದೂಲವಿಕ್ರೀಡಿತಂ**

ನಾಹಂಭಾವ ಮದಾತ್ಮನಲ್ಲದಿಟತಾಂ ಮತ್ತಾವನೆಂದೆಂಬುದೀ
ಕೋಽಹಂ ಭಾವಪದಾರ್ಥಸಾಕ್ಷಿಯೆನಿಪಾತ್ಮಂ ಸತ್ಯಮಾನೆಂಬುದೆ
ಸೋಽಹಂ ಭಾವಪದಾರ್ಥಮಾತ್ಮಪತಿಗಾಂ ದಾಸಂ ಶಿವಂಗೆಂಬದಾ
ಸೋಽಹಂ ಭಾವಮದೇ ನಿರಿರಂ ನಿರಹಂಭಾವಂ ಶಿವಾವಲ್ಲಭಾ ೪೧

**ಟೀಕೆ :** ನಾಹಂ ಭಾವಂ - ನಾಹಂಭಾವವೆಂದೊಡೆ ಅನಾತ್ಮವಾವ ದೇಹವು, ಅದು - ತಾನು, ಆತ್ಮನಲ್ಲ - ಆತ್ಮನಲ್ಲವೆಂಬುದರ್ಥ, ದಿಟ - ನಿಶ್ಚಯ, ಮತ್ತೆ - ಮರಳಿ, ಕೋಽಹಂಭಾವಪದಾರ್ಥ - ಕೋಽಹಮೆಂಬ ವಾಕ್ಯಾರ್ಥವು, ತಾಂ - ತಾನು, ಆವಂ ಎಂಬುದೇ - ಆವಾತನೋ ಯೆಂಬುದೇ, ಸೋಽಹಂಭಾವಪದಾರ್ಥಂ - ಸೋಽಹಂಭಾವವೆಂಬಪದಕ್ಕರ್ಥವು, ಸಾಕ್ಷಿಯೆನಿಪ ಆತ್ಮಂ - ದೇಹಾದಿಪ್ರಪಂಚಕ್ಕೆ ಸಾಕ್ಷಿಯಾದಾತ್ಮನು, ಆನೆಂಬುದೇ - ನಾನೆಂದೆಂಬುದೇ, ಸತ್ಯಂ-ಸಹಜವಾದರ್ಥವು, ಆತ್ಮಪತಿಗೆ ತನ್ನ ಪತಿಯಾದ, ಶಿವಂಗೆ - ಮಹಾದೇವಂಗೆ, ಆಂ - ನಾನು, ದಾಸ ನೆಂಬ - ಬಂಟನೆಂಬ, ದಾಸೋಽಹಂ ಭಾವಂ - ದಾಸೋಽಹಂ ಎಂಬ ಪದಾರ್ಥವು, ಅದೇ - ಅದುತಾನೇ, ನಿರೀಹ - ನಿಸ್ಪೃಹತ್ವವುಳ್ಳ, ನಿರಹಂಭಾವ - ನಿರಹಂಕಾರ ತ್ವವು, (ಈ ಅರ್ಥದಲ್ಲಿ —

"ನಾಹಮನಾತ್ಮಾಪಶ್ಚಾತ್ಕೋಽಹಂ ಯೋಽಹಂ ಪದಸ್ಥ ಆತ್ಮಾಸಾಕ್ಷಿಂ
ಸೋಽಹಂ ತತ್ಪತಿ ಶಿವದಾಸೋಽಹಂ ದಾಸೋಽಹ ಮಿತಿಚರೇಮುಪರಿ"

ಎಂದುಂಟಾಗಿ).

**ಭಾವಾರ್ಥಬೋಧಿನಿ :** ದೇಹೋಽಹಂ - ದೇಹವೇ ನಾನು, ಎಂಬ ಭಾವ ವಿಲ್ಲದಿರುವುದೇ ನಾಹಂಭಾವವೆನಿಸುವುದು. ನಾನು ಯಾರು ? ಎಂಬರ್ಥವುಳ್ಳುದೇ ಕೋಽಹಂಭಾವವೆನಿಸುವುದು. ದೇಹಾದಿ ಪ್ರಪಂಚಕ್ಕೆ ಸಾಕ್ಷೀಭೂತನಾದ ಆತ್ಮನೇ ನಾನೆಂಬ ತಿಳುವಳಿಕೆಯೇ ನಿಜವಾಗಿ ಸೋಽಹಂಭಾವವೆನಿಸುವುದು. ತನ್ನ ಪತಿಯಾದ ಶಿವನಿಗೆ ತಾನು ಕಿಂಕರನೆಂದು ತಿಳಿದಿರುವ ನಿಃಸ್ಪೃಹವೂ ನಿರಹಂಕಾರವೂಉಳ್ಳ ಭಾವವೇ ದಾಸೋಽಹಂಭಾವವೆನಿಸುವುದು. ೪೧

**ಶಾರ್ದೂಲವಿಕ್ರೀಡಿತಂ**

ನಾಹಂ ಎನ್ನನನಾತ್ಮದೃಷ್ಟಿ ಮೊದಲಿಂಗಿಲ್ಲಾಗಿ ತಾಂ ಮೋಹದಿಂ
ಕೋಽಹಂ ಎನ್ನನನಾದಿಸಿದ್ಧಪುರುಷಂ ತಾನಾಗಿ ಸಂದೇಹದಿಂ
ಸೋಽಹಂ ಎನ್ನನಿದಿರ್ಚಿ ಕಾಣ್ಬುಭಯಭಾವಭ್ರಾಂತಿಯಿಲ್ಲಾಗಿ ದಾ
ಸೋಽಹಂ ಎನ್ನನುಪಾಸ್ಯನಾಗಿ ಶರಣಂ ತಾನೇ ಶಿವಾವಲ್ಲಭಾ ೪೨

**ಟೀಕೆ** : ಮೋಹದಿಂ - ಪ್ರೀತಿಯಿಂದ, ಅನಾತ್ಮದೃಷ್ಟಿ - ದೇಹವೆಂಬ ಭಾವವು, ಮೊದಲಿಂಗೆ ಇಲ್ಲಾಗಿ - ಮುನ್ನವೇ ಇಲ್ಲವಾದ ಕಾರಣ, ನಾಹಂ ಎನ್ನ - ನಾಹಮೆಂಬವನಲ್ಲ, ತಾಂ - ತಾನು, ಅನಾದಿಸಿದ್ಧ ಪುರುಷಂ ಆಗಿ - ಅನಾದಿಸಂಸಿದ್ಧವಾದ ನಿಜಾತ್ಮನಾದ ಕಾರಣ, ಸಂದೇಹದಿಂ - ಸಂಶಯದಿಂದೆ, ಕೋಽಹಂ ಎನ್ನಂ - ಕೋಽಹಮೆಂಬುವನಲ್ಲ, ಇದಿರ್ಚಿ - ಇದಿರಿಸಿಟ್ಟು, ಕಾಣ್ಬ - ತೋರುವ, ಉಭಯಭಾವಭ್ರಾಂತಿಯಿಲ್ಲಾಗಿ, ದೃಷ್ಟಾದೃಷ್ಟ ಭಾವಭ್ರಾಂತಿಯಿಲ್ಲವಾದ ಕಾರಣ, ಸೋಽಹಂ ಎನ್ನಂ-ಸೋಽಹಮೆಂಬುವನಲ್ಲ, ಶರಣಂ-ಶರಣನು, ತಾನೇ-ಸ್ವಯಂ ತಾನಾಗಿ, ಉಪಾಸ್ಯನಾಗಿ-ಉಪಾಸನೆ ಮಾಡಲ್ತಕ್ಕ ವಸ್ತುವಾಗಿ, ದಾಸೋಽಹಂ ಎನ್ನಂ-ದಾಸೋಽಹಂ ಎಂಬುವವನಲ್ಲ.

**ಭಾವಾರ್ಥಬೋಧಿನಿ** - ಶಿವಶರಣನಿಗೆ ತಾನು ದೇಹರೂಪನೆಂಬ ಮೋಹವು ಮೊದಲಿನಿಂದಲೇ ಇಲ್ಲದಿರುವುದದಿಂದ ಆತನು 'ನಾಹಂ' ಎಂದು ಹೇಳಿಕೊಳ್ಳುವವನಲ್ಲ. ಇನ್ನು ತಾನು ಅನಾದಿಸಂಸಿದ್ಧವಾದ ನಿಜಾತ್ಮನೆಂದು ತಿಳಿದಿರುವುದರಿಂದ 'ಕೋಽಹಂ' ಎಂದು ಸಂಶಯದಿಂದ ಕೇಳುವವನಲ್ಲ. ತನಗೆ ಭಿನ್ನವಾದ ಪರವಸ್ತುವನ್ನು ಮುಂದಿರಿಸಿಕೊಂಡು, ಆ ಪರವಸ್ತುವೇ ತಾನೆಂದು ಹೇಳುವ ಉಭಯಭಾವದ (ಜೀವಶಿವರೆಂಬ ಭಾವದ) ಕಲ್ಪನೆಯುಳ್ಳವನಲ್ಲದಕಾರಣ ಆ ಶರಣನು 'ಸೋಽಹಂ' ಎಂಬ ಮಾತನ್ನು ನುಡಿವವನಲ್ಲ. ಮತ್ತೆ ಆತನು ತಾನೇ ಉಪಾಸ್ಯವಸ್ತುವಾಗಿರುವುದರಿಂದ (ಶಿವನಾಗಿ ಶಿವನನ್ನು ಉಪಾಸಿಸುವುದರಿಂದ) ಸದಾ ಸ್ವಾಮಿಭೃತ್ಯತ್ವರೂಪದ 'ದಾಸೋಽಹಂ' ಎಂಬ ನುಡಿಯನ್ನೂ ನುಡಿಯತಕ್ಕವನಲ್ಲ. ಎಂದರೆ ಶರಣನು ದ್ವೈತಭಾವದ ದಾಸೋಽಹಂಭಾವದವನಲ್ಲ. ತಾನೂ ಶಿವಾಭಿನ್ನನೆಂಬ ಅದ್ವೈತಭಾವದ ದಾಸೋಽಹಂಭಾವ (ಉಪಾಸ್ಯೋಪಾಸಕಭಾವ) ವುಳ್ಳವನಾಗಿರುವನೆಂದು ತಾತ್ಪರ್ಯ. ೪೨

## ಶಾರ್ದೂಲ ವಿಕ್ರೀಡಿತ ವೃತ್ತಂ

ದಾನಂ ದ್ರವ್ಯಸಮರ್ಪಣಂ ನಿರುತಮಾದ್ರವ್ಯಾರ್ಪಣಂ ದಾನಮೊಂ
ದೇ ನಿರ್ಣೀತಪದಾರ್ಥಮಾದ ವಿಲಸದ್ದಾಧಾತು ಶಬ್ದಕ್ರಿಯಾ
ಧೀನಾತ್ಮೀಯತನುತ್ರಯಾದಿ ಸಕಲದ್ರವ್ಯಂಗಳಂ ಕೊಟ್ಟು ನಿಂ
ದಾನೀಗಳ್ ಶಿವನಪ್ಪೆನೆಂಬುದಿದು ದಾಸೋಹಂ ಶಿವಾವಲ್ಲಭಾ ೪೩

**ಟೀಕೆ :** ದಾನಂ - ದಾನವೆಂಬುದು, ದ್ರವ್ಯಸಮರ್ಪಣಂ - ದ್ರವ್ಯವಂ ಸಮರ್ಪಿಸುವಿಕೆಯು, ನಿರುತಂ - ನಿಶ್ಚಯವಾಗಿ, ಆ ದ್ರವ್ಯಾರ್ಪಣಂ - ಆ ದ್ರವ್ಯಾರ್ಪಣವೆಂಬುದು, ದಾನಂ - ದಾನವು, ಒಂದೇ ನಿರ್ಣೀತಪದಾರ್ಥಮಾದ, - ನಿಶ್ಚೈಸಲ್ಪಟ್ಟ ಒಂದೇ ಶಬ್ದಾರ್ಥಮಾದ, ವಿಲಸತ್......... ದ್ರವ್ಯಂಗಳಂ - ವಿಲಸತ್ - ಒಪ್ಪುತ್ತಿರುವ, ದಾಧಾತು - ("ಡುದಾಞ್ ದಾನೇ") ಎಂಬ ಧಾತುವಿನ, ಶಬ್ದಕ್ರಿಯಾ-ಪದಾರ್ಥವ್ಯಾಪಾರಕ್ಕೆ, ಅಧೀನಂ - ವಶವಾದ, ಆತ್ಮೀಯ - ತನ್ನಸಂಬಂಧವಾದ, ತನುತ್ರಯಾದಿ - ಶರೀರತ್ರಯ ಮೊದಲಾದ, ಸಕಲದ್ರವ್ಯಂಗಳಂ - ಸಮಸ್ತ ಪದಾರ್ಥವನ್ನು, ಕೊಟ್ಟು - ಸಮರ್ಪಿಸಿ, ನಿಂದು - ಸ್ಥಿರವಾಗಿ, ಆಂ - ನಾನು, ಈಗಂ - ಈಗಳ್, ಶಿವನಪ್ಪೆಂ - ಶಿವನಪ್ಪೆನು, ಎಂಬುದು - ಹೀಗೆಂಬುದು, ಇದು - ಇದುತಾನೆ, ದಾಸೋಹಂ - ದಾಸೋಹಂಭಾವವು, ಈ ಅರ್ಥದಲ್ಲಿ, "ಶರೀರಾದಿ ಪದಾರ್ಥಂ ಚ ದತ್ವಾದಾನಂ ಸಮರ್ಪಣಂ" ಎಂದುಂಟು.

**ಭಾವಾರ್ಥಬೋಧಿನಿ :** ದಾನವೆಂದರೆ ದ್ರವ್ಯಸಮರ್ಪಣವು, ದ್ರವ್ಯಸಮರ್ಪಣವೇ ದಾನವೆನಿಸುವುದು. ಹೀಗೆ "ಡುದಾಞ್ ದಾನೇ" ಎಂಬರ್ಥವುಳ್ಳ ದಾ ಧಾತುವಿನ ದಾನಕ್ರಿಯೆಗೆ ಅಧೀನವಾದ ತನ್ನ ದೇಹಕರಣಾದಿಗಳೆಲ್ಲವನ್ನೂ ಶಿವನಿಗೆ ಸಮರ್ಪಿಸಿ, ಬಳಿಕ ಈಗ ನಾನು ಶಿವನಾದೆನೆಂಬ ನಿಶ್ಚಯದ ಸಿರಹಂಭಾವವೇ ದಾಸೋಹಂಭಾವವೆನಿಸುವುದು. ೪೩

## ಶಾರ್ದೂಲ ವಿಕ್ರೀಡಿತ ವೃತ್ತಂ

ಆನೆಂದೆಂಬಭಿಮಾನಮೆಲ್ಲವರೊಳೇನುಂ ಪೊರ್ದ್ದವಭ್ಯರ್ಚನ
ಜ್ಞಾನಧ್ಯಾನಸಮಾಧಿನೈಷ್ಠಿಕತೆಯಿಂ ಸ್ವಾತ್ಮಾರ್ಪಣಂಗೆಯ್ವನು
ಷ್ಠಾನ ಪ್ರಕ್ರಿಯೆ ತಾನೆ ಮತ್ತೆ ನಿರಹಂ ತಾ ಮುಕ್ತಿ ಸದ್ಭಕ್ತಿ ಕೇಳ್
ನೀನೆಂದೆಂಬಭಿಮಾನಮೆಲ್ಲವರೊಳತ್ಯರ್ಥಂ ಶಿವಾವಲ್ಲಭಾ ೪೪

**ಟೀಕೆ :** ಶಿವಾವಲ್ಲಭಾ - ಎಲೈ ಪಾರ್ವತೀ ರಮಣನೆ, ಅತ್ಯರ್ಥಂ - ಮಿಗಿಲಾಗಿ ಎಲ್ಲವರೊಳ್ - ಎಲ್ಲಾ ಪದಾರ್ಥಂಗಳಲ್ಲಿಯೂ, ನೀನೆಂಬಭಿಮಾನಂ - ನೀನೆಂಬಭಿಮಾನವು, ಅಭ್ಯರ್ಚನಜ್ಞಾನಧ್ಯಾನಸಮಾಧಿನೈಷ್ಠಿಕತೆಯಿಂ - ಅಭ್ಯರ್ಚನ - ಪೂಜೆಯಲ್ಲಿ, ಜ್ಞಾನ - ಜ್ಞಾನದಲ್ಲಿ, ಧ್ಯಾನ - ಧ್ಯಾನದಲ್ಲಿ, ಸಮಾಧಿ – ಸಮಾಧಿಯಲ್ಲಿ, ನೈಷ್ಠಿಕತೆಯಿಂ – ನಿಷ್ಠೆಯುಳ್ಳತನದಿಂದ, ಎಲ್ಲವರೊಳ್ – ಸಮಸ್ತ ಪದಾರ್ಥಂಗಳಲ್ಲಿ, ಆನೆಂದೆಂಬಭಿಮಾನಂ – ನಾನೆಂದೆಂಬಭಿಮಾನವು, ಏನುಂ ಪೊರ್ದದೆ - ಕಿಂಚಿತ್ತೂ, ಹೊಂದದೆ, ಸ್ವಾತ್ಮಾರ್ಪಣಂಗೈಯ್ವ - ತನ್ನನೆ ಶಿವಂಗೆ ಸಮರ್ಪಿಸುವುದರ, ಅನುಷ್ಠಾನಪ್ರಕ್ರಿಯೆ - ಅನುಷ್ಠಾನ - ಅನುಷ್ಠಾನಮಾಡುವಲ್ಲಿ, ಪ್ರಕ್ರಿಯೆ - ವ್ಯಾಪಾರವು, ತಾನೆ - ಅದುತಾನೆ, ಮತ್ತೆ - ಮರಳಿ, ನಿರಹಂತಾಮುಕ್ತಿಸದ್ಭಕ್ತಿ - ನಿರಹಂತಾಮುಕ್ತಿ - ನಿರಹಂಕಾರತ್ವವೇ ಲಕ್ಷಣವಾಗುಳ್ಳ ಮುಕ್ತಿಯು, ಸದ್ಭಕ್ತಿ ಅಕಳಂಕವಾದ ಭಕ್ತಿಯು. ೪೪

**ಭಾವಾರ್ಥಬೋಧಿನಿ .** ಶಿವಾವಲ್ಲಭನೆ, ಸರ್ವಪದಾರ್ಥಗಳಲ್ಲಿಯೂ ನಾನು ನನ್ನದೆಂಬಭಿಮಾನವನ್ನು ಕಿಂಚಿತ್ತಾದರೂ ಪಡೆಯದಿರ್ದು, ಸರ್ವಪದಾರ್ಥಗಳ-ಲ್ಲಿಯೂ ನೀನೆ ವ್ಯಾಪಿಸಿರುವೆಯೆಂದರಿದು, ನಿನ್ನ ಪೂಜೆಯಲ್ಲಿಯೂ ಧ್ಯಾನದಲ್ಲಿಯೂ ಸಮಾಧಿಯಲ್ಲಿಯೂ ಸರ್ವವೂ ನಿನ್ನದೆಂಬ ನಿಷ್ಠೆಯು ಬಲಿತು, ನಿನಗೆ ಆತ್ಮಾರ್ಪಣ-ವನ್ನು ಮಾಡುವ ಸತ್ಕ್ರಿಯೆಯೇ ನಿರಹಂಭಾವದ ಮುಕ್ತಿಯೆನಿಸುವುದು, ಮತ್ತು ಅದೇ ಸದ್ಭಕ್ತಿಯೆನಿಸುವುದು. ೪೪

**ಮತ್ತೇಭವಿಕ್ರೀಡಿತಂ**

ತನುಪಂಚೇಂದ್ರಿಯಪಙ್ಕ್ತಿ ಬುದ್ಧಿಕರಣಪ್ರಾಣಾಧಿಕಂ ಸರ್ವಮಿಂ
ತೆನಗಾನೆಂಬಭಿಮಾನಮಂ ಪರದುಭಕ್ತಿ ಜ್ಞಾನಯೋಗೈಕವಾ
ಸನೆಯಿಂದರ್ಪಿಸಿ ಲಿಂಗದಲ್ಲಿ ಮೆರೆವಾಲಿಂಗಾಭಿಮಾನಿತ್ವವ
ರ್ತನಮಿಾಗಾತ್ಮಸಮರ್ಪಣಂ ಮೃಪೆಬಳಕ್ಕೆಲ್ಲಂ ಶಿವಾವಲ್ಲಭಾ ೪೫

**ಟೀಕೆ :** ತನು......ಪ್ರಾಣಾದಿಕಂ - ತನು - ದೇಹವು, ಪಂಚೇಂದ್ರಿಯ-ಪಂಚೇಂದ್ರಿಯಗಳ, ಪಙ್ಕ್ತಿ . ಸಾಲುಗಳು, ಬುದ್ಧಿಕರಣ - ಬುದ್ಧಿಮೊದಲಾದ

ಕರಣಂಗಳು, ಪ್ರಾಣಾದಿಕಂ - ಪ್ರಾಣವಾಯು ಮೊದಲಾದುದು, ಸರ್ವಂ - ಎಲ್ಲವೂ, ಇಂತು - ಈ ಪ್ರಕಾರದಿಂದೆ, ಎನಗೆ - ಎನ್ನವು, ಆಂ - ಇವೆಲ್ಲವೂ ಆನು, ಎಂಬ-ಹೀಗೆಂಬ, ಅಭಿಮಾನಮಂ - ಅಭಿಮಾನವನ್ನು, ಪರಮಭಕ್ತಿಜ್ಞಾನ ಯೋಗೈಕ ವಾಸನೆಯಿಂದೆ - ಪರಮ - ಉತ್ಕೃಷ್ಟವಾದ, ಭಕ್ತಿಜ್ಞಾನಯೋಗ - ಭಕ್ತಿಯೋಗ ಜ್ಞಾನಯೋಗಂಗಳಿಂವಾದ, ಏಕ - ಮುಖ್ಯವಾದ, ವಾಸನೆಯಿಂದೆ - ಸಂಸ್ಕಾರ ದಿಂದೆ, (ಸಂಸ್ಕಾರವೆಂದೊಡೆ - ನಿರಹಂಭಾವವೆಂಬುದರ್ಥಂ) ಲಿಂಗದಲ್ಲಿ - ಶಿವ ಲಿಂಗದಲ್ಲಿ, ಅರ್ಪಿಸಿ - ಸಮರ್ಪಿಸಿ, ಮೆರೆವ - ಒಪ್ಪುವಂಥ, ಲಿಂಗಾಭಿಮಾನತ್ವ ವರ್ತನಂ - ಲಿಂಗಾಭಿಮಾನಿತ್ವ - ಸರ್ವವೂ ಲಿಂಗಸ್ವರೂಪವೆಂಬ ಅಭಿಮಾನವ ನುಳ್ಳತನವ, ವರ್ತನಂ - ನಡತೆಯು, ಈಗ - ಈಗಳು, ಆತ್ಮಸಮರ್ಪಣಂ-ಆತ್ಮಸಮರ್ಪಣವು, ಬಳಿಕ್ಕೆ - ಮರಳಿ, ಎಲ್ಲಂ - ನಾನು ನನ್ನದೆಂಬುದು ಮೊದಲಾ ದುವೆಲ್ಲವೂ, ವೃಥೆ - ಅಬದ್ಧವು.

**ಭಾವಾರ್ಥಬೋಧಿನಿ :** ದೇಹತ್ರಯ, ಜ್ಞಾನಕರ್ಮೇಂದ್ರಿಯಗಳು, ಅಂತಃ ಕರಣಗಳು, ಪ್ರಾಣ ಇವೇ ಮೊದಲಾದವುಗಳು ನನ್ನವು, ಇವೆಲ್ಲವುಗಳೂ ನಾನು ಎಂದರೆ - ಇವುಗಳಿಂದುಂಟಾಗುವ ಭೋಗವನ್ನು ಭೋಗಿಸುವವನು ನಾನು-ಎಂಬ ಅಭಿಮಾನವನ್ನು ಉತ್ತಮವಾದ ಶಿವಭಕ್ತಿಜ್ಞಾನಯೋಗದಿಂದ ಲಬ್ಧವಾದ ನಿರಹಂಭಾವದ ಸಂಸ್ಕಾರ ಬಲದಿಂದ ಶಿವಲಿಂಗಕ್ಕರ್ಪಿಸಿ, ಸರ್ವವೂ ಲಿಂಗಸ್ವರೂಪ ವೆಂಬ ಲಿಂಗಾಭಿಮಾನದಿಂದ ನಡೆದುಕೊಳ್ಳುವುದೇ ಆತ್ಮಾರ್ಪಣವೆನಿಸಿಕೊಳ್ಳುವುದು. ಇದನ್ನು ಬಿಟ್ಟು ನಾನು ನನ್ನದನ್ನು ಲಿಂಗಕ್ಕರ್ಪಿಸಿದೆನೆಂಬುದು ವ್ಯರ್ಥ. ೪೫

### ಮತ್ತೇಭವಿಕ್ರೀಡಿತಂ

ಶಿರಮಂ ಜಿಹ್ವೆಯ ನಕ್ಷಿಯಂ ಕರಮನೇಕೀವರ್ವ್ಯಥಾಭಕ್ತಿತ
ತ್ಪರಭಾವಂ ನೆಲೆಗೊಳ್ಳದಜ್ಞರಿವರಿಂದೇಂ ಸಿದ್ಧಿ ತನ್ನಂ ಶಿವಂ
ಗಿರದೀವುತ್ತಮಸತ್ವಮಂ ಮರೆಮ ತನ್ನಿಂವನ್ನಮಪ್ಪಂಗಮಂ
ಅರಿದಿತ್ತಲ್ಲಿ ವಿಮುಕ್ತಿಸೌಖ್ಯಪವಮುಂಟೇ ಪೇಳ್ ಶಿವಾವಲ್ಲಭಾ ೪೬

**ಟೀಕೆ** : ಅಜ್ಞರ್ - ಮೂಢರು, ಭಕ್ತಿತತ್ಪರಭಾವಂ - ಭಕ್ತಿತಾತ್ಪರ್ಯವು, ನೆಲೆಗೊಳ್ಳದೆ - ಸ್ಥಿರವಾಗದೆ, ಶಿರಮಂ - ತಲೆಯನ್ನು, ಜಿಹ್ವೆಯಂ - ನಾಲಗೆಯನ್ನು, ಅಕ್ಷಿಯಂ - ಕಣ್ಣನ್ನು, ಕರಮಂ - ಹಸ್ತವನ್ನು, ವೃಥಾ - ವ್ಯರ್ಥವಾಗಿ, ಏಕೀವರ್ - ಏತಕ್ಕೆ ಕೊಡುವರು ? ಇದರಿಂದೆ ಏಂ ಸಿದ್ಧಿ - ಇವಂ ಕೊಡುವುದರಿಂದೇನು ಪ್ರಯೋಜನ ? ತನ್ನಂ - ತನ್ನನ್ನು, ಶಿವಂಗೆ - ಶಿವಲಿಂಗಕ್ಕೆ, ಇರದೆ-ನಿಲ್ಲದೆ, ಈವ - ಕೊಡುವ, ಉತ್ತಮ ಸತ್ವಮಂ - ಶ್ರೇಷ್ಠವಾದ ಸಾತ್ವಿಕಗುಣವನ್ನು, ಮರೆದು - ನೆನೆಯದೆ, ತನ್ನಿಂದೆ - ಆತ್ಮನಿಂ, ಅನ್ಯಮಪ್ಪ - ಬೇರಾದ, ಅಂಗಮಂ - ಅವಯವಂಗಳನು, ಅರಿದು - ಕೊಯ್ದು, ಇತ್ತಲ್ಲಿ - ಕೊಟ್ಟಲ್ಲಿ, ವಿಮುಕ್ತಿಸೌಖ್ಯಪದಂ - ವಿಮುಕ್ತಿ - ಮೋಕ್ಷವೆಂಬ, ಸೌಖ್ಯಪದಂ - ಆನಂದವಾದ ಪದವು, ಉಂಟೆ ? ಪೇಳ್ - ಹೇಳು, ಇಲ್ಲವೆಂದರ್ಥ. ೪೬

**ಭಾವಾರ್ಥಬೋಧಿನಿ** : ಮೂಢರು ತಮ್ಮಲ್ಲಿ ಭಕ್ತಿತತ್ಪರತೆಯು ನೆಲೆ-ಗೊಳ್ಳದೆಯೇ ತಮ್ಮ ತಲೆಯನ್ನೋ, ನಾಲಿಗೆಯನ್ನೋ, ಕಣ್ಣನ್ನೋ, ಕೈಯನ್ನೋ ವ್ಯರ್ಥವಾಗಿ ಶಿವನಿಗೆ ಏಕೆ ಕೊಡುವರು ? ಹೀಗೆ ಕೊಡುವುದರಿಂದೇನು ಪ್ರಯೋ-ಜನ ? ತನ್ನನ್ನೇ ಶಿವಲಿಂಗಕ್ಕೆ ಬಿಡದರ್ಪಿಸುವ ಶ್ರೇಷ್ಠವಾದ ಸಾತ್ವಿಕಗುಣವನ್ನು ಮರೆತು, ಆತ್ಮಸ್ವರೂಪನಾದ ತನ್ನಿಂದ ಬೇರಾದ ಅವಯವಂಗಳನ್ನು ಕೊಯ್ದು ಕೊಟ್ಟರೆ ಮೋಕ್ಷಾನಂದಪದವು ಲಭಿಸುವುದೇ ? ಹೇಳು. ಇಲ್ಲವೆಂದಭಿಪ್ರಾ-ಯವು. ೪೬

**ಮತ್ತೇಭವಿಕ್ರೀಡಿತಂ**

ನಿರಹಂಭಾವಮದುಳ್ಳೊಡೆಲ್ಲವರೊಳೇನುಂ ಬೇಡದಾನಂ ತಪ
ಶ್ಚರಣಂ ಪೂಜನಮುಂತದಿಲ್ಲದೊಡದೆಲ್ಲಂ ಬಂಧಹೇತುಕ್ರಿಯಾ
ಕರಣಂ ಕೊಟ್ಟೊಡಮಾಹ ಪೂಜಿಸಿದೊಡಂ ನೋಡಾ ತಪಂಗೈದೊಡಂ
ಪರಮಾರ್ಥಂ ನಿರಹಂಕೃತಿಕ್ರಿಯೆ ಬಳಿಕ್ಕೆಲ್ಲಂ ಶಿವಾವಲ್ಲಭಾ ೪೭

**ಟೀಕೆ** : ಎಲ್ಲವರೊಳ್ - ಸಕಲರಲ್ಲಿಯೂ, ನಿರಹಂಭಾವಂ - ನಿರಹಂಕಾರತ್ವವು, ಅದುಳ್ಳೊಡೆ - ಅದುಂಟಾದೊಡೆ, ದಾನಂ - ದ್ರವ್ಯತ್ಯಾಗವು, ತಪಶ್ಚರಣಂ-ಚಾಂದ್ರಾಯಣಾದಿತಪದಾಚರಣೆಯು, ಪೂಜನಂ - ಪೂಜೆಯು, ಏನುಂಬೇಡ-

ಎಲ್ಲವೂ ಸಾಕು, ಕೊಟ್ಟೊಡಂ - ದಾನಮಾಡಿದೊಡೆಯೂ, ಪೂಜಿಸಿದೊಡಂ-ಪೂಜೆಯುಮಾಡಿದೊಡೆಯೂ, ತಪಂಗೈದೊಡಂ – ತಪಮುಂಮಾಡಿದೊಡೆಯೂ ಅಂತಮು - ಆ ನಿರಹಂಭಾವವುಯೆಂಬುದು, ಇಲ್ಲದೊಡೆ-ಇಲ್ಲದಿರ್ದೊಡೆ, ಅದೆಲ್ಲಂ-ಆ ದಾನಮೊದಲಾದುದೆಲ್ಲವೂ, ಬಂಧಹೇತುಕ್ರಿಯಾಕರಣಂ - ಸಂಸಾರಬಂಧಕ್ಕೆ ಕಾರಣವಾದ ವ್ಯಾಪಾರಕ್ಕೆ ಸಾಧನವು, ಆಹ - ಆಶ್ಚರ್ಯವು, ಬಳಿಕ್ಕೆ - ಮರಳಿ, ಎಲ್ಲಂ - ಸರ್ವವೂ, ನಿರಹಂಕೃತಿಕ್ರಿಯೆನೋಡಾ - ನಿರಹಂಭಾವವೆಂಬುದೇ ನೋಡು, ಪರಮಾರ್ಥಂ - ಇದೀಗನಿಶ್ಚಯವು. ೪೭

**ಭಾವಾರ್ಥಬೋಧಿನಿ :** ಎಲ್ಲದರಲ್ಲಿಯೂ ನಿರಹಂಭಾವವೊಂದಿರ್ದೊಡೆ, ದಾನ, ತಪಸ್ಸು, ಪೂಜೆ ಮೊದಲಾದುದೊಂದೂ ಬೇಡ. ನಿರಹಂಭಾವವಿಲ್ಲದೆ ದಾನ ಮಾಡಿದರೂ ಪೂಜಿಸಿದರೂ ತಪಸ್ಸು ಮಾಡಿದರೂ ಇವೆಲ್ಲವೂ ಬಂಧಕಾರಣಕ್ರಿಯೆ ಗಳೆನಿಸುವವು. (ಅಜ್ಞರು ಅಹಂಕಾರಮಮಕಾರವುಳ್ಳವರಾಗಿ ಯಾವ ಕ್ರಿಯೆಯಲ್ಲಿ ತೊಡಗಿದರೂ ಬಂಧನಕ್ಕೊಳಗಾಗುವುದು ನಿಶ್ಚಯವೆಂದರ್ಥ.) ಆದುದರಿಂದ ನಿರಹಂಭಾವದ ಸತ್ಕ್ರಿಯೆಯೇ ಮೋಕ್ಷಸಾಧನವು. ೪೭

**ಅವತಾರಿಕೆ :** ದ್ವೈತಾದ್ವೈತಗಳಿಂದ ವಿಲಕ್ಷಣವಾದುದೇ ಶರಣ ಮಾರ್ಗವೆಂದು ಹೇಳುತ್ತಿರ್ದಪಂ—

**ಮತ್ತೇಭವಿಕ್ರೀಡಿತಂ**

ಪರಿಪೂರ್ಣಂಗಡಬೊಮ್ಮ ಮಕ್ಕಟಮಗುಳ್ದೇಕೊಂದು ತಾವಿಂಗೆಪೋ
ಪರೊ ತಾವಿರ್ದ್ದೆಡೆಯಲ್ಲಿ ಕಾಣದೆ ವೃಥಾವಾಗ್ಬ್ರಹ್ಮದದ್ವೈತಿಗ
ಳ್ಗಿರಿ ಯೆಂದಂಬುಧಿಯೆಂದು ಪುಣ್ಯನದಿಯೆಂದು ಕ್ಷೇತ್ರದೈವಂಗಳಂ
ದಿರದಯ್ಯೋ ನಿಜನಿಷ್ಠೆಯಿಲ್ಲದವರಂ ನೋಡಾ ಶಿವಾವಲ್ಲಭಾ ೪೮

**ಟೀಕೆ :** ತಾವಿರ್ದ್ದ - ತಾವಿರುವ, ಎಡೆಯಲ್ಲಿ - ಸ್ಥಾನದಲ್ಲಿ, ಕಾಣದ - ಅರಿಯದ, ವೃಥಾವಾಗ್ಬ್ರಹ್ಮದ - ವೃಥಾ - ವ್ಯರ್ಥವಾಗಿ, ವಾಗ್ಬ್ರಹ್ಮದ - ವಾಚಮಾತ್ರ ದಿಂದ ಬ್ರಹ್ಮವನುಡಿವ, ಅದ್ವೈತಿಗಳ್ - ಅಭೇದವಾದಿಗಳು, ಬೊಮ್ಮಂ - ಬ್ರಹ್ಮವು, ಪರಿಪೂರ್ಣಂಗಡ - ವ್ಯಾಪಕವಂತಕಂಡ! ಗಿರಿಯೆಂದು - ಪರ್ವತ





ವೆಂದು, ಅಂಬುಧಿಯೆಂದು - ಸಮುದ್ರವೆಂದು, ಪುಣ್ಯನದಿಯೆಂದು - ಪುಣ್ಯತೀರ್ಥ ಮೆಂದು, ಕ್ಷೇತ್ರದೈವಂಗಳೆಂದು - ಪುಣ್ಯಕ್ಷೇತ್ರದೈವಂಗಳೆಂದು, ಇರದೆ - ಸ್ಥಿರ ವಾಗದೆ, ಮಂಗುಳ್ದು - ಮರಳಿ, ಅಕ್ಕಟ - ಅಯ್ಯೊ, ಒಂದುಂತಾವಿಂಗೆ - ಸ್ಥಳಾಂತರಕ್ಕೆ, ಏಕೆಪೋಪರೊ - ಏನು ಕಾರಣ ಹೋಗುವರೊ ! ನಿಜನಿಷ್ಠೆಯಿಲ್ಲ ದವರಂ - ಸಹಜವಾದ ಬ್ರಹ್ಮದಲ್ಲಿ ನಿಷ್ಠೆಯಿಲ್ಲದವರನ್ನು, ನೋಡಾ - ನೋಡು, ಅಯ್ಯೊ - ಅಕ್ಕಟ, ಆಹಾ - ಆಶ್ಚರ್ಯವು.

**ಭಾವಾರ್ಥಬೋಧಿನಿ :** ಬ್ರಹ್ಮವು ಸರ್ವತ್ರ ಪರಿಪೂರ್ಣವಾಗಿರುವುದೆಂದು ವ್ಯರ್ಥವಾಗಿ ಬಾಯಲ್ಲಿ ಮಾತ್ರ ಹೇಳುತ್ತಿರುವ ಅಭೇದವಾದಿಗಳು ತಾವಿರುವ ಸ್ಥಲದಲ್ಲಿಯೇ ಬ್ರಹ್ಮವಿರುವುದನ್ನು ಕಾಣದೆ, ಪರ್ವತ - ಸಮುದ್ರ - ಪುಣ್ಯನದಿ-ಕ್ಷೇತ್ರದೈವತವೆಂದು ಹೇಳಿಕೊಳ್ಳುತ್ತೆ, ಪ್ರತಿಯೊಂದು ಸ್ಥಲಗಳನ್ನು ಹುಡುಕಿಕೊಂಡು ಏಕೆ ಹೋಗುವರೊ, ಅಯ್ಯೋ ! ಬ್ರಹ್ಮದಲ್ಲಿ ನಿಜವಾದ ನಿಷ್ಠೆಯಿಲ್ಲದ ಆ ವಾಗದ್ವೈತಿ ಗಳ ರೀತಿಯನ್ನು ನೋಡಿದರೆ ಆಶ್ಚರ್ಯವಾಗುವುದು. ೪೮

## ಶಾರ್ದೂಲ ವಿಕ್ರೀಡಿತ ವೃತ್ತಂ

ದ್ವೈತಂ ನೋಳ್ಪೊಡೆ ಬೊಮ್ಮಮಂ ನುಡಿವವಾಗದ್ವೈತಿಗಳ್ಗೆಲ್ಲವುಂ
ಮಾತೊಂದಲ್ಲದೆ ಮಿಕ್ಕವರ್ತನಮದೇಂ ಸದ್ಭಕ್ತನಂತಲ್ಲ ಕೇಳ್
ದ್ವೈತಾದ್ವೈತವಿಹೀನನೇನುಮರಿಯಂ ತಾನೆಂಬಹಮ್ಮಿಲ್ಲಮಾ
ಯಾತೀತಂ ಬರಿಬೊಮ್ಮಗಿಮ್ಮಡೊಡಕಂ ಪೊರ್ದಂ ಶಿವಾವಲ್ಲಭಾ ೪೯

**ಟೀಕೆ :** ಬೊಮ್ಮಮಂ - ಬ್ರಹ್ಮವನ್ನು, ನುಡಿವ - ಹೇಳುವ, ವಾಗದ್ವೈತಿ ಗಳ್ಗೆ - ಒಣವಾಗದ್ವೈತಿಗಳಿಗೆ, ಮಾತೊಂದಲ್ಲದೆ - ನುಡಿಯೊಂದಲ್ಲದೆ, ಮಿಕ್ಕ ವರ್ತನಮದೇಂ - ಮಿಕ್ಕನಡತೆಗಳಾವುದೂ, ನೋಳ್ಪೊಡೆ - ವಿಚಾರಿಸುವೊಡೆ, ಎಲ್ಲವುಂ - ಅವರ ವರ್ತನವೆಲ್ಲವೂ, ದ್ವೈತಂ ಭೇದವೇ, ಸದ್ಭಕ್ತಂ - ಶಿವಭಕ್ತನು, ಅಂತಲ್ಲ - ಒಣವಾಗದ್ವೈತಿಯುಹಾಂಗಲ್ಲ, ಕೇಳ್ - ಅದೆಂತೆಂದೊಡೆ, ದ್ವೈತಾ ದ್ವೈತವಿಹೀನಂ - ಭೇದಾಭೇದಕ್ಕೆ ವಿಲಕ್ಷಣನು, ಏನುಮರಿಯಂ - ಏನನ್ನೂ ಅರಿಯನು, ತಾನೆಂಬಹಮ್ಮಿಲ್ಲ - ತಾನು ಎಂಬಹಂಕಾರವಿಲ್ಲ, ಮಾಯಾತೀತಂ-

ಮಾಯೆಯನ್ನು ದಾಟಿದಾತನು, ಬರಿಬೊಮ್ಮಗಿಮ್ಮದೊಡಕಂ - ವ್ಯರ್ಥವಾದ ಬೊಮ್ಮಗಿಮ್ಮವೆಂಬ ವಿಘ್ನವನ್ನು, ಪೊರ್ದಂ - ಹೊಂದನು. ೪೯

**ಭಾವಾರ್ಥಬೋಧಿನಿ :** ಹೀಗೆ ಬ್ರಹ್ಮನು ಸರ್ವತ್ರ ಪರಿಪೂರ್ಣವಾಗಿರುವು ದೆಂದು ಹೇಳುವ ಒಣವಾಗದ್ವೈತಿಗಳಿಗೆ ಆ ಅದ್ವೈತವು ಮಾತಿನಲ್ಲಿರುವುದಷ್ಟೆ. ವಿಚಾರಮಾಡಿ ನೋಡಿದರೆ ನಡತೆಯಲ್ಲಿಲ್ಲ. ಅವರ ನಡೆಯೆಲ್ಲವೂ ದ್ವೈತವಾಗಿಯೇ ಇರುವುದು. ಶಿವಶರಣನ ನಡೆಯು ಆ ವಾಗದ್ವೈತಿಗಳಂತಿರುವುದಿಲ್ಲ. ಆ ಶರಣನು ದ್ವೈತಾದ್ವೈತವಿಲಕ್ಷಣನಾಗಿಯೂ, ನಾನೇ ಬ್ರಹ್ಮನೆಂಬ ಅಹಂಭಾವವನ್ನು ಅರಿಯು ದವನಾಗಿಯೂ, ನಿರಹಂಭಾವ ಸಂಪನ್ನನಾಗಿಯೂ ಮಾಯೆಯನ್ನು ದಾಟಿದವ-ನಾಗಿಯೂ ಇದ್ದು; ಬಾಯ ಬ್ರಹ್ಮದ ಜಾಲಕ್ಕೆ ಸಿಲ್ಕಿದವನಾಗಿರುವನು. ೪೯

**ಶಾರ್ದೂಲ ವಿಕ್ರೀಡಿತ ವೃತ್ತಂ**

ತನ್ನಿಂದನ್ಯಮನೇನುಮಂ ಬಗೆಯನಾಗಿ ದ್ವೈತಹೀನಂ ಸುಸಂ
ಪನ್ನಂ ತಾನೆನಿಪೊಂದಹಂತೆ ತನಗಿಲ್ಲಂತಾಗಲದ್ವೈತಹೀ
ನಂ ನಿರ್ವಾಣಪದಪ್ರಸಿದ್ಧ ಶರಣಂ ದ್ವಂದ್ವಾತಿಗಂ ವಾಕ್ಕ್ರಿಯಾ
ಭಿನ್ನಾಚಾರವಿಶಿಷ್ಟ ಷಟ್ಸ್ಥಲಪರಬ್ರಹ್ಮಂ ಶಿವಾವಲ್ಲಭಾ ೫೦

**ಟೀಕೆ :** ತನ್ನಿಂದೆ - ಶರಣನು ತನ್ನತ್ತಣಿಂ, ಅನ್ಯಮಂ - ಬೇರೊಂದನ್ನು, ಏನುಮಂ - ಏನನ್ನೂ, ಬಗೆಯನಾಗಿ - ನೆನೆಯನಾಗಿ, ದ್ವೈತಹೀನಂ - ಭೇದವಿಲ್ಲ ದಾತನು, ತಾಂ - ತಾನು, ಸುಸಂಪನ್ನಂ ಎನಿಪ - ಜ್ಞಾನಸಂಪನ್ನನೆನಿಸುವ, ಒಂದ ಹಂತೆ - ಒಂದಹಂಕಾರವು, ತನಗಿಲ್ಲ - ತನಗೆ ಇಲ್ಲವು, ಅಂತಾಗಲ್ - ಹಾಂಗಾಗ ಲಾಗಿ, ಅದ್ವೈತಹೀನಂ - ಅಭೇದವಿಲ್ಲದಾತನು, ನಿರ್ವಾಣಪದ ಪ್ರಸಿದ್ಧಶರಣಂ - ನಿರ್ವಾಣಪದ - ಮೋಕ್ಷಪದದಲ್ಲಿ, ಪ್ರಸಿದ್ಧ - ಪ್ರಖ್ಯಾತನಾದ, ಶರಣಂ - ಶಿವಶರಣನು, ದ್ವಂದ್ವಾತಿಗಂ - ದ್ವಂದ್ವ ದುಃಖಗಳಂ ಮೀರಿದಾತನು, ವಾಕ್ಕ್ರಿಯಾಭಿನ್ನಾಚಾರ ವಿಶಿಷ್ಟ ಷಟ್ಸ್ಥಲ ಪರಬ್ರಹ್ಮಂ - ವಾಕ್ಕ್ರಿಯಾ - ನುಡಿನಡೆಗಳಲ್ಲಿ, ಅಭಿನ್ನ - ಬೇರಿ ಲ್ಲದ, ಆಚಾರ - ಆಚರಣೆಯಿಂದ, ವಿಶಿಷ್ಟ - ಕೂಡಿದಂಥ, ಷಟ್ಸ್ಥಲ - ಷಟ್ಸ್ಥಲ ಮಾರ್ಗದಲ್ಲಿಯ, ಪರಬ್ರಹ್ಮಂ - ಅಧಿಕವಾದ ಬ್ರಹ್ಮಸ್ವರೂಪನು, ಈ ಅರ್ಥದಲ್ಲಿ "ದ್ವೈತಾದ್ವೈತಮಯಂ ಭವತಿ" ಎಂದು ಅಮೃತನಾದೋಪನಿಷತ್ತುಂಟು.

**ಭಾವಾರ್ಥಬೋಧಿನಿ** - ಶಿವಸ್ವರೂಪಿಯಾದ ಶರಣನು ತನಗಿಂತ ಭಿನ್ನವಾದುವೇನೊಂದನ್ನೂ ನೆನೆಯುದಿರುವುದರಿಂದ ದ್ವೈತಭಾವರಹಿತನಾಗಿರುವನು. ತಾನು ಶಿವಸ್ವರೂಪಿಯೆಂಬ ಜ್ಞಾನದೊಂದು ಅಹಂಕಾರವಿಲ್ಲದವನಾದುದರಿಂದ ಅದ್ವೈತವಿಲಕ್ಷಣನಾಗಿರುವನು. ಹೀಗೆ ದ್ವೈತಾದ್ವೈತರಹಿತನಾಗಿರುವುದರಿಂದದ್ವಂದ್ವ ದುಃಖದೂರನಾಗಿ ಮೋಕ್ಷಪದದಲ್ಲಿ ಪ್ರಸಿದ್ಧನಾಗಿರುವ ಶರಣನು ನುಡಿನಡೆಗಳೊಂದಾದ ಆಚರಣೆಯುಳ್ಳ ಷಟ್‌ಸ್ಥಲಮಾರ್ಗದಲ್ಲಿರುವ ಪರಬ್ರಹ್ಮಸ್ವರೂಪನಾಗಿರುವನು. (ಶಿವಶರಣನು ಜೀವರೂ ಜಗತ್ತೂ ಶಿವಸ್ವರೂಪರೆಂದು ತಿಳಿದಿರುವುದರಿಂದ ದ್ವೈತಿಗಳಂತೆ ಭೇದವಾದಿಯಲ್ಲ. ಸೋಹವೆಂಬ ಅಹಂಭಾವರಹಿತನಾಗಿ ನಿರಹಂಭಾವದ ದಾಸೋಹವೆಂಬಾಚರಣೆಯಲ್ಲಿರುವುದರಿಂದ ಬ್ರಹ್ಮಾದ್ವೈತಿಯಲ್ಲವೆಂಬುದೀ ಪದ್ಯದ ತಾತ್ಪರ್ಯ.)

**ಅವತಾರಿಕೆ :** ಶಿವಶರಣಂಗೆ ಅರಿಷಡ್ವರ್ಗಂಗಳಿಲ್ಲೆಂದು ಪೇಳುತ್ತಿರ್ದಪಂ

## ಮತ್ತೇಭವಿಕ್ರೀಡಿತಂ

ಬಡಬೇಕೆಂಬರು ಕಾಮಮುಖ್ಯರಿಪು ಷಡ್ವರ್ಗಂಗಳಂ ಸಾಧುಗ
ಳ್ಬಡನರ್ಬಿಟ್ಟೊಡೆ ಬಲ್ಲಿದರ್ಬಿಡುವರೇ ತದ್ವೈರಮುಂ ವೈರಿಗಳ್
ಬಿಡರೇಗೈದೊಡೆ ಯಾರುಮಂ ಹರಿಸುರಬ್ರಹ್ಮಾದಿದೇವರ್ಕಳಂ
ತೊಡಕಿನ್ನೆಂತಹುದೋ ತ್ವದೀಯ ಕೃತಕಂ ನೋಡಾ ಶಿವಾವಲ್ಲಭಾ ೫೧

**ಟೀಕೆ :** ಸಾಧುಗಳ್ - ಸತ್ಪುರುಷರುಗಳು, ಕಾಮಮುಖ್ಯರಿಪುಷಡ್ವರ್ಗಂಗಳಂ - ಕಾಮ ಮೊದಲಾದ ಅರಿಷಡ್ವರ್ಗಂಗಳನ್ನು, ಬಿಡಬೇಕೆಂಬರು - ಬಿಡಬೇಕೆಂದೆಂಬರು, ಬಡವರ್ - ಬಡವರಾದವರು, ಬಿಟ್ಟೊಡೆ - ಬಿಟ್ಟರೆ, ತದ್ವೈರಮುಂ- ಆ ಹಗೆತನವನ್ನು, ಬಲ್ಲಿದರ್ - ಬಲವಂತರಾದವರು, ಬಿಡುವರೇ - ಬಿಡರು, ವೈರಿಗಳ್ - ಕಾಮಾದಿಶತ್ರುಗಳು, ಹರಿಸುರ ಬ್ರಹ್ಮಾದಿದೇವರ್ಕಳಂ - ವಿಷ್ಣು ದೇವೇಂದ್ರ ಬ್ರಹ್ಮ ಮೊದಲಾದವರನ್ನು, ಆರುಮಂ - ಯಾರನ್ನೂ, ಏಗೈದೊಡೆ - ಏನು ಮಾಡಿದೊಡೆಯೂ, ಬಿಡರು - ವಿಸರ್ಜಿಸರು, ತೊಡಕು - ಈ ಪ್ರತಿಬಂಧವು, ಇನ್ನೆಂತಹುದೋ - ಇನ್ನೆಂಥದ್ದೋ, ತ್ವದೀಯ ಕೃತಕಂ - ನೀನಿಕ್ಕಿದ ಕಪಟವು, ನೋಡಾ - ನೋಡು.

**ಭಾವಾರ್ಥಬೋಧಿನಿ** - ಸತ್ಪುರುಷರಾದವರು, ಕಾಮ ಮೊದಲಾದ ಅರಿ ಷಡ್ವರ್ಗಗಳನ್ನು ಬಿಟ್ಟುಬಿಡಬೇಕೆನ್ನುವರು. ಆದರೆ ಬಡವರಾದ ಆ ಸಾಧುಜನರು ಅವುಗಳನ್ನು ಬಿಟ್ಟರೂ ಬಿಡಬಹುದು. ಅವರೊಡನಿರುವ ವೈರವನ್ನು ಬಲವಂತ ರಾದ ಕಾಮಾದಿಶತ್ರುಗಳು ಬಿಡುವುದುಂಟೇ ? ಆ ಕಾಮಾದಿಶತ್ರುವರ್ಗವು ವಿಷ್ಣು ಬ್ರಹ್ಮಾದಿ ದೇವತೆಗಳಾರನ್ನೂ ಏನು ಮಾಡಿದರೂ ಬಿಟ್ಟಿಲ್ಲವಲ್ಲವೇ ? ಎಲೈ ಪರಶಿವನೆ, ಈ ಷಡ್ರಿಪುಗಳ ತೊಡಕು ಎಷ್ಟು ಬಲವತ್ತರವಾಗಿರುವದಲ್ಲಾ ! ಇದು ನೀನಿಕ್ಕಿದ ಕಪಟವು ನೋಡು. ೫೧

**ಮತ್ತೇಭವಿಕ್ರೀಡಿತಂ**

ಅರಿಷಡ್ವರ್ಗಮನಕ್ಕಟಾ ಬಿಡದೆ ಕೂಡಿರ್ದಲ್ಲಿ ತಾನಪ್ಪ ತ
ತ್ಪುರುಷಾರ್ಥಂ ಕಡೆಗೇನು ಮೇನುವಹುದಿಲ್ಲಂತಾಗಿ ಬಿಟ್ಟಿರ್ಪೆವೆಂ
ಬರುಧೀಮಂತರು ತದ್ಗ್ರಹಂಗಳವು ತಾವೇ ತಮ್ಮ ಸಾಮರ್ಥ್ಯ ನಿ
ರ್ಭರದಿಂದಂ ಪಿಡಿದಿರ್ಪು ವಿನ್ನವರದೇಗೈವರ್ಶಿವಾವಲ್ಲಭಾ ೫೨

**ಟೀಕೆ :** ಧೀಮಂತರು - ಬುದ್ಧಿವಂತರು, ಅರಿಷಡ್ವರ್ಗಮಂ - ಕಾಮಾದಿ ಷಡ್ವರ್ಗಂಗಳನ್ನು, ಬಿಡದೆ - ವಿಸರ್ಜಿಸದೆ, ಕೂಡಿರ್ದಲ್ಲಿ - ಕೂಡಿಕೊಂಡಿರ್ದಲ್ಲಿ ತಾನಪ್ಪ - ತಾನಾಗುವ, ತತ್ಪುರುಷಾರ್ಥಂ - ಆ ಪುರುಷಾರ್ಥವು, ಕಡೆಗೇನು - ಕಡೆ ಗೇನುಂಟು, ಏನುವಹುದು - ಏನು ಪ್ರಯೋಜನವಾಗುವುದಕ್ಕೆ, ಇಲ್ಲ - ನಾಸ್ತಿ, ಅಕಟಾ - ಅಯ್ಯೋ, ಅಂತಾಗಿ - ಅದುಕಾರಣವಾಗಿ, ಬಿಟ್ಟಿರ್ಪೆವೆಂಬರು - ವಿಸರ್ಜಿ ಸಿರ್ಪೆವೆಂಬರು, ತದ್ಗ್ರಹಂಗಳವು - ಕಾಮಾದಿಪಿಶಾಚಂಗಳವು, ತಾವೇ, ತಮ್ಮ ಸಾಮರ್ಥ್ಯನಿರ್ಭರದಿಂದಂ - ತಾವು ತಮ್ಮ ಬಲ್ಮೆಯಪೆರ್ಚುಗೆಯಿಂದೆ, ಪಿಡಿದಿರ್ಪು ವು - ಹಿಡಿದುಕೊಂಡಿರ್ಪವು, ಇನ್ನು - ಇಷ್ಟರ ಮೇಲೆ, ಅವರ್ - ಆ ಸಾಧುಗಳು, ಏಗೈವರ್ - ಏನು ಮಾಡುವರು.

**ಭಾವಾರ್ಥಬೋಧಿನಿ :** ಕಾಮಾದಿಶತ್ರುಷಡ್ವರ್ಗವನ್ನು ಕೂಡಿಕೊಂಡಿದ್ದರೆ ಕಡೆಗಾಗುವ ಪುರುಷಾರ್ಥವೇನಿರುವುದು ? ಅದರಿಂದಾವ ಪ್ರಯೋಜನವೂ ಇಲ್ಲ. ಆದುದರಿಂದ ಆ ಕಾಮಾದಿಗಳನ್ನು ಬಿಟ್ಟಿರುವೆವೆಂದು ಬುದ್ಧಿವಂತರು ಹೇಳಿರುವರು.

ಆದರೆ ಆ ಕಾಮಾದಿ ಪಿಶಾಚಿಗಳು ತಾವಾಗಿಯೇ ಅಧಿಕಸಾಮರ್ಥ್ಯದಿಂದ ಅವರನ್ನು ಹಿಡಿದುಕೊಂಡಿರುವಾಗ ಆ ಸಾಧುಜೀವಿಗಳೇನು ಮಾಡುವರು ? ೫೨

## ಶಾರ್ದೂಲ ವಿಕ್ರೀಡಿತ ವೃತ್ತಂ

ಕಾಮಕ್ರೋಧ ವಿಲೋಭ ಮೋಹ ಮದ ಮಾತ್ಸರ್ಯಂಗಳಂ ಬಿಟ್ಟು ಸ
ದ್ಯೋಮುಕ್ತಿಸ್ಥಿತಿಯಲ್ಲಿ ನಿತ್ಯಸುಖಿಯಾಗಿರ್ಪೊಂದು ನಿರ್ಬಾಧೆ ವಿ
ಶ್ರಾಮಂ ಪೊಲ್ಲ ಮದೊಳ್ಳಿತೇ ಹಗೆಯಕೂಟಂ ಕೂಡಿಕೊಂಡಿರ್ಪೊಡ
ಯ್ಯೋ ಮಾಯಾನಿಯತಪ್ರವೃತ್ತಿ ಗವರೇಗೈವರ್ಶಿವಾವಲ್ಲಭಾ ೫೩

**ಟೀಕೆ :** ಕಾಮಕ್ರೋಧ ವಿಲೋಭ ಮೋಹಮದ ಮಾತ್ಸರ್ಯಂಗಳಂ - ಕಾಮ ಮೊದಲಾದ ಅರಿಷಡ್ವರ್ಗಂಗಳನ್ನು, ಬಿಟ್ಟು - ಸಾಧುಗಳಾದವರು ವಿಸರ್ಜಿಸಿ, ಸದ್ಯೋಮುಕ್ತಿಸ್ಥಿತಿಯಲ್ಲಿ - ಜೀವನ್ಮುಕ್ತಿಸ್ಥಿತಿಯಲ್ಲಿ, ನಿತ್ಯ ಸುಖಿಯಾಗಿರ್ಪ - ಸದಾನಂದಸ್ವರೂಪವಾಗಿರ್ಪ, ಒಂದು - ಅದು ತಾನೊಂದು, ನಿರ್ಬಾಧೆ - ಬಾಧೆಯಿಲ್ಲದ, ವಿಶ್ರಾಮಂ - ವಿಶ್ರಾಂತಿಯು, ಹಗೆಯ ಕೂಟಂ ಕೂಡಿಕೊಂಡಿರ್ಪೊಡೆ - ವೈರಿಗಳ ಕೂಟವನ್ನು ಕೂಡಿಕೊಂಡಿರುವೊಡೆ, ಒಳ್ಳಿತೆ - ಒಳ್ಳಿತಲ್ಲ, ಅದುಪೊಲ್ಲಂ - ಅದು ಸಲ್ಲದು, ಮಾಯಾನಿಯತಿಪ್ರವೃತ್ತಿಗೆ - ಮಾಯಾ - ಮಾಯೆಯೆಂಬ, ನಿಯತಿ - ನಿಯಮನ ರೂಪವಾದ ಶಕ್ತಿಯ, ಪ್ರವೃತ್ತಿಗೆ - ಪ್ರವರ್ತನೆಗೆ, ಅವರ್ - ಆ ಸಾಧುಗಳು, ಏಗೈವರ್ - ಏನು ಮಾಡುವರು ? ಅಯ್ಯೋ - ಅಕಟ !

**ಭಾವಾರ್ಥಬೋಧಿನಿ :** ಶಿವಾವಲ್ಲಭನೆ, ಕಾಮಕ್ರೋಧಾದಿಗಳನ್ನು ಬಿಟ್ಟು ಜೀವನ್ಮುಕ್ತಿಯ ನಿತ್ಯಾನಂದದಿಂದ ಕೂಡಿರುವುದೇ ಬಾಧೆಯಿಲ್ಲದ ವಿಶ್ರಾಂತಿಯೆನಿಸುವುದು. ಕಾಮಾದಿಗಳಿಂದ ಕೂಡಿರುವುದೇನೋ ಒಳಿತಲ್ಲ. ಅದು ಸಲ್ಲದು. ಆದರೆ ಮಾಯಾರೂಪವಾದ ನಿಯತಿಶಕ್ತಿಯು ಅವರನ್ನು ಆ ಬಗೆಯಿಂದ ನಡೆಯಿಸುತ್ತಿರುವಾಗ ಅಯೊ ! ಆ ಸಜ್ಜನರೇನು ಮಾಡುವರು ? ೫೩

**ಮತ್ತೇಭವಿಕ್ರೀಡಿತಂ**

ಸುಖಮಂ ಕಾಂಕ್ಷಿಪರ್ಯೆಸೆ ಸರ್ವರು ಮನೇಕಾಯಾಸದಿಂ ಯತ್ನದಿಂ
ದಖಿಲೋಪಾಯದಿನಲ್ಲಿದೂಹಿಪರೆ ನಾನಾಯುಕ್ತಿಯಿಂ ದುಃಖಮಂ
ಸುಖಕೆಂದಿಟ್ಟ ಸೊಡರ್ನಿಮಿರ್ದುಮನೆಯಂ ಸುಟ್ಟಂದದಿಂ ದುಃಖಮಂ
ಸುಖಕಾಮತ್ವವೆ ಮಾಳ್ಪೊಡಂತದು ಭವತ್ಕೃತ್ಯಂ ಶಿವಾವಲ್ಲಭಾ ೫೪

**ಟೀಕೆ :** ಸರ್ವರು - ಎಲ್ಲರೂ, ಅನೇಕಾಯಾಸದಿಂ - ಬಹಳ ಪ್ರಯಾಸದಿಂದ, ಯತ್ನದಿಂದೆ - ಪ್ರಯತ್ನದಿಂದ, ಅಖಿಲೋಪಾಯದಿಂ - ಸಮಸ್ತೋಪಾಯಗಳಿಂದ, ನಾನಾಯುಕ್ತಿಯಿಂ - ಹಲವು ಯುಕ್ತಿಗಳಿಂದ, ಸುಖಮಂ - ಪರಿಣಾಮವನ್ನು, ಕಾಂಕ್ಷಿಪರ್ಯೆಸೆ - ಬಯಸುವರಲ್ಲದೆ, ದುಃಖಮಂ - ಕ್ಲೇಶವನ್ನು ಊಹಿಪರೆ - ನೆನೆಯುವರೆ? ಸುಖಕೆಂದು - ಸುಖಕ್ಕೆಂದು, ಇಟ್ಟ - ಮಡಗಿದ, ಸೊಡರ್ - ದೀಪವು, ನಿಮಿರ್ದು - ಪರ್ಬಿ, ಮನೆಯಂ - ಗೃಹವನ್ನು, ಸುಟ್ಟಂದದಿಂ - ದಹಿಸಿದ ಹಾಂಗೆ, ಸುಖಕಾಮತ್ವವೆ - ಸುಖವಬಯಸುವತನವೇ, ದುಃಖಮಂ - ಕ್ಲೇಶವನ್ನು, ಮಾಳ್ಪೊಡೆ - ಮಾಡುವೊಡೆ, ಅಂತದು - ಅದು ತಾನು, ಭೋ ಶಿವಾವಲ್ಲಭಾ - ಎಲೈ ಪಾರ್ವತೀರಮಣನೇ, ಭವತ್ಕೃತ್ಯಂ - ನಿನ್ನ ಕಪಟವಲಾ.

**ಭಾವಾರ್ಥಬೋಧಿನಿ :** ಸರ್ವರು ಅಧಿಕಾಯಾಸದಿಂದಲೂ ಬಹಳ ಪ್ರಯತ್ನದಿಂದಲೂ, ಅಖಿಲೋಪಾಯಗಳಿಂದಲೂ, ನಾನಾವಿಧವಾದ ಯುಕ್ತಿಯಿಂದಲೂ ಸುಖವನ್ನೇ ಬಯಸುವರಲ್ಲವೆ ? ದುಃಖವನ್ನು ನೆನೆಯುವರೆ ? ಇಲ್ಲ. ಆದರೆ, ಸುಖಕ್ಕಾಗಿ ಇಟ್ಟ ದೀಪವು ಹೊತ್ತಿಕೊಂಡು ಗೃಹವನ್ನೇ ಸುಟ್ಟುಬಿಡುವಂತೆ ಜನರ ಸುಖಕಾಮತ್ವವೇ ದುಃಖವನ್ನುಂಟುಮಾಡುವುದು. ಹೀಗಾಗುವುದು ನಿನ್ನ ಕಪಟವಲ್ಲವೆ ? ಶಿವಾವಲ್ಲಭನೆ. ೫೪

**ಮತ್ತೇಭವಿಕ್ರೀಡಿತಂ**

ಅರಿಯಂ ವ್ಯಾಘ್ರಮನಗ್ನಿಯಂ ಭುಜಗನಂ ದಾರಿದ್ರ್ಯಮಂ ರೋಗಮಂ
ಜರೆಯಂ ಮೃತ್ಯುಮನಕ್ಕಟಾ ಬಿಡದರುಂಟೇ ಲೋಕದೊಳ್ಪಟ್ಟರೀ
ಶ್ವರ ಸೌಖ್ಯಾಸ್ಪದರಾಗಬೇಕೆನುತೆ ಯತ್ನಂಗೈವರ್ಯೆಸಲ್ಲದಾ
ದರದಿಂ ಕೂಡಿರಬೇಕೆನುತ್ತಿಹರೆ ಧೀಮಂತರ್ ಶಿವಾವಲ್ಲಭಾ ೫೫

**ಟೀಕೆ :** ಲೋಕದೊಳ್ - ಜಗತ್ತಿನಲ್ಲಿ, ಅರಿಯುಂ - ಹಗೆಯುನ್ನು, ವ್ಯಾಘ್ರವುಂ - ಹುಲಿಯುನ್ನು, ಅಗ್ನಿಯುಂ - ಬೆಂಕಿಯುನ್ನು, ಭುಜಗನಂ - ಸರ್ಪವನ್ನು, ದಾರಿದ್ರ್ಯವುಂ - ದರಿದ್ರತ್ವವನ್ನು, ರೋಗವುಂ - ವ್ಯಾಧಿಯುನ್ನು, ಜರೆಯುಂ - ಮುಪ್ಪನ್ನು, ಮೃತ್ಯುವುಂ - ಮರಣವನ್ನು, ಬಿಡದರ್ - ಬಿಡದವರು, ಉಂಟೆ? ಬಿಟ್ಟರ್ - ಬಿಟ್ಟವರೇ, ಧೀಮಂತರ್ - ಬುದ್ಧಿವಂತರು, ಈಶ್ವರಸೌಖ್ಯಾಸ್ಪದರ್ - ಈಶ್ವರ - ಪರಮೇಶ್ವರನಲ್ಲಿಯು, ಸೌಖ್ಯ-ಸುಖಕ್ಕೆ, ಆಸ್ಪದರ್-ಸ್ಥಾನರು, ಆಗಬೇಕೆನುತೆ - ಆಗಬೇಕೆನುತ್ತ, ಯತ್ನಂಗೈವರ್ಯೆಸಲ್ಲದೆ - ಪ್ರಯತ್ನಂ ಗೈವರೆಸಲ್ಲದ, ಆದರದಿಂ - ಪ್ರೀತಿಯಿಂದ, ಕೂಡಿರಬೇಕೆನುತ್ತಿಹರೆ - ಆ ಕಾಮಾದಿಗಳಲ್ಲಿ ಕೂಡಿರಬೇಕೆನುತ್ತಿಹರೆ? ಇರರು.

**ಭಾವಾರ್ಥಬೋಧಿನಿ :** ಪರಶಿವನೆ, ಜಗತ್ತಿನಲ್ಲಿ ಹಗೆಯನ್ನೂ, ಹುಲಿಯನ್ನೂ, ಬೆಂಕಿಯನ್ನೂ, ಹಾವನ್ನೂ, ಬಡತನವನ್ನೂ, ರೋಗವನ್ನೂ, ಮುಪ್ಪನ್ನೂ, ಮರಣವನ್ನೂ ಬಿಡದಿರುವವರುಂಟೆ? ಅವೆಲ್ಲವುಗಳನ್ನು ಬಿಟ್ಟಿರುವವರೇ ಬುದ್ಧಿವಂತರು, ಹಾಗೆ ಬಿಟ್ಟಿರುವವರು ಶಿವಸುಖಾನುಭವಿಗಳಾಗಿರಲು ಯತ್ನಿಸುವರಲ್ಲದೆ, ಆ ಕಾಮಾದಿಗಳೊಡನೆ ಪ್ರೀತಿಯಿಂದ ಕೂಡಿರಬೇಕೆಂದು ಅಪೇಕ್ಷಿಸುವರೇನು? ಇಲ್ಲ. ೫೫

## ಮತ್ತೇಭವಿಕ್ರೀಡಿತಂ

ಬಿಡುವಾಗೇಂ ಪಿಡಿದಿರ್ದರುಂಟೆ ರಿಪುವಂ ಕಾಮಾದಿಯುಂ ಮುನ್ನವಂ
ಪಿಡಿವಾಗೇನದು ಮುಕ್ತಿಸೌಖ್ಯಕರಮೇ ವ್ಯರ್ಥಕ್ಕೆ ಮಾತಾಡುವ
ರ್ಬಿಡಬೇಕೆನ್ನುತೆ ತಾವೆ ಬಲ್ಪಿಡಿವವೋಲ್ ಮಾಳ್ಪಾಭವನ್ಮಾಯೆಯುಂ
ಬಿಡಲೇಂ ಮಾತಿನ ಮಾಲೆಯುಂತಹುದೆ ದುರ್ಲಂಘ್ಯಂ ಶಿವಾವಲ್ಲಭಾ ೫೬

**ಟೀಕೆ :** ಕಾಮಾದಿಯುಂ - ಕಾಮಾದಿಗಳಾದ, ರಿಪುವಂ - ಅರಿಷಡ್ವರ್ಗಗಳನ್ನು, ಬಿಡುವಾಗ - ವಿಸರ್ಜಿಸುವಾಗ, ಪಿಡಿದಿರ್ದರುಂಟೇಂ - ಪಿಡಿದುಕೊಂಡಿರ್ದವರುಂಟೇನು? ಆವಂ - ಆ ಕಾಮಾದಿಗಳನ್ನು, ಮುನ್ನೆ - ಮೊದಲು, ಪಿಡಿವಾಗ - ಗ್ರಹಿಸುವಾಗ, ಅದು - ತಾನು, ಮುಕ್ತಿಸೌಖ್ಯಕರಮೇ - ಮೋಕ್ಷಸುಖವ ಮಾಡುವದೇನು? ಅಲ್ಲ. ವ್ಯರ್ಥಕ್ಕೆ - ಬರಿದೆ, ಬಿಡಬೇಕೆನ್ನುತೆ - ಬಿಡಬೇಕೆಂದು,

ಮಾತಾಡುವರ್ - ಮಾತನುಡಿವರು, ತಾವೆ - ಆ ಕಾಮಾದಿಗಳು ತಾವೇ, ಬಲ್ಪಿಡಿದ ಪೋಲ್ - ಬಲ್ಲಿತಾಗಿ ಪಿಡಿವ ಹಾಂಗೆ, ಮಾಳ್ಪ - ಮಾಡುವಂಥ, ಭವನ್ಮಾಯೆಯಂ- ನಿನ್ನ ಮಾಯೆಯನು, ಬಿಡಲ್ - ಬಿಡಲು, ಮಾತಿನವಾಲೆಯಂತಹುದೆ - ಮಾತಿನ ಮಾಲೆಯುಹಾಗಹುದೆಯೇನು? ದುರ್ಲಂಘ್ಯಂ - ದಾಂಟಲಶಕ್ಯವು.

**ಭಾವಾರ್ಥ ಬೋಧಿನಿ :** ಪರಶಿವನೆ, ಕಾಮಾದಿರಿಪುಗಳು ಬಿಟ್ಟು ಹೋಗು ವಾಗ ಅವರನ್ನು ಬಿಡದಂತೆ ಹಿಡಿದುಕೊಂಡವರು ಯಾರಾದರೂ ಇರುವರೇನು? ಆ ಕಾಮಾದಿಗಳು ಮೊದಲು ತಮ್ಮನ್ನು ಕೂಡಿಕೊಂಡಾಗ ಅವುಗಳ ಕೂಟವು ಮೋಕ್ಷಸುಖವನ್ನುಂಟುಮಾಡುವುದೇನು? ಇಲ್ಲ. ಬರಿದೆ ಅವುಗಳನ್ನು ಬಿಡ ಬೇಕೆಂದು ಮಾತನಾಡುವರು. ಆ ಕಾಮಾದಿಗಳು ತಾವಾಗಿಯೇ ಜನರನ್ನು ಬಲ ವಾಗಿ ಹಿಡಿದುಕೊಳ್ಳುವಂತೆ ಮಾಡುವ ನಿನ್ನ ಮಾಯೆಯನ್ನು ಬಿಡಿಸಿಕೊಳ್ಳುವುದು ಬರಿಯ ಮಾತಿನ ಮಾಲೆಯಿಂದಾದೀತೇ? ಆ ಮಾಯೆಯನ್ನು ದಾಟುವದು ಸುಲಭವಲ್ಲ. ೫೬

**ಮತ್ತೇಭವಿಕ್ರೀಡಿತಂ**

ಘಡಕಾಮಾದಿಗಳೆಂಬಿವಿಲ್ಲವರ ಸಂಗಂ ಮುನ್ನೆತಾ ನಿಲ್ಲವಂ
ಬಿಡಬೇಕೆಂಬುದದೇನು ಮಿಲ್ಲವರೊಳಿರ್ಪಾಸಕ್ತಿಯಿಪ್ಪಿಲ್ಲವ
ಕ್ಕೆಡೆಯಾಗಿರ್ಪಭಿಮಾನವೃತ್ತಿ ಸಿನೆಯಿಲ್ಲೇನೆಂಬೆನಾಶ್ಚರ್ಯಮಂ
ಮೃಡನಿನ್ನುದ್ಧತಭಕ್ತನುನ್ನತಿಕೆಯಂ ನೋಡಾ ಶಿವಾವಲ್ಲಭಾ ೫೭

**ಟೀಕೆ :** ಮೃಡ - ಭಕ್ತರ್ಗೆ ಸುಖವಂ ಮಾಡುವ, ಭೋ ಶಿವಾವಲ್ಲಭಾ - ಎಲೈ ಪಾರ್ವತೀ ರಮಣನೇ, ಕಾಮಾದಿಗಳೆಂಬಿವು - ಕಾಮ ಮೊದಲಾದ ಅರಿಷಡ್ವ ರ್ಗಂಗಳು, ಇಲ್ಲ - ನಿನ್ನ ಭಕ್ತಂಗೆ ಇಲ್ಲ, ಅವರ - ಆ ಕಾಮಾದಿಗಳ, ಸಂಗಂ - ಸಂಪರ್ಕವು, ಮುನ್ನೆ - ಮೊದಲೇ, ತಾಂ ಇಲ್ಲ - ನಷ್ಟವಾಗಿ ಹೋದುವು, ಆವಂ - ಆ ಕಾಮಾದಿಗಳನು, ಬಿಡಬೇಕೆಂಬುದು - ವಿಸರ್ಜಿಸಬೇಕೆಂಬುದು, ಅದೇನುಮಿಲ್ಲ- ಅದರ ಸುದ್ದಿಯೇನೂ ಇಲ್ಲ, ಅವರೊಳಿರ್ಪ - ಆ ಕಾಮಾದಿಗಳಲ್ಲಿರ್ಪ, ಆಸಕ್ತಿ - ಬಯಕೆ, ಇಪ್ಪಿಲ್ಲ - ಅಣುಮಾತ್ರವೂ ಇಲ್ಲ, ಅವಕ್ಕೆ - ಆ ಕಾಮಾದಿಗಳಿಗೆ, ಎಡೆ ಯಾಗಿರ್ಪ - ವಶವಾಗಿರ್ಪ, ಅಭಿಮಾನವೃತ್ತಿ - ಅಭಿಮಾನಪ್ರವರ್ತನೆಯು, ಸಿನೆ

ಯಿಲ್ಲ - ಏನೂಯಿಲ್ಲ, ಆಶ್ಚರ್ಯಮಂ - ಚೋದ್ಯವನು, ಏನೆಂಬೆಂ - ಏನೆಂದು ಹೇಳುವೆನು. ಘಡ - ಭಲರೆ, ನಿನ್ನುದ್ಧತ ಭಕ್ತನ - ನಿನ್ನ ಸಂಬಂಧವಾಗಿ ಸಲುಗೆಯುಳ್ಳ ಭಕ್ತನ, ಉನ್ನತಿಕೆಯಂ - ಪೆರ್ಚುಗೆಯನ್ನು, ನೋಡಾ - ವಿಚಾರಿಸಿ ನೋಡು.

**ಭಾವಾರ್ಥಬೋಧಿನಿ** – ಭಕ್ತರಿಗೆ ಸುಖವನ್ನುಂಟುಮಾಡುವ ಪಾರ್ವತೀರಮಣನೆ, ಕಾಮಾದಿಗಳು ನಿನ್ನ ಭಕ್ತನಿಗಿರುವದಿಲ್ಲ. ಆ ಕಾಮಾದಿಗಳ ಸಂಗವು ತದ್ಭಕ್ತನಿಗೆ ಮೊದಲೇ ನಷ್ಟವಾಗಿ ಹೋಗಿರುವದು. ಆ ಕಾಮಾದಿಗಳನ್ನು ಬಿಡಬೇಕೆಂಬುದೂ ಆತನಿಗಿರುವುದಿಲ್ಲ. ಮತ್ತು ಆತನಿಗೆ ತತ್ಕಾಮಾದಿಗಳಿಗೆ ವಶವಾಗಿರುವ ಅಭಿಮಾನವೃತ್ತಿಯು ಕಿಂಚಿತ್ತಾದರೂ ಇರುವುದಿಲ್ಲ. ಈ ಆಶ್ಚರ್ಯವನ್ನು ಏನು ಹೇಳಲಿ ! ಭಲಾ. ನಿನ್ನ ಸಂಬಂಧದ ಸಲುಗೆಯುಳ್ಳ ಭಕ್ತನ ಉನ್ನತಿಯನ್ನು ನೋಡು, ೫೭.

**ಅವತಾರಿಕೆ** : ಇಂತು ಅರಿಷಡ್ವರ್ಗಂಗಳಲ್ಲಿ ರಾಗದ್ವೇಷವೇ ಮುಖ್ಯವಾದ ಕಾರಣ ಆ ರಾಗದ್ವೇಷಗಳೆರಡೂ ಶರಣಂಗುಂಟಾಗಿಯೂ ಇಲ್ಲವೆಂದು ಪೇಳುತ್ತಿರ್ದಪಂ.

**ಮತ್ತೇಭವಿಕ್ರೀಡಿತಂ**

ಅನುರಕ್ತಂ ವಿಷಯಂಗಳೊಳ್ನೆರೆ ವಿರಕ್ತಂ ನೋಡನೋಡಲ್ಮಹಾ
ಘನಲಿಂಗೈಕ್ಯ ಸುಖ ಪ್ರಸಾದಪರಿಪೂರ್ಣಾಂತರ್ಬಹಿಶ್ಶುದ್ಧವಾ
ಸನೆಯಿಂ ರಾಗವಿರಾಗಮೆಂಬೆರಡುಮೆಯ್ಯಂ ಮೀರಿ ನಿರ್ಲೇಪನೆಂ
ದೆನಿಪಂ ದ್ವಂದ್ವ ವಿಮುಕ್ತನೂರ್ಜಿತಯಶಂ ಭಕ್ತಂ ಶಿವಾವಲ್ಲಭಾ ೫೮

**ಟೀಕೆ** : ದ್ವಂದ್ವವಿಮುಕ್ತಂ - ದ್ವಂದ್ವದುಃಖಂಗಳಿಂ ಬಿಡಲ್ಪಟ್ಟ, ಊರ್ಜಿತಯಶಂ - ಉನ್ನತ ಕೀರ್ತಿಯನುಳ್ಳ, ಭಕ್ತಂ - ಶಿವಶರಣನು, ವಿಷಯಂಗಳೊಳ್ - ಶಬ್ದಾದಿ ವಿಷಯಂಗಳಲ್ಲಿ, ಅನುರಕ್ತಂ - ಪ್ರೀತಿಯುಳ್ಳವನಾಗಿರ್ಪನು, ನೋಡನೋಡರ್ - ವಿಚಾರಿಸಿ ನೋಡಲಾಗಿ, ನೆರೆ - ಚೆನ್ನಾಗಿ, ವಿರಕ್ತಂ - ಪ್ರೀತಿಯಿಲ್ಲದವನಾಗಿರ್ಪನು, ಮಹಾ......ವಾಸನೆಯಿಂ - ಮಹಾಘನಲಿಂಗೈಕ್ಯ - ದೊಡ್ಡಿತ್ತಾದ

ಮಹಾಘನಲಿಂಗಸಾಮರಸ್ಯದಲ್ಲಿಯು, ಸುಖ - ಆನಂದದಿಂದಲಾದ, ಪ್ರಸಾದ - ಪ್ರಸನ್ನತೆಯಿಂದ, ಪರಿಪೂರ್ಣ - ತುಂಬಲ್ಪಟ್ಟ, ಅಂತರ್ಬಹಿಃ-ಅಂತರಂಗಬಹಿರಂಗ ದಲ್ಲಿಯೂ, ಶುದ್ಧ - ನಿರ್ಮಲವಾದ, ವಾಸನೆಯಿಂ - ಸಂಸ್ಕಾರದಿಂದ, ರಾಗವಿರಾಗ ಮೆಂಬ - ರಾಗದ್ವೇಷವೆಂಬ, ಎರಡುಮೆಯ್ಯಂ - ಎರಡು ಪಕ್ಷವನ್ನು, ಮೀರಿ - ದಾಂಟಿ, ನಿರ್ಲೇಪಂ ಎಂದೆನಿಪಂ - ನಿರ್ಲೇಪನೆಂದೆನಿಸುವನು.

**ಭಾವಾರ್ಥಬೋಧಿನಿ :** ದ್ವಂದ್ವಮಯದುಃಖರಹಿತನೂ ಉನ್ನತ ಕೀರ್ತಿ ಯುಳ್ಳವನೂ ಆದ ಶಿವಶರಣನು ಶಬ್ದಾದಿ ವಿಷಯಂಗಳಲ್ಲಿ ಪ್ರೀತಿಯುಳ್ಳವನಾಗಿದ್ದರೂ ವಿಚಾರಿಸಿ ನೋಡಲಾಗಿ ಅವುಗಳಲ್ಲಿ ಪ್ರೀತಿಯಿಲ್ಲದವನಾಗಿರ್ಪನು. ಏಕೆಂದರೆ, ಮಹಾಲಿಂಗಾಂಗಸಾಮರಸ್ಯಸುಖಪ್ರಸಾದದಿಂದ ತುಂಬಿದ ಅಂತರಂಗ ಬಹಿರಂಗಗಳ ಶುದ್ಧವಾದ ಸಂಸ್ಕಾರವಿಶೇಷದಿಂದ ಆತನು ರಾಗವಿರಾಗಗಳೆಂಬೆರಡು ಪಕ್ಷಗಳನ್ನು ಮೀರಿ, ನಿರ್ಲೇಪನೆಂದೆನಿಸಿರುವನು. (ಶಿವಶರಣನಿಗೆ ಬೇಕುಬೇಡೆಂಬುದಿಲ್ಲವೆಂದು ತಾತ್ಪರ್ಯ). ೫೮

**ಶಾರ್ದೂಲ ವಿಕ್ರೀಡಿತ ವೃತ್ತಂ**

ತ್ಯಾಗಸ್ವೀಕರಣದ್ವಯಂ ಸಕಲಧರ್ಮಾಧರ್ಮ ಕರ್ಮಂಗಳೊ
ಳ್ಭೋಗಾಭೋಗವಿರಾಗರಾಗ ಬಹಿರಂತರ್ಲೇಪವೆಂದಂತದಂ
ನೀಗಿದ್ವಂದ್ವ ವಿಮುಕ್ತನಾಗಿ ನಿಜಲೀಲಾಲೋಲಶೀಲಂ ಮಹಾ
ಯೋಗಕ್ಕಾಭರಣಂ ಶಿವೈಕ್ಯಶರಣಂ ತೋರ್ಪಂ ಶಿವಾವಲ್ಲಭಾ ೫೯

**ಟೀಕೆ :** ಸಕಲಧರ್ಮಾಧರ್ಮ ಕರ್ಮಂಗಳೊಳ್ - ಸರ್ವಪುಣ್ಯಪಾಪ ವ್ಯಾಪಾರಂಗಳಲ್ಲಿ, ತ್ಯಾಗಸ್ವೀಕರಣದ್ವಯಂ - ತ್ಯಾಗ - ಬಿಡುವುದು, ಸ್ವೀಕರಣ - ಹಿಡಿಯುವುದು, ದ್ವಯಂ - ಈ ಎರಡು, ಭೋಗಾಭೋಗವಿರಾಗರಾಗಬಹಿರಂತ ರ್ಲೇಪವೆಂದು - ಭೋಗ - ಭೋಗದಲ್ಲಿಯೂ, ಅಭೋಗ - ಭೋಗಿಸದಿಹುದರಲ್ಲಿ ಯೂ, ವಿರಾಗ - ವೈರಾಗ್ಯದಲ್ಲಿಯೂ, ರಾಗ - ಬಯಕೆಯಲ್ಲಿಯೂ, ಬಹಿರಂತರ್ಲೇ ಪವೆಂದು - ಅಂತರಂಗಬಹಿರಂಗಗಳಲ್ಲಿ ಲೇಪಿಸಿಕೊಂಡಿರ್ಪುದೆಂದು, ಅಂತದಂ - ಆ ತ್ಯಾಗಸ್ವೀಕರಣವನು, ನೀಗಿ - ಕಳೆದು, ದ್ವಂದ್ವವಿಮುಕ್ತನಾಗಿ-ದ್ವಂದ್ವದುಃಖಂ ಗಳಿಂಬಿಡಲ್ಪಟ್ಟಾತನಾಗಿ, ನಿಜಲೀಲಾಲೋಲಶೀಲಂ - ನಿಜ - ತನ್ನ ಸಂಬಂಧವಾದ,

ಲೀಲಾ - ವಿಲಾಸದಲ್ಲಿ, ಲೋಲ - ಎರಕವನುಳ್ಳ, ಶೀಲಂ - ಚರಿತವನುಳ್ಳ, ಮಹಾಯೋಗಕ್ಕೆ - ಅಧಿಕತರವಾದ ಶಿವಯೋಗಕ್ಕೆ, ಆಭರಣಂ - ಅಲಂಕಾರವಾದ, ಶಿವೈಕ್ಯಶರಣಂ - ಶಿವಸಾಮರಸ್ಯವುಳ್ಳ ಶರಣನು, ತೋರ್ಪಂ - ಕಾಣಿಸುವನು. ೫೯

**ಭಾವಾರ್ಥಬೋಧಿನಿ :** ಸಕಲ ಪುಣ್ಯಪಾಪವ್ಯಾಪಾರಂಗಳಲ್ಲಿ ಬಿಡುವುದೂ ಹಿಡಿಯುವುದೂ ಎಂಬೀ ದ್ವಂದ್ವವು, ಭೋಗದಲ್ಲಿಯೂ, ಭೋಗಿಸದಿರುವಲ್ಲಿಯೂ ವೈರಾಗ್ಯದಲ್ಲಿಯೂ, ಅನುರಾಗದಲ್ಲಿಯೂ, ಬಿಡದಂತೆ ಅಂತರಂಗ ಬಹಿರಂಗಗಳಲ್ಲಿ ಲೇಪಿಸಿಕೊಂಡಿರುವುದು. ಆದುದರಿಂದ ಆ ತ್ಯಾಗಸ್ವೀಕಾರಗಳೆಂಬೆರಡರ ಸಂಬಂಧವನ್ನು ತ್ಯಜಿಸಿ, ಶಿವಸಾಮರಸ್ಯವುಳ್ಳ ಶರಣನು ದ್ವಂದ್ವದುಃಖದೂರನಾಗಿಯೂ ಆತ್ಮಲೀಲಾಸಕ್ತಶೀಲನಾಗಿಯೂ ಶಿವಯೋಗಭೂಷಣನಾಗಿಯೂ ರಾಜಿಸುವನು. ೫೯



**ಅವತಾರಿಕೆ :** ಶರಣನೆಂತಿರ್ದೊಡೆಯೂ ಲಿಂಗಕ್ಕೆ ಪ್ರೀತಿಕರನೆಂದು ಪೇಳುತ್ತಿರ್ಪಂ—

**ಮತ್ತೇಭವಿಕ್ರೀಡಿತಂ**

ಪತಿಗಾತ್ಮಾರ್ಪಣಮಂ ಸಮಸ್ತವಿಧದಿಂ ಮಾಡಿ ಸ್ವಭರ್ತೃಪ್ರಸ
ನ್ನತೆಯಂ ತಾಂ ಪಡೆದಿರ್ದ್ದ ತತ್ಸತಿಯ ಕಾಮಕ್ರೋಧಲೋಭಾದಿಸಂ
ಗತಿಯಾತಂಗೆ ಸದಾ ಪ್ರಮೋದಕರಮಾಗಿರ್ಪಂತೆ ಸದ್ಭಕ್ತನ
ಸ್ಥಿತಿಲಿಂಗಕ್ಕೆ ಮಹಾಪ್ರಿಯಂ ಹಲವು ಮಾತಿನ್ನೇಂ ಶಿವಾವಲ್ಲಭಾ ೬೦

**ಟೀಕೆ :** ಪತಿಗೆ - ಪುರುಷಂಗೆ, ಸಮಸ್ತವಿಧದಿಂ – ನಾನಾಪ್ರಕಾರದಿಂದ, ಆತ್ಮಾರ್ಪಣಮಂ – ತನ್ನ ಶರೀರವನರ್ಪಿಸುವದನು, ಮಾಡಿ, ಸ್ವಭರ್ತೃಪ್ರಸನ್ನತೆಯಿಂ - ತನ್ನ ಗಂಡನ ಲಾಲನೆಯನು, ತಾಂ ಪಡೆದಿರ್ದ್ದ - ತಾನಾರ್ಜಿಸಿಕೊಂಡಿರ್ದ, ತತ್ಸತಿಯ - ಆಸ್ತ್ರೀಯ, ಕಾಮಕ್ರೋಧಲೋಭಾದಿಸಂಗತಿ - ಕಾಮಕ್ರೋಧಲೋಭ ಮೊದಲಾದವರ ಸಂಪರ್ಕವು, ಆತಂಗೆ - ಆ ಪುರುಷಂಗೆ, ಸದಾ- ಆವಾಗಲೂ, ಪ್ರಮೋದಕರಮಾಗಿರ್ಪಂತೆ - ಸಂತೋಷವ ಮಾಡುವದಾಗಿರ್ಪಂತೆ, ಸದ್ಭಕ್ತನ - ಶರಣನ, ಸ್ಥಿತಿ - ನಿಲುಕಡೆಯು, ಲಿಂಗಕ್ಕೆ - ಶಿವಲಿಂಗಕ್ಕೆ ಮಹಾ

ಪ್ರಿಯಂ - ಅತ್ಯಂತ ಪ್ರೀತಿಯನುಳ್ಳುದಾಗಿರ್ಪುದು, ಇನ್ನು ಹಲವು ಮಾತೇಂ - ಹಲವು ನುಡಿಯುವುದರಿಂದೇನು ಪ್ರಯೋಜನವು ? ೬೦

**ಭಾವಾರ್ಥಬೋಧಿನಿ :** ಸಕಲವಿಧದಿಂದಲೂ ತನ್ನನ್ನು ತನ್ನ ಪತಿಗೆ ಅರ್ಪಣ ಮಾಡಿಕೊಂಡು, ಆ ಪತಿಯ ಪ್ರಸನ್ನತೆಯನ್ನು ಪಡೆದುಕೊಂಡಿರುವ ಸತಿಯ ಕಾಮ ಕ್ರೋಧಾದಿಗಳ ವ್ಯಾಪಾರವು ತತ್ಪತಿಗೆ ಯಾವಾಗಲೂ ಸಂತೋಷಪ್ರದವಾಗಿರು ವಂತೆ, ಶಿವಶರಣನ ಸ್ಥಿತಿಯು ಯಾವ ಬಗೆಯಿಂದಿದ್ದರೂ ಆ ಶರಣನ ಪತಿಯಾದ ಶಿವಲಿಂಗಕ್ಕೆ ಅತ್ಯಂತ ಪ್ರಿಯವಾಗಿರುವುದು. ಇನ್ನು ಹಲವು ಮಾತಿನಿಂದೇನು ಪ್ರಯೋಜನವು ? ೬೦

**ಶಾರ್ದೂಲ ವಿಕ್ರೀಡಿತ ವೃತ್ತಂ**

ಆಲಸ್ಯಂ ಸಕಲಕ್ರಿಯಾ ಕರಣದೋಳ್ನೈಷ್ಠುರ್ಯಮಾತ್ಮೋಕ್ತಿಯೊ
ಳ್ಕಾಲುಷ್ಯಂ ಮನದೊಳ್ಪ್ರಿಯಾಂಗನೆಗಲಂಕಾರಂ ಪತಿಪ್ರೀತಿದಂ
ಲೀಲಾಸ್ವೀಕೃತದೇಹ ಧರ್ಮಚರಿತಂ ಸರ್ವಂ ಶಿವೈಕ್ಯಕ್ರಿಯಾ
ಶೀಲಂಗಾಭರಣಂ ಶಿವಪ್ರಿಯಕರಂ ಸತ್ಯಂ ಶಿವಾವಲ್ಲಭಾ ೬೧

**ಟೀಕೆ :** ಪ್ರಿಯಾಂಗನೆಗೆ - ಪ್ರಿಯಳಾದ ಸ್ತ್ರೀಗೆ, ಸಕಲಕ್ರಿಯಾಕರಣದೊಳ್- ಸಮಸ್ತವಾದ ವ್ಯಾಪಾರಂಗಳ ಮಾಡುವಲ್ಲಿ, ಆಲಸ್ಯಂ - ಜಾಡ್ಯವು, ಆತ್ಮೋಕ್ತಿ ಯೊಳ್ - ತನ್ನ ಮಾತಿನಲ್ಲಿ, ನೈಷ್ಠುರ್ಯಂ - ಕಾಠಿಣ್ಯವು, ಮನದೊಳ್ - ಮನಸ್ಸಿ ನಲ್ಲಿ, ಕಾಲುಷ್ಯಂ - ದುಗುಡವು, ಅಲಂಕಾರಂ – ಆಭರಣವಾಗಿರ್ಪುದು, ಪತಿಪ್ರೀತಿದಂ - ಪುರುಷಂಗೆ ಪ್ರೀತಿಯಮಾಡುವಂತಹದು, ( ಹಾಂಗೆ ) ಶಿವೈಕ್ಯ ಕ್ರಿಯಾಶೀಲಂಗೆ - ಲಿಂಗದಲ್ಲಿ ಸಾಮರಸ್ಯವ್ಯಾಪಾರವೇ ಸ್ವಭಾವವಾಗುಳ್ಳ ಶರಣಂಗೆ, ಲೀಲಾಸ್ವೀಕೃತದೇಹಧರ್ಮಚರಿತಂ - ಲೀಲಾ - ವಿಲಾಸದಿಂದ, ಸ್ವೀಕೃತ - ಅಂಗೀ ಕರಿಸಲ್ಪಟ್ಟ, ದೇಹಧರ್ಮ - ಶರೀರಧರ್ಮದ, ಚರಿತಂ - ಚರಿತ್ರವು, ಸರ್ವಂ- ಎಲ್ಲವೂ, ಆಭರಣಂ - ಆಲಂಕಾರವಾಗಿರ್ಪುದು, ಶಿವಪ್ರಿಯಕರಂ - ಶಿವಂಗೆ ಪ್ರೀತಿಯಮಾಡುವಂತಹುದು, ಸತ್ಯಂ - ಯಥಾರ್ಥವು, ಈ ಅರ್ಥವಲ್ಲಿ—

" ವಚನೇ ಚಲನೇ ವಿಲೋಕನೇಭವವರ್ಚ್ಯಾದಿಷು ಸರ್ವಕರ್ಮಸು
ಅಲಸತ್ವಮಹೋಭವೇದಲಂಕರಣಂ ಭಕ್ತಿಮತಂಭವತ್ಪ್ರಿಯಂ "

ಎಂದುಂಟು. ೬೧

**ಭಾವಾರ್ಥಬೋಧಿನಿ :** ಪ್ರಿಯಪತ್ನಿಗೆ ತಾನು ಮಾಡುವ ಸಕಲ ಕ್ರಿಯೆಗಳಲ್ಲಿ ಆಲಸ್ಯವೂ ತನ್ನ ಮಾತಿನಲ್ಲಿ ಕಾಠಿಣ್ಯವೂ, ಮನಸ್ಸಿನಲ್ಲಿ ದುಗುಡವೂ ಇದ್ದರೆ, ಅದು ಅವಳಿಗೆ ಭೂಷಣವಾಗಿರುವುದು. ಮತ್ತು ಅವಳ ಪತಿಗೆ ಪ್ರೀತಿಪ್ರದವಾಗಿರುವುದು. ಇದರಂತೆ ಲಿಂಗದಲ್ಲಿ ಸಾಮರಸ್ಯವನ್ನುಂಟುಮಾಡುವ ಕ್ರಿಯೆಯೇ ಸ್ವಭಾವವಾಗುಳ್ಳ ಶಿವಶರಣನು, ಲೀಲೆಗಾಗಿ ಸ್ವೀಕರಿಸಿದ ದೇಹದ ಸ್ವಾಭಾವಿಕವಾದ ವ್ಯಾಪಾರವೆಲ್ಲವೂ ಆತನಿಗೆ ಭೂಷಣವಾಗಿಯೂ ಶಿವನಿಗೆ ಪ್ರೀತಿಪ್ರದವಾಗಿಯೂ ಇರುವವು. ೬೧

**ಅವತಾರಿಕೆ :** ಶರಣನು ಪ್ರಾಕೃತ ಮನುಷ್ಯರ ಹಾಂಗೆ ಷಟ್ಕರ್ಮವ್ಯಾಪಾರವ ಮಾಡುವನಲ್ಲವೆಂದು ಪೇಳುತ್ತಿರ್ದಪಂ.

**ಶಾರ್ದೂಲ ವಿಕ್ರೀಡಿತ ವೃತ್ತಂ**

ವಾಣಿಜ್ಯಂ ಕೃಷಿಸೇವೆಯಾಜ್ಞೆಯೆನಿಪೀದುಷ್ಕರ್ಮಮಂ ಮಾಳ್ಪನೇ
ಜಾಣಂ ಶ್ರೀ ಶಿವಭಕ್ತನುದ್ಧತನುದಾರಂ ಭಕ್ತಿಸತ್ಕರ್ಮನಿ
ರ್ವಾಣೈಕಾಶ್ರಿತನಾತ್ಮ ಪೋಷಣನಿಮಿತ್ತಂ ಮರ್ತ್ಯರಂತಕ್ಕಟಾ
ಮಾಣಾಮಾತದು ಬೇಡ ಭಕ್ತನಸಮಾನಾಢ್ಯಂ ಶಿವಾವಲ್ಲಭಾ ೬೨

**ಟೀಕೆ :** ಜಾಣಂ - ಪ್ರವೀಣನಾದಂಥ, ಶ್ರೀ ಶಿವಭಕ್ತಂ - ಜ್ಞಾನೈಶ್ವರ್ಯದಿಂ ಕೂಡಿದ ಶಿವಭಕ್ತನಾದಂಥ, ಉದ್ಧತಂ - ಪ್ರಚಂಡನಾದಂಥ, ಉದಾರಂ - ತ್ಯಾಗಶೀಲನಾದಂಥ, ಭಕ್ತಿಸತ್ಕರ್ಮ - ನಿರ್ವಾಣೈಕಾಶ್ರಿತಂ - ಭಕ್ತಿ - ಶಿವಭಕ್ತಿಯನ್ನು, ಸತ್ಕರ್ಮ - ಸತ್ಕ್ರಿಯೆಯನು, ನಿರ್ವಾಣ - ಮೋಕ್ಷವನು, ಏಕ - ಮುಖ್ಯವಾಗಿ, ಆಶ್ರಿತಂ - ಆಶ್ರೈಸಿಕೊಂಡಿರ್ದಂಥ, ಅಸಮಾನಾಢ್ಯಂ - ಸಮಾನವಿಲ್ಲದ ಜ್ಞಾನೈಶ್ವರ್ಯದಿಂ ಸಂಪನ್ನವಾದಂಥ, ಭಕ್ತಂ - ಶಿವಭಕ್ತನು, ಆತ್ಮಪೋಷಣನಿಮಿತ್ತಂ- ತನ್ನ ಉದರಪೋಷಣ ನಿಮಿತ್ತವಾಗಿ, ಮರ್ತ್ಯರಂತೆ - ಪ್ರಾಕೃತಮನುಷ್ಯರ ಹಾಂಗೆ,

ವಾಣಿಜ್ಯಂ - ಕ್ರಯವಿಕ್ರಯವ್ಯಾಪಾರವು, ಕೃಷಿ - ವ್ಯವಸಾಯವು, ಸೇವೆ - ಓಲೈಸುವುದು, ಯಾಚ್ಞೆಯೆನಿಪ - ಬೇಡುವುದೆಂಬ, ಈ ದುಷ್ಕರ್ಮಮಂ - ಇಂತಪ್ಪ ದುರ್ವ್ಯಾಪರವನ್ನು, ಮಾಳ್ಪನೆ - ಮಾಡುವನೆ ? ಆ ಮಾತು ಅದುಬೇಡ - ಆ ಮಾತ ನುಡಿಯಬೇಡ, ಮಾಣ್ - ನಿಲ್ಲು, ಅಕಟಾ - ಅಯ್ಯೋ ! ಈ ಅರ್ಥದಲ್ಲಿ—

" ಸರ್ವಕರ್ಮ ಪರಿತ್ಯಾಗಾತ್ಸಂತ್ಯಕ್ತಾಶೇಷಸಾಧನಃ
ಶ್ರುತ್ಯುಕ್ತ್ಯಾತ್ರ ಪರಿವ್ರಾಟ್ಯದ್ವೈತ್ಯೈಕಾತ್ಮಜ್ಞಾನ ಜನ್ಮನಾ "

ಎಂದುಂಟಾಗಿ. ೬೨

**ಭಾವಾರ್ಥಬೋಧಿನಿ :** ಜಾಣನೂ, ಜ್ಞಾನಸಂಪತ್ತುಳ್ಳವನೂ, ಶಿವಭಕ್ತನೂ, ಪ್ರಚಂಡನೂ, ತ್ಯಾಗಶೀಲನೂ, ಭಕ್ತಿಸದಾಚಾರಮೋಕ್ಷಗಳನ್ನೇ ಮುಖ್ಯವಾಗಿ ಆಶ್ರಯಿಸಿದವನೂ, ಶಿವಜ್ಞಾನ ಸಂಪತ್ತಿನಲ್ಲಿ ತನಗೆಣೆಯಿಲ್ಲದವನೂ ಆದ ಶಿವಶರಣನು ಉದರಪೋಷಣ ನಿಮಿತ್ತವಾಗಿ ಪ್ರಾಕೃತ ಮನುಷ್ಯರಂತೆ ವ್ಯಾಪಾರ-ಕೃಷಿ - ಸೇವೆ – ಭಿಕ್ಷೆ - ಎಂಬೀ ನೀಚವೃತ್ತಿಗಳನ್ನು ಮಾಡುವನೆ ? ಅಯ್ಯೋ ! ಎಂದಿಗೂ ಇಲ್ಲ. ಆ ಮಾತನ್ನು ಆಡದಿರು. (ಎಂದರೆ - ಶರಣನು ಯಾವ ವೃತ್ತಿಯನ್ನು ಮಾಡಿದರೂ ಕಾಯಕ ರೂಪದಿಂದ ಗುರುಲಿಂಗಜಂಗಮಕ್ಕಾಗಿ ಮಾಡುವನಲ್ಲದೆ ಸ್ವಾರ್ಥಕ್ಕಾಗಿ ಮಾಡನೆಂಬುದಭಿಪ್ರಾಯ.) ೬೨

## ಶಾರ್ದೂಲ ವಿಕ್ರೀಡಿತ ವೃತ್ತಂ

ಭವಿಗಳ್ಮಾಳ್ಪವೊಲಾತ ಮಾಳ್ಪನೆಬಿಡಾ ಯಾಚ್ಞಾನ್ಯಸೇವಾಕೃಷಿ
ವ್ಯವಹಾರಂಗಳನಕ್ಕಟಾ ಪರಮಭಕ್ತಂ ಮಾಳ್ಪೊಡಂ ಭಕ್ತಿಸಂ
ಭವಸತ್ಕಾಯಕಮಾಗಿಮಾಳ್ಪನವರಿಂಮಂ ಜೀವಿಪಂ ಭಕ್ತಿಯಿಂ
ದವೆತಾಂ ಜೀವಿಪನೈಸೆ ಭಕ್ತಿಚರಿತಂ ಭಕ್ತಂ ಶಿವಾವಲ್ಲಭಾ ೬೩

**ಟೀಕೆ :** ಆತಂ - ಆ ಶರಣನು, ಯಾಚ್ಞಾನ್ಯಸೇವಾಕೃಷಿ ವ್ಯವಹಾರಂಗಳಂ-ಬೇಡುವುದು ಓಲಗ ಆರಂಭ ವ್ಯಾಪಾರ ಮೊದಲಾದವನು, ಭವಿಗಳ್ - ಪ್ರಾಕೃತರು, ಮಾಳ್ಪವೊಲ್ - ಮಾಡುವಹಾಂಗೆ, ಮಾಳ್ಪನೆ - ಮಾಡುವನೆ ? ಬಿಡಾ - ಆ ಮಾತನ್ನು ಬಿಡು, ಅಕಟಾ - ಅಯ್ಯೋ ! ಪರಮಭಕ್ತಂ - ಉತ್ಕೃಷ್ಟನಾದಭಕ್ತನು,

ಮಾಳ್ಪೊಡಂ - ಒಂದು ಕೃತ್ಯವನು ಮಾಡಿದುದುಂಟಾದೊಡೆಯೂ, ಭಕ್ತಿಸಂಭವ ಸತ್ಕಾಯಕವಾಗಿ - ಭಕ್ತಿಯನುಂಟುಮಾಡುವ ಒಳ್ಳಿತ್ತಾದ ಕಾಯಕವಾಗಿ, ಮಾಳ್ಪಂ - ಮಾಡುವವನು, ಅದರಿಂದಂ - ಆ ಸತ್ಕರ್ಮಂಗಳಿಂದ, ಜೀವಿಪಂ- ಜೀವಿಸುವವನು, ಭಕ್ತಿಚರಿತಂ - ಭಕ್ತಿಚಾರಿತ್ರವನುಳ್ಳ, ಭಕ್ತ - ಶಿವಭಕ್ತನು, ಭಕ್ತಿಯಿಂದವೆ - ಶಿವಭಕ್ತಿಯಿಂದಲೇ, ಜೀವಿಪನೈಸೆ - ಜೀವಿಸುವನಷ್ಟೆ ?

**ಭಾವಾರ್ಥಬೋಧಿನಿ :** ಆ ಶರಣನು ಯಾಚಿಸುವುದನ್ನು ಪರಸೇವೆ ಮಾಡುವುದನ್ನು, ಕೃಷಿವಾಣಿಜ್ಯ ಮೊದಲಾದ ಕೃತಿಗಳನ್ನು ಮಾಡುವುದನ್ನು ಭವಿಗಳು ಮಾಡುವಂತೆ ಮಾಡುವನೆ ? ಆ ಮಾತನ್ನು ಆಡದಿರು. ಆದರೆ, ಆ ಪರಮಭಕ್ತನು ಯಾವ ಕೃತಿಯನ್ನು ಮಾಡಿದರೂ ಭಕ್ತಿವರ್ಧಕವಾದ ಒಂದು ಕಾಯಕವನ್ನಾಗಿ ಆಚರಿಸಿ ಜೀವಿಸುವನು - ಎಂದರೆ - ಭಕ್ತಿಶೀಲನಾದ ಆ ಶಿವ ಶರಣನು ಕಾಯಕದಿಂದ ಭಕ್ತಿಯನ್ನು ಮುಂದುಗೊಂಡು ಜೀವಿಸುವನು. ೬೩

ಶಾರ್ದೂಲ ವಿಕ್ರೀಡಿತ ವೃತ್ತಂ

ಭಕ್ತಿದ್ವಾರ ಸಮಾಗತಾತ್ತ ವಿಭವವ್ಯಾಪಾರಪಾರಂಗತಂ
ಭುಕ್ತಿದ್ವಾರಸಮಾಗತಾಖಿಲ ಮಹಾಭೋಗೋಪಭೋಗಾಶ್ರಯಂ
ಶಕ್ತಿದ್ವಾರಸಮಾಗತಪ್ರಕಟದೃಷ್ಟ ಪ್ರತ್ಯಯೈಕಾಸ್ಪದಂ
ಮುಕ್ತಿದ್ವಾರಸಮಾಗತಾತ್ಮ ಚರಿತಂ ಭಕ್ತಂ ಶಿವಾವಲ್ಲಭಾ ೬೪

**ಟೀಕೆ :** ಭಕ್ತಂ - ಶಿವಭಕ್ತನು, ಭಕ್ತಿ......... ಪಾರಂಗತಂ - ಭಕ್ತಿದ್ವಾರ - ಭಕ್ತಿಮುಖದಿಂದ, ಸಮಾಗತ - ಬಂದಂಥ, ಅತ್ತ - ಎಯ್ದಲ್ಪಟ್ಟ, ವಿಭವ - ಐಶ್ವರ್ಯದ, ವ್ಯಾಪಾರ - ಕೃತ್ಯದಲ್ಲಿ, ಪಾರಂಗತಂ - ಕಡೆಗಂಡಂಥಾತನು, ಭುಕ್ತಿ.........ಭೋಗಾಶ್ರಯಂ - ಭುಕ್ತಿದ್ವಾರ - ಸಮರ್ಪಣಮುಖದಿಂದ, ಸಮಾಗತ - ಬಂದಂಥ, ಅಖಿಲ - ಸಮಸ್ತವಾದ, ಮಹಾಭೋಗ - ದೊಡ್ಡಿತ್ತಾದ ಭೋಗಂಗಳ, ಉಪಭೋಗ - ಅನುಭವಿಸುವುದಕ್ಕೆ, ಆಶ್ರಯಂ - ಸ್ಥಾನವಾದಂಥಾತನು, ಶಕ್ತಿ.........ಪ್ರತ್ಯಯೈಕಾಸ್ಪದಂ - ಶಕ್ತಿದ್ವಾರ - ಚಿಚ್ಛಕ್ತಿಯ - ಮುಖದಿಂದ, ಸಮಾಗತ - ಬಂದಂಥ, ಪ್ರಕಟ - ಪ್ರಸಿದ್ಧವಾದ, ದೃಷ್ಟ - ಕಾಣಲ್ಪಟ್ಟ,

ಪ್ರತ್ಯಯ - ಜ್ಞಾನಕ್ಕೆ, ಏಕ - ಮುಖ್ಯವಾಗಿ, ಆಸ್ಪದಂ - ಸ್ಥಾನವಾದಾತನು, ಮುಕ್ತಿದ್ವಾರಸಮಾಗತಾತ್ಮಚರಿತಂ – ಮುಕ್ತಿದ್ವಾರ – ಮೋಕ್ಷಮಾರ್ಗದಲ್ಲಿ, ಸಮಾಗತ - ಕೂಡಲ್ಪಟ್ಟಂಥ, ಆತ್ಮಚರಿತಂ - ತನ್ನ ಚರಿತ್ರೆವುಳ್ಳಾತನು. ೬೪

**ಭಾವಾರ್ಥಬೋಧಿನಿ :** ಶಿವಾವಲ್ಲಭನೆ, ಶಿವಶರಣನು ಭಕ್ತಿಮುಯಕಾಯಕ ಮುಖದಿಂದ ಪಡೆದ ಸಂಪತ್ತನ್ನು ಬಳಸುವ ಕೃತ್ಯದಲ್ಲಿ ಜಾಣನಾಗಿರುವನು. ಮತ್ತೆ ಗುರುಲಿಂಗಜಂಗಮರಿಗೆ ಅರ್ಪಿಸುವುದರ ಮೂಲಕವಾಗಿ ಪಡೆದ ಮಹಾಪ್ರಸಾದದ ಭೋಗಕ್ಕಾಶ್ರಯನಾಗಿರುವನು. ಇದಲ್ಲದೆ ಜ್ಞಾನಶಕ್ತಿಯ ಮುಖದಿಂದ ಲಭಿಸಿದ ಸ್ವಸ್ವರೂಪಾನುಭವಕ್ಕಾಶ್ರಯನಾಗಿಯೂ, ಮೋಕ್ಷಮಾರ್ಗಕ್ಕೆ ಸಂಬಂಧಿಸಿದ ಆತ್ಮ-ಚರಿತ್ರೆಯುಳ್ಳವನಾಗಿಯೂ ಇರುವನು. ೬೪

**ಅವತಾರಿಕೆ :** ಪರಪುರುಷಾರ್ಥದಿಂದಲ್ಲದೆ ಪರಲೋಕವಿಲ್ಲೆಂಬರಂ ಖಂಡಿಸಿ, ಗುರುಲಿಂಗಜಂಗಮಕ್ಕೆ ನಿರ್ವಂಚನೆಯಿಂ ಮಾಡಿ ಆ ಶರಣನು ಪರಶಿವಸ್ವರೂಪ-ನಾಗಿರ್ಪನೆಂದು ಪೇಳುತ್ತಿರ್ದಪಂ.

**ಶಾರ್ದೂಲ ವಿಕ್ರೀಡಿತ ವೃತ್ತಂ**

ಪರರ್ಗನ್ನಾದಿಹದಾರ್ಥಮಿತ್ತು ಪುರುಷಾರ್ಥಂಗೈವವರ್ಗಲ್ಲದಾ
ಪರಲೋಕಂ ದೊರಕೊಳ್ಳದೆಂಬರದು ತಾನೇಕನ್ಯಲೋಕಂ ವೃಥಾ
ಪರರಿಂ ಸ್ವೀಯರದೇಂ ವಿರೋಧಿಗಳೆಮಾಳ್ಪಾತಂ ಸ್ವಲೋಕಾರ್ಥಮಾ
ಪರರಂ ತನ್ನವರೆಂದು ಮಾಡದೊಡೆತಾಂ ವ್ಯರ್ಥಂ ಶಿವಾವಲ್ಲಭಾ ೬೫

**ಟೀಕೆ :** ಪರರ್ಗೆ - ಅನ್ಯರ್ಗೆ, ಅನ್ನಾದಿಪದಾರ್ಥಮಿತ್ತು - ಅನ್ನಮೊದಲಾದ ಪದಾರ್ಥಂಗಳಂ ಕೊಟ್ಟು, ಪುರುಷಾರ್ಥಂಗೈವವರ್ಗಲ್ಲದೆ - ಪುರುಷಾರ್ಥಮಾಡು ವರ್ಗಲ್ಲದೆ, ಆ ಪರಲೋಕಂ - ಆ ದೇವಲೋಕವು, ದೊರಕೊಳ್ಳದು - ಸಾಧ್ಯ ವಾಗದು, ಎಂಬರ್ - ಎನ್ನುವರು, ಅನ್ಯಲೋಕಂ - ತನಗನ್ಯವಾದಂಥ ಲೋಕವು, ಅದುತಾಂ - ಅದುತಾನು, ಏಕೆ - ಏತಕ್ಕೆ ? ವೃಥಾ - ವ್ಯರ್ಥವು, ಆ ಪರರಿಂ - ಆ ಅನ್ಯರಿಂದೆ, ಸ್ವೀಯರ್ - ತನ್ನ ಪುತ್ರಕಳಾತ್ರಾದಿಗಳು, ಅದೇಂ ವಿರೋಧಿಗಳೇ - ಹಗೆಗಳೇ ಏನು ? ಸ್ವಲೋಕಾರ್ಥ – ತನ್ನ ಪುಣ್ಯಲೋಕಕ್ಕೋಸ್ಕರವಾಗಿ,

ಮಾಳ್ಪಾತಂ - ದಾತೃವಾದಾತನು, ಆ ಪರರಂ - ಆ ಅನ್ಯರನ್ನು, ತನ್ನವರೆಂದು, ಮಾಡದೊಡೆ - ದಾನಮಾಡದಿದ್ದೊಡೆ, ತಾಂ - ಆ ಕೊಟ್ಟಂತಹುದು, ವ್ಯರ್ಥಂ- ನಿರರ್ಥಕವು. ೬೫

**ಭಾವಾರ್ಥಬೋಧಿನಿ :** ಪರರಿಗೆ ಅನ್ನವಸ್ತ್ರಾದಿಗಳ ದಾನವುಂ ಮಾಡಿ ಧರ್ಮರೂಪವಾದ ಪುರುಷಾರ್ಥವನ್ನು ಪಡೆಯದವರಿಗೆ ಪರಲೋಕವು (ಸ್ವರ್ಗಾದಿಕವು) ದೊರಕುವದಿಲ್ಲವೆಂದು ಹೇಳುವವರಲ್ಲವೆ ? ಆ ಪರಲೋಕವು ತನಗಿಂತಲೂ ಭಿನ್ನವಾಗಿರುವುದರಿಂದ ಅದರಿಂದೇನು ಪ್ರಯೋಜನವಿರುವುದು ? ಏನೂ ಇಲ್ಲ. ಮತ್ತು ಅನ್ನವಸ್ತ್ರಾದಿಗಳನ್ನು ಸ್ವೀಕರಿಸುವ ಪರರಿಗಿಂತಲೂ ತನ್ನವರಾದ ಸತಿಪುತ್ರಾದಿಗಳು ವಿರೋಧಿಗಳೇನು ? ತನ್ನವರಿಗೆ ದಾನಮಾಡಬಹುದಲ್ಲವೆ ? ಇದು ಅಲ್ಲದೆ, ತನಗೆ ಬೇಕಾದ ಲೋಕಕ್ಕಾಗಿ ದಾನಮಾಡುವವನು ಪರರನ್ನು ತನ್ನವರೆಂದು ತಿಳಿದು ಅವರಿಗೆ ದಾನಮಾಡದಿದ್ದರೆ ಮಾಡಿದ ದಾನವು ವ್ಯರ್ಥವಲ್ಲವೆ ? ನಿಜವಾಗಿಯೂ ವ್ಯರ್ಥವಾಗುವುದು - ಎಂದರೆ - ಪರರಿಗೆ ದಾನಮಾಡಿ, ಪರಲೋಕವನ್ನು ಪಡೆಯುವೆನೆಂಬ ಭಾವನೆಯು ನಿರರ್ಥಕವೆಂದು ತಾತ್ಪರ್ಯ. ೬೫

## ಮತ್ತೇಭವಿಕ್ರೀಡಿತಂ

ಪರರಾರ್ತನ್ನವರಾರ್ ವಿವೇಕಿಸೆ ನಿಜಸ್ತ್ರೀ ಪುತ್ರಮಿತ್ರರ್ ಸ್ವಕೀ
ಯರೆ ಮಿಕ್ಕಾದವರನ್ಯರೇ ತನಗೆ ನಾವೇನೆಂಬೆವಿಂತಪ್ಪ ಮೂ
ರ್ಖರನಯ್ಯೋ ಸ್ವಪರಾದಿಕಂ ಗುರುಮತಂ ದೇಹಾದಿ ತಾನನ್ಯವೆಂ
ದಿರೆ ಮತ್ತಿನ್ನಿಳಿವರ್ಗೆ ಪೇಳ್ವ ಕಥೆಯುಂ ನೋಡಾ ಶಿವಾವಲ್ಲಭಾ ೬೬

**ಟೀಕೆ :** ವಿವೇಕಿಸೆ - ವಿಚಾರಿಸಲಾಗಿ, ಪರರ್ಆರ್ - ಅನ್ಯರಾರು ? ತನ್ನವರ್ಆರ್ - ತನ್ನ ಸಂಬಂಧವವರಾರು ? ತನಗೆ - ಸ್ವಪರಂಗಳ ವಿಚಾರಿಸುವ ತನಗೆ, ನಿಜಸ್ತ್ರೀಪುತ್ರಮಿತ್ರರ್ - ತನ್ನ ಸತೀಸುತಬಂಧುಗಳು, ಸ್ವಕೀಯರೆ - ತನ್ನವರೆ? ಮಿಕ್ಕಾದವರ್ - ಉಳಿದವರು, ಅನ್ಯರೆ - ಪರರೆ? ಇಂತಪ್ಪ ಮೂರ್ಖರಂ- ಇಂತಪ್ಪ ಬುದ್ಧಿಗೆಟ್ಟವರನ್ನು, ನಾವೇನೆಂಬೆವು - ನಾವೇನೆಂದುಹೇಳುವೆವು ! ಸ್ವಪರಾದಿಕಂ - ಸ್ವ ತನ್ನ, ಪರಾದಿಕಂ - ಬೇರಾದ ದೇಹಾದಿಕವೆಂಬುದು, ಗುರುಮತಂ- ಶಿವಯೋಗಿಗಳ ಸಮ್ಮತವು, ದೇಹಾದಿ - ದೇಹಮೊದಲಾದುದು, ತಾಂಅನ್ಯವೆಂದುಇರೆ-

ತನ್ನಿಂದ ಬೇರೆಂದಿರಲಾಗಿ, ಮತ್ತೆ - ಮರಳಿ, ಇನ್ನು - ಈ ಅರ್ಥವಬಿಟ್ಟು, ಉಳಿದರ್ಗೆ - ಪರವೆಂಬ ಶಬ್ದವು ಅನ್ಯರ್ಗೆ ಎಂದು, ಪೇಳ್ವ - ಹೇಳುವಂಥ, ಕಥೆಯಂನೋಡಾ - ವ್ಯರ್ಥದಮಾತಂ ನೋಡು. ೬೬

**ಭಾವಾರ್ಥಬೋಧಿನಿ :** ಇನ್ನು ವಿಚಾರಿಸಿನೋಡಲಾಗಿ, ತನಗೆ ಪರರು ಯಾರು ? ತನ್ನವರು ಯಾರು ? ತಾನು - ಇತರರು - ಎಂಬ ವಿಚಾರವನ್ನು, ಮಾಡುವ ತನಗೆ ಸತಿಪುತ್ರಾದಿಗಳು ತನ್ನವರಾಗಿರುವರೇನು ? ಸತಿಪುತ್ರಾದಿಗಳಿಗಿಂತಲೂ ಭಿನ್ನರಾದವರು ಅನ್ಯರಾಗಿರುವರೇನು ? ಇವರು ತನ್ನವರು ಅವರು ಪರರು ಎಂದು ಹೇಳಿಕೊಳ್ಳುವ ಮೂಢರ ವಿಷಯವನ್ನು ಏನೆಂದು ಹೇಳಬೇಕು ! ಸ್ವ - ಪರ - ಎಂಬಿವುಗಳ ವಿಚಾರವೇನೆಂದರೆ : ದೇಹಕರಣಾದಿಗಳೇ ತನಗನ್ಯವಾದವುಗಳೆಂದು ಗುರುಜನಸಮ್ಮತವಾಗಿರುವುದು. ಈ ಅಭಿಪ್ರಾಯವನ್ನು ಬಿಟ್ಟು, ಇತರ ಜನರಿಗೆ ಪರರೆಂದು ಹೇಳುವುದು ವ್ಯರ್ಥದ ಮಾತಲ್ಲವೆ ? ೬೬

**ಮತ್ತೇಭವಿಕ್ರೀಡಿತಂ**

ತನಗನ್ಯರ್ಗಡ ತನ್ನ ನರ್ಥಿಸುವವರ್ತಾನಂತವರ್ಗನ್ಯಭಾ
ವನೆಯಾತಂಗಡ ತನ್ನವಸ್ತುಗಡ ನೋಡನ್ನಾದಿ ಮತ್ತೇತಕೀ
ವನವರ್ಗಕ್ಕಟ ತನ್ನವಸ್ತುವನವರ್ಗಿತ್ತಲ್ಲಿ ತನ್ನಿಷ್ಟಮಂ
ತನಗನ್ಯರ್ಮಗುಳ್ದಿವರೇ ಬಿನುಗುಗಳ್ನೋಡಾ ಶಿವಾವಲ್ಲಭಾ ೬೭

**ಟೀಕೆ :** ತನಗೆ - ದಾತೃವಾದ ತನಗೆ, ತನ್ನಂ ಅರ್ಥಿಸುವವರ್ - ತನ್ನ ಬೇಡುವವರು, ಅನ್ಯರ್ಗಡ - ಲೋಗರಂತೆ ಕಂಡಾ ? ತಾಂ - ತಾನು, ಅಂತವರ್ಗೆ- ಆ ಬೇಡುವವರಿಗೆ, ಅನ್ಯಭಾವನೆಯಾತಂಗಡ - ಭಿನ್ನಭಾವನೆಯಾತನಂತೆ ಕಂಡಾ ? ನೋಡು - ವಿಚಾರಿಸಿ ನೋಡು, ಅನ್ನಾದಿ - ಅನ್ನ ಮೊದಲಾದ ದ್ರವ್ಯಂಗಳು, ತನ್ನ ವಸ್ತುಗಡ - ತನ್ನ ವಸ್ತುವಂತೆ ಕಂಡಾ ? ಅಕಟ - ಅಯ್ಯೋ, ಅವರ್ಗೆ - ಆ ಲೋಗರ್ಗೆ, ತನ್ನ ವಸ್ತುವಂ - ತನ್ನ ದ್ರವ್ಯವನು, ಇತ್ತಲ್ಲಿ - ಕೊಟ್ಟಲ್ಲಿ, ತನಗೆ - ದಾತೃವಾದ ತನಗೆ, ತನ್ನಿಷ್ಟಮಂ - ತನ್ನಿಷ್ಟಾರ್ಥವನು, ಬಿನುಗುಗಳ್ - ನೀಚರಾದಂಥ, ಅನ್ಯರ್ - ಲೋಗರು, ಮಗುಳ್ದು - ಮರಳಿ, ಈವರೆ - ಕೊಡುವರೆ, ನೋಡಾ - ನೋಡು, ಇಲ್ಲ.

**ಭಾವಾರ್ಥಬೋಧಿನಿ :** ದಾತೃವಾದ ತನಗೆ ತನ್ನನ್ನು ಬೇಡುವವರು ಅನ್ಯರಾಗಿರುವರಲ್ಲವೆ ಬೇಡುವವರಿಗಿಂತಲೂ ತಾನು ಭಿನ್ನನೆಂಬ ಭಾವನೆಯು ತನ್ನಲ್ಲಿರುವುದಲ್ಲವೆ ? ವಿಚಾರಿಸಲಾಗಿ ತಾನು ದಾನ ಮಾಡುವ ಅನ್ನ ವಸ್ತ್ರಾದಿಗಳು ತನ್ನವೆಂದು ತಿಳಿದಿರುವನಲ್ಲವೆ ? ಅಯ್ಯೋ ! ಹೀಗೆ ತಿಳಿದು, ಅನ್ಯರಿಗೆ ತನ್ನ ವಸ್ತುಗಳನ್ನು ಕೊಟ್ಟರೆ, ಆ ಅಲ್ಪರಾದ ಅನ್ಯಜನರು ತನ್ನಿಷ್ಟಾರ್ಥವನ್ನು ಮರಳಿ ಕೊಡುವರೆ ? ಕೊಡಲಾರರು. ೬೭

**ಮತ್ತೇಭವಿಕ್ರೀಡಿತಂ**

ಕುಡುವರ್ತನ್ನವರಾದೊಡಂ ತನಗೆ ತಾಂ ಕೊಟ್ಟರ್ಥಮಂ ಕೊಂಡು ನೂ
ರ್ಮಡಿಯಾಗಲ್ ಸುಜನೈಕವತ್ಸಲತೆಯಿಂ ಮಿಕ್ಕಾದವರ್ಕೊಟ್ಟೊಡಂ
ಕುಡರಾಕೊಂಡನಿತರ್ಥಮಂ ಬರಿದೆ ಲೋಗರ್ಗಕ್ಕಟಾ ಕೊಟ್ಟವ
ರ್ಕಿಡುವರ್ಭಕ್ತರಿಗಿತ್ತವರ್ಬದುಕುವರ್ನೋಡಾ ಶಿವಾವಲ್ಲಭಾ ೬೮

**ಟೀಕೆ :** ತನ್ನವರಾದೊಡಂ-ತನ್ನವರಾದೊಡೆ, ತಾಂ-ತಾನು, ಕೊಟ್ಟರ್ಥಮಂ-ಕೊಟ್ಟ ದ್ರವ್ಯವನ್ನು, ಕೊಂಡು - ತೆಗೆದುಕೊಂಡು, ಸುಜನೈಕವತ್ಸಲತೆಯಿಂ - ಸುಜನ - ಸಜ್ಜನರಲ್ಲಿ, ಏಕ - ಮುಖ್ಯವಾದ, ವತ್ಸಲತೆಯಿಂ - ಸ್ನೇಹದಿಂದ್ ನೂರ್ಮಡಿಯಾಗಲ್ - ಶತಗುಣಿತವಾಗಲು, ತನಗೆ - ಕೊಟ್ಟಂಥ ತನಗೆ, ಕುಡುವರ್ - ಈವರು, ಮಿಕ್ಕಾದವರ್ - ಉಳಿದ ಬಿನುಗುಗಳು, ಕೊಟ್ಟೊಡಂ - ತಮಗಿತ್ತುದುಂಟಾದೊಡೆಯೂ, ಆ ಕೊಂಡನಿತರ್ಥಮಂ - ಆ ತೆಗೆದುಕೊಂಡಷ್ಟು ದ್ರವ್ಯವನ್ನು, ಕುಡರ್ - ಈಯರು, ಲೋಗರ್ಗೆ - ಅನ್ಯರಿಗೆ, ಕೊಟ್ಟವರ್ - ಇತ್ತವರು, ಬರಿದೆ - ವ್ಯರ್ಥವಾಗಿ, ಕಿಡುವರ್ - ನಷ್ಟವಪ್ಪರು, ಭಕ್ತರಿಗೆ - ಶಿವಭಕ್ತರಿಗೆ, ಇತ್ತವರ್ - ಕೊಟ್ಟಂಥವರುಗಳು, ಬದುಕುವರ್ - ಕೃತಾರ್ಥರಹರು, ನೋಡಾ - ನೋಡು, ಈ ಅರ್ಥದಲ್ಲಿ—

"ಶಿವಭಕ್ತಿಮತಿಕ್ರಮ್ಯ ಯೇನಾನ್ಯಸ್ಮೈ ಪ್ರದೀಯತೇ
ನಿಷ್ಫಲಂ ತದ್ಭವೇದ್ದಾನಂ ನರಕಂ ಚ ಪ್ರಪದ್ಯತೇ"

ಇಂತೆಂದು ಸೌರಪುರಾಣವುಂಟಾಗಿ.

**ಭಾವಾರ್ಥಬೋಧಿನಿ :** ತಾನು ದಾನ ಮಾಡಿದುದನ್ನು ತೆಗೆದುಕೊಂಡವರು ತನ್ನವರಾಗಿದ್ದ ಪಕ್ಷದಲ್ಲಿ ಸುಜನತೆಯ ಚಿಹ್ನವಾದ ವಾತ್ಸಲ್ಯದಿಂದ ಅವರು ತಾವು ತೆಗೆದುಕೊಂಡುದಕ್ಕಿಂತಲೂ ನೂರ್ಮಡಿಯಾಗಿ ಮರಳಿ ಕೊಟ್ಟುಬಿಡುವರು. ಇನ್ನುಳಿದ ಕ್ಷುದ್ರಜನರು ತಮಗೆ ಇತರರು ಕೊಟ್ಟಷ್ಟನ್ನೂ ಅವರಿಗೆ ಮರಳಿ ಕೊಡಲಾರರು. ಆದಕಾರಣ ಲೋಕದಲ್ಲಿ ಶಿವಭಕ್ತರಿಗೆ ಕೊಟ್ಟವರು ಕೃತಾರ್ಥರಾಗುವರು. ಕ್ಷುದ್ರಜನರಿಗೆ ಕೊಟ್ಟವರ ದ್ರವ್ಯವು ವ್ಯರ್ಥವಾಗಿ ನಷ್ಟವಾಗುವುದು. (ಶಿವಭಕ್ತರಿಗೆ ದಾನಮಾಡುವುದೇ ಉತ್ತಮವೆಂದು ಭಾವವು.) ೬೮

**ಮತ್ತೇಭವಿಕ್ರೀಡಿತಂ**

ಪರಲೋಕಸ್ಪೃಹೆಯಿಂ ಪರರ್ಗೆ ಪರಮಪ್ಪನ್ನಾದಿಯಂ ಸ್ವೀಯಮೆಂ
ದಿರದಿತ್ತೊಂದಭಿಮಾನದಿಂ ಪರಹಿತಂ ತಾನೆಂಬಹಂಕಾರಿಗಾ
ಪರಲೋಕಂ ಪರಲೋಕಮಾಪರರವರ್ಸತ್ಯಂ ಪರರ್ ತತ್ಪರಂ
ಪರಮನ್ನಾದಿಪದಾರ್ಥಮಂತು ತನಗಿಲ್ಲೇನುಂ ಶಿವಾವಲ್ಲಭಾ ೬೯

**ಟೀಕೆ :** ಪರಲೋಕಸ್ಪೃಹೆಯಿಂ - ಪರಲೋಕಬೇಕೆಂಬ ವಾಂಛೆಯಿಂದ, ಪರರ್ಗೆ - ಅನ್ಯರಿಗೆ, ಪರಮಪ್ಪ - ತನ್ನಿಂದ ಅನ್ಯವಾದಂಥ, ಅನ್ನಾದಿಯಂ - ಅನ್ನ ಮೊದಲಾದ ವಸ್ತುವನು, ಸ್ವೀಯಮೆಂದು-ತನ್ನೊಡವೆಯೆಂದು, ಇರದೆ-ಹಾಣದೆ, ಇತ್ತು - ಕೊಟ್ಟಂಥ, ಒಂದಭಿಮಾನದಿಂ - ಅಭಿಮಾನವೊಂದರಿಂದ, ತಾಂ - ತಾನು, ಪರಹಿತಂ - ಪರಪುರುಷಾರ್ಥಿಯೆಂಬ, ಅಹಂಕಾರಿಗೆ - ಗರ್ವಿತನಿಗೆ, ಆ ಪರಲೋಕಂ - ಆ ದೇವಲೋಕವು, ಪರಲೋಕಂ - ಅನ್ಯಲೋಕವಾಗಿಯೇ ಇರ್ಪುದು, ಅವರ್ - ಆ ತೆಗೆದುಕೊಂಡವರು, ಸತ್ಯಂ - ಯಥಾರ್ಥವಾಗಿ, ಪರರ್ - ಅನ್ಯರೇ, ತತ್ಪರಂ - ಅವರಿಗೆ ಬೇರಾದಾತನು, ಪರಂ - ಅನ್ಯನೇ, ಅನ್ನಾದಿಪದಾರ್ಥಂ - ಅನ್ನ ಮೊದಲಾದ ಪದಾರ್ಥಂಗಳು, ಪರಂ - ಬೇರೆಯೇ, ಅಂತು - ಅದುಕಾರಣವಾಗಿ, ತನಗೆ - ದಾತೃವಾದ ತನಗೆ, ಏನುಂ - ಏನು ಪ್ರಯೋಜನವೂ, ಇಲ್ಲ - ದೊರಕದು. ೬೯

**ಭಾವಾರ್ಥಬೋಧಿನಿ :** ತನಗೆ ಅನ್ಯವಾದ ಅನ್ನಾದಿವಸ್ತುವನ್ನು ತನ್ನೊಡವೆಯೆಂದು ಅಭಿಮಾನಿಸಿ, ಪರಲೋಕಾಪೇಕ್ಷೆಯಿಂದ ಆ ವಸ್ತುವನ್ನು ಅನ್ಯರಿಗೆ ದಾನ

ಮಾಡಿ, ತಾನು ಪರಹಿತವನ್ನು ಮಾಡಿದೆನೆಂದು ಗರ್ವಗೊಂಡವನಿಗೆ ಪರಲೋಕ ಪ್ರಾಪ್ತಿಯಾಗದೆ, ಆ ಲೋಕವು ತನಗನ್ಯವಾಗಿಯೇ ದೂರಿರುವುದು. ದಾನವನ್ನು ತೆಗೆದುಕೊಂಡವರೂ ಅನ್ಯರೇ ಆಗಿರುವರು. ಅವರಿಂದ ತಾನೂ ಬೇರೆಯುವನಾಗಿರುವನು. ಅನ್ನಾದಿವಸ್ತುವೂ ತನ್ನಿಂದ ಭಿನ್ನವಾಗಿಯೇ ಇರುವುದು. ಹೀಗೆ ದಾನ ಮಾಡಿದವನಿಗೆ ಎಲ್ಲವೂ ಬೇರೆಯಾಗಿರುವುದರಿಂದ ಇಂತಹ ದಾನದಿಂದ ಏನೂ ಪ್ರಯೋಜನವಿಲ್ಲ. ಎಂದರೆ–ದಾನದಲ್ಲಿ ಭೇದಭಾವನೆಯು ಫಲಕಾರಿಯಲ್ಲವೆಂದು ತಾತ್ಪರ್ಯ. ೬೯.

ಮತ್ತೇಭವಿಕ್ರೀಡಿತಂ

ಶರಣಂ ತನ್ನವರನ್ಯರೆಂದು ಬಗೆಯಂ ಸ್ತ್ರೀಪುತ್ರಮುಖ್ಯರ್ಕಳುಂ
ಪರರುಂ ನೋಳ್ಪೊಡೆ ತನ್ನವರ್ಸಕಲರುಂ ತತ್ವಾರ್ಥದಿಂ ಮತ್ತೆ ತಾಂ
ಪರಿಕಿಪ್ಪಲ್ಲಿ ಸಮಸ್ತರುಂ ಪರರಿದಕ್ಕಾರಾದೊಡೇಂ ಮಾಳ್ಪತ
ತ್ಪುರುಷಾರ್ಥಂ ಸಮಮೆಲ್ಲಿ ತನ್ನಮನ ಮಲ್ಲೀವಂ ಶಿವಾವಲ್ಲಭಾ ೭೦

**ಟೀಕೆ :** ಶರಣಂ - ಶಿವಶರಣನು, ತನ್ನವರ್ - ಇವರು ತನ್ನವರು, ಅನ್ಯರ್, ಇವರು ಪರರು ಎಂದು, ಬಗೆಯಂ - ವಿಚಾರಿಸನು, ನೋಳ್ಪೊಡೆ - ವಿಚಾರಿಸುವೊಡೆ, ಸ್ತ್ರೀಪುತ್ರಮುಖ್ಯರ್ಕಳುಂ - ಸತೀಸುತರು ಮೊದಲಾದವರು, ಪರರುಂ - ಅನ್ಯರು, ಸಕಲರುಂ - ಸಮಸ್ತರೂ, ತನ್ನವರ್ - ತನ್ನವರು, ತತ್ವಾರ್ಥದಿಂ - ಪರಮಾರ್ಥದಿಂದ, ಮತ್ತೆ - ಮರಳಿ, ತಾಂ ಪರಿಕಿಪ್ಪಲ್ಲಿ - ತಾನು ಪರೀಕ್ಷಿಸುವುದರಲ್ಲಿ, ಸಮಸ್ತರುಂ - ಸರ್ವರೂ, ಪರರ್ - ಅನ್ಯರು, ಇದಕ್ಕೆ ಆರಾದೊಡೇಂ - ಆರಾದೊಡೇನು, ಮಾಳ್ಪತತ್ಪುರುಷಾರ್ಥಂ - ಆ ಮಾಡುವಂಥ ಪರಪುರುಷಾರ್ಥವು, ಸಮಂ - ಸರಿ, ತನ್ನಮನಂ - ತನ್ನಚಿತ್ತವು, ಎಲ್ಲಿ - ಎಲ್ಲಿವುಂಟಾಗಿದ್ದೀತು, ಅಲ್ಲಿ-ಅಲ್ಲಿಯೇ, ಈವಂ – ಕೊಡುವನು. ೭೦

**ಭಾವಾರ್ಥಬೋಧಿನಿ :** ಶಿವಶರಣನು, ಇವರು ತನ್ನವರು ಇವರು ಅನ್ಯರು ಎಂದು ಬಗೆಯುವುದಿಲ್ಲ. ವಿಚಾರಮಾಡಲಾಗಿ – ಆತನ ಸತಿಪುತ್ರಾದಿಗಳೂ ಅವರಿಗಿಂತ ಭಿನ್ನರಾದ ಸರ್ವರೂ ಆತನಿಗೆ ಸ್ವಕೀಯರಾಗಿಯೇ ಇರುವರು. ಮತ್ತೊಂದು ದೃಷ್ಟಿಯಿಂದ ನೋಡಿದರೆ ಸತಿಸುತಾದಿ ಸರ್ವರೂ ಆ ಶರಣನಿಗೆ

ಅನ್ಯರಾಗಿಯೇ ಇರುವರು. ಹೀಗಿರುವುದರಿಂದ ದಾನಮಾಡುವುದಕ್ಕೆ ಯಾರಾದರೇನು ? ಎಲ್ಲರೂ ಒಂದೇ. ತನ್ನ ಮನಸ್ಸು ಎಲ್ಲಿ ದಾನಮಾಡಬೇಕೆಂದಿರುವುದೋ ಅಲ್ಲಿಯೇ ಶರಣನು ಕೊಡುವನು. ಎಂದರೆ - ಇತರರಿಗಿರುವಂತೆ ಶರಣನಿಗೆ ಬೇದ-ಭಾವವಿರುವುದಿಲ್ಲೆಂದು ತಾತ್ಪರ್ಯ. ೭೦

**ಮತ್ತೇಭವಿಕ್ರೀಡಿತಂ**

ಪರರಲ್ಲೀಕ್ಷಿಸೆ ಕೊಂಬವರ್ಕುಡುವವರ್ತಾವನ್ಯರಲ್ಲಂ ಸ್ವಕೀ
ಯರೆ ಸತ್ಯಂ ಬಳಿಕಲ್ಲದಿರ್ದೊಡಕಟಾ ಸ್ವಸ್ತ್ರೀಸುತಾರ್ಥಾದಿಯುಂ
ಪರರ್ಗೇಂ ಕೊಟ್ಟವರುಂಟೆನೋಳ್ಪೊಡೆ ನಿಜಸ್ತ್ರೀಪುತ್ರವಿತ್ತಾದಿಯಂ
ಪರಮಂತಲ್ಲದೊಡೀವರೇಸಲೆಪರರ್ಗಾದ್ಯರ್ಶಿವಾವಲ್ಲಭಾ ೭೧

**ಟೀಕೆ :** ಈಕ್ಷಿಸೆ - ವಿಚಾರಿಸಲಾಗಿ, ಕೊಂಬವರ್ - ತೆಗೆದುಕೊಂಬವರು, ಪರರಲ್ಲ - ಅನ್ಯರಲ್ಲ, ಕುಡುವವರ್ - ಕೊಡುವಂಥ, ತಾವು - ಅನ್ಯರಲ್ಲ - ಬೇರಲ್ಲ, ಸ್ವಕೀಯರುರೇ - ಆ ತೆಗೆದುಕೊಂಬುವವರು ತಮ್ಮವರೇ, ಸತ್ಯಂ - ಯಥಾರ್ಥವು, ಬಳಿಕ - ಮರಳಿ, ಅಲ್ಲದಿರ್ದೊಡೆ - ಹಾಗಲ್ಲದಿರ್ದೊಡೆ, ಅಕಟಾ - ಅಯ್ಯೋ ! ಸ್ವಸ್ತ್ರೀಸುತಾರ್ಥಾದಿಯುಂ - ಸ್ವ - ತಮ್ಮ, ಸ್ತ್ರೀ - ಸ್ತ್ರೀಯು, ಸುತ - ಮಕ್ಕಳು, ಅರ್ಥ - ದ್ರವ್ಯವು, ಆದಿಯುಂ - ಮೊದಲಾದವರನ್ನು, ಪರರ್ಗೆ - ಅನ್ಯರಿಗೆ, ಕೊಟ್ಟವರುಂಟೆ - ಇತ್ತವರುಂಟೇನು ? ನೋಳ್ಪೊಡೆ - ವಿಚಾರಿಸಲಾಗಿ, ಆಪ್ಯರ್-ಸಿಂಧುಬಲ್ಲಾಳ ಚಿರುತೊಂಡ ಮೊನೆಯುಧರ ಮೊದಲಾದ ಶರಣರು, ನಿಜಸ್ತ್ರೀಪುತ್ರ ವಿತ್ತಾದಿಯುಂ - ತಮ್ಮ ಸತೀಸುತದ್ರವ್ಯ ಮೊದಲಾದುವನ್ನು, ಪರರ್ಗೆ - ಪರವಾದ ಗುರುಲಿಂಗಜಂಗಮಕ್ಕೆ, ಪರಂ - ಇಷ್ಟವಾಗಿ, ಅಂತಲ್ಲದೊಡೆ - ಹಾಂಗಲ್ಲದಿ ರ್ದೊಡೆ, ಸಲೆ - ಚೆನ್ನಾಗಿ, ಈವರೇ - ಕೊಡುವರೆ? ಕೊಡರು.

ಭಾವಾರ್ಥಬೋಧಿನಿ - ವಿಚಾರಿಸಿ ನೋಡಲಾಗಿ ಕೊಟ್ಟುದನ್ನು ತೆಗೆದು ಕೊಳ್ಳುವವರು ಅನ್ಯರಲ್ಲ. ದಾನ ಕೊಡುವವರೂ ಅನ್ಯರಲ್ಲ. ತೆಗೆದುಕೊಳ್ಳು ವವರೂ ಸ್ವಕೀಯರಾಗಿಯೇ ಇರುವರು. ಇದು ಸತ್ಯ. ಹೀಗಿಲ್ಲದ ಪಕ್ಷದಲ್ಲಿ ತಮ್ಮ ಸತಿಪುತ್ರಧನಾದಿಗಳನ್ನು ಅನ್ಯರಿಗೆ ಯಾರಾದರೂ ಕೊಟ್ಟವರಿರುವರೆ? ವಿಚಾರ ಮಾಡಲಾಗಿ ಪೂರ್ವದ ಸಿಂಧುಬಲ್ಲಾಳ ಮೊದಲಾದ ಶರಣರು ತಮ್ಮ

ಸತಿಸುತಧನಾದಿಗಳನ್ನು ಶ್ರೇಷ್ಠರಾದ ಗುರುಲಿಂಗಜಂಗಮರಿಗೆ ಪ್ರೀತಿಯಿಂದ ಕೊಡುತ್ತಿರ್ದರೇನು ? ಕೊಡರು. ಎಂದರೆ-ಗುರುಲಿಂಗಜಂಗಮರು ತಮ್ಮವರೆಂದು ತಿಳಿದುದರಿಂದಲೇ ಪ್ರೀತಿಯಿಂದ ಅವರಿಗೆ ಇಷ್ಟವಾದುದನ್ನರ್ಪಿಸಿರುವರೆಂದು ತಾತ್ಪರ್ಯ. ೭೧

## ಶಾರ್ದೂಲ ವಿಕ್ರೀಡಿತ ವೃತ್ತಂ

ಅನ್ಯರ್ಗನ್ಯಮನಿತ್ತು ತನ್ನೊಡವೆಯುಂ ಬೈಚಿಟ್ಟುಕೊಂಡಿರ್ಪವಂ
ಧನ್ಯಂ ಜಾಣ ನಹಂತೆಯುಂ ಮಮತೆಯುಂ ತಚ್ಛಬ್ದವಾಚ್ಯಾರ್ಥಮವ
ಪ್ಪನ್ಯಕ್ಕಿತ್ತುಳಿದಿರ್ದುದಂ ಕುಡವವಂ ತಚ್ಛಬ್ದವಾಚ್ಯಾರ್ಥಸಂ
ಪನ್ನಾನ್ಯಾತ್ಮಕನಪ್ಪ ಸತ್ಯಶರಣಂ ಲುಬ್ಧಂ ಶಿವಾವಲ್ಲಭಾ ೭೨

**ಟೀಕೆ :** ಅನ್ಯರ್ಗೆ - ಬೇರಾದ ಗುರುಲಿಂಗಜಂಗಮಕ್ಕೆ, ಅನ್ಯಮಂ - ಬೇರಾದ ಸತೀಸುತಾದಿ ದ್ರವ್ಯಂಗಳನ್ನು, ಇತ್ತು - ಕೊಟ್ಟು, ತನ್ನೊಡವೆಯುಂ - ಆತ್ಮದ್ರವ್ಯವನ್ನು, ಬೈಚಿಟ್ಟುಕೊಂಡಿರ್ಪವಂ - ಮಡಗಿಕೊಂಡಿರ್ಪಾತನು, ಧನ್ಯಂ - ಕೃತಾರ್ಥನಾದ ಉಪಾಧಿದಾನಸ್ಥನು, ತಚ್ಛಬ್ದವಾಚ್ಯಾರ್ಥಮಪ್ಪ - ಆ ಮಹಾಲಿಂಗ ಸ್ವರೂಪವಾದ, ಅನ್ಯಕ್ಕೆ - ಗುರುಲಿಂಗಜಂಗಮಕ್ಕೆ, ಅಹಂತೆಯುಂ - ನಾನೆಂಬು ದನ್ನು, ಮಮತೆಯುಂ - ಎನ್ನದೆಂಬುದನ್ನು, ಇತ್ತು - ಕೊಟ್ಟು, ಉಳಿದಿರ್ದುದಂ- ಉಳಿದಿರ್ದ ನಿರಹಂಭಾವವನ್ನು, ಕುಡವವಂ - ಕೊಡವಾತನು, ಜಾಣಂ - ಪ್ರೌಢ ನಾದ ನಿರುಪಾಧಿ ದಾನಸ್ಥನು, ತಚ್ಛಬ್ದವಾಚ್ಯಾರ್ಥ ಸಂಪನ್ನಾನ್ಯಾತ್ಮಕನಪ್ಪ - ತಚ್ಛ ಬ್ದವಾಚ್ಯಾರ್ಥಂ - ತಚ್ಛಬ್ದಕ್ಕೆ ವಾಚ್ಯಾರ್ಥವಾದ ಮಹಾಲಿಂಗದಲ್ಲಿ, ಸಂಪನ್ನ - ಐದಲ್ಪಟ್ಟ, ಅನ್ಯಾತ್ಮಕನಪ್ಪ - ಉಪಾಧಿನಿರುಪಾಧಿ ದಾನಸ್ಥರ್ಗಳಿಂ ಬೇರಾದ ಸ್ವರೂಪವನುಳ್ಳ, ಸತ್ಯಶರಣಂ - ಸಹಜದಾನಸ್ವರೂಪನಾದ ಶರಣನು, ಲುಬ್ಧಂ - ಲೋಭಿಯು, (ಸಾಮರಸ್ಯಭಾವಮಂ ಕೊಡದೆ ಸಹಜದಾನಸ್ಥನಾಗಿಪ್ಪುದರಿಂದೆ ಲೋಭಿಯೆಂಬುದರ್ಥಂ.)

**ಭಾವಾರ್ಥಬೋಧಿನಿ :** ತನಗಿಂತಲೂ ಬೇರೆಯಾಗಿರುವ ಗುರುಲಿಂಗ ಜಂಗಮರಿಗೆ ತನಗನ್ಯವಾದ ಸತೀಸುತಧನಾದಿಗಳನ್ನು ಕೊಟ್ಟು, ತನ್ನೊಡವೆಯಾದ

ಆತ್ಮರೂಪದ್ರವ್ಯವನ್ನು ಬೈಚಿಟ್ಟುಕೊಂಡಾತನು ಕೃತಾರ್ಥನು ಎಂದರೆ, ಉಪಾಧಿ ದಾನಸ್ಥನು. ಆ ಮಹಾಲಿಂಗಸ್ವರೂಪವಾದ ಗುರುಲಿಂಗಜಂಗಮಕ್ಕೆ ನಾನೆಂಬ ಮತ್ತು ನನ್ನದೆಂಬ ಅಹಂಕಾರಮಮಕಾರಗಳೆರಡನ್ನು ಅರ್ಪಿಸಿ ಉಳಿದಿರುವ ನಿರಹಂ ಭಾವವನ್ನು ಕುಡದವನು ಜಾಣನು. ಅವನೇ ನಿರುಪಾಧಿದಾನಸ್ಥನು. ಇನ್ನು ಸೋಪಾಧಿನಿರುಪಾಧಿದಾನಿಗಳಿಂ ಭಿನ್ನವಾಗಿ ಸಹಜದಾನಿಯೆನಿಸಿಕೊಂಡ ಶರಣನು ಮಾತ್ರ ಲೋಭಿಯಾಗಿರುವನು. ಎಂದರೆ ಶಿವಸ್ವರೂಪವೆಂದು ತಿಳಿದುಕೊಂಡಿರುವ ಶರಣನು ಶಿವನೊಡನೆ ತನಗುಂಟಾಗಿರುವ ಸಾಮರಸ್ಯಭಾವವನ್ನು ಯಾರಿಗೂ ಕೊಡದಿರುವುದರಿಂದ ಲೋಭಿಯಾಗಿರುವನೆಂದು ತಾತ್ಪರ್ಯ. ೭೨

**ವಿಚಾರ** : ದಾನದಲ್ಲಿ ಉಪಾಧಿದಾನ,(ಸಕಾಮ)ನಿರುಪಾಧಿದಾನ, (ನಿಷ್ಕಾಮ ದಾನ), ಸಹಜದಾನವೆಂದು ತ್ರಿವಿಧವಿರುವುದು. ಇದರಲ್ಲಿ ಸಹಜದಾನವೇ ಶರಣ-ಸಮ್ಮತವಾದುದೆಂದು ಅರಿಯಬೇಕು. (ಏಕೋತ್ತರಸ್ಥಲದ ಭಕ್ತಸ್ಥಲದಲ್ಲಿ ಈ ವಿಚಾರವು ವಿಸ್ತಾರವಾಗಿರುವುದು.)

**ಅವತಾರಿಕೆ : ಇಹಲೋಕ ಪರಲೋಕಂಗಳೆರಡೂ ಕ್ಷಯಿಷ್ಣುಗಳಾದ ನಿಮಿತ್ತವಾಗಿ ಅವಕ್ಕೆ ಕಾರಣವಾದ ಪುಣ್ಯಪಾಪಗಳೆಂಬ ದ್ವಂದ್ವಕರ್ಮಂಗಳು ಶರಣಂಗಿಲ್ಲವೆಂದು ಪೇಳುತ್ತಿರ್ದಪಂ.**

**ಮತ್ತೇಭವಿಕ್ರೀಡಿತಂ**

ಪರಲೋಕೈಹಿಕಲೋಕಕರ್ಮ ಕರಣವ್ಯಾಪಾರಮಾಯಾಮಯ
ಸ್ಫುರದಜ್ಞಾನವಿಮೋಹ ಕೈತವಫಲಾಕಾಂಕ್ಷಾವಿನಿರ್ಮುಕ್ತನು
ತ್ತರಸಮ್ಯಕ್ಛಿವಯೋಗ ಷಟ್ಸ್ಥಲಪರಬ್ರಹ್ಮೈಕಮಾರ್ಗಕ್ರಿಯಾ
ಚರಣಂ ಸಚ್ಚರಣಂ ಚಿದಾಭರಣನದ್ವಂದ್ವಂ ಶಿವಾವಲ್ಲಭಾ ೭೩

**ಟೀಕೆ :** ಸಚ್ಚರಣಂ - ಒಳ್ಳಿತಾದ ಶಿವಶರಣನು, ಪರ......ವಿನಿರ್ಮುಕ್ತಂ- ಪರಲೋಕ ಪರಲೋಕಕ್ಕೆ, ಐಹಿಕಲೋಕ - ಇಹಲೋಕಕ್ಕೆ, ಕರ್ಮ - ಸಾಧನ ವಪ್ಪಪುಣ್ಯಪಾಪರೂಪವಾದ ಕರ್ಮವ, ಕರಣ – ಮಾಡುವುದರಲ್ಲಿ, ವ್ಯಾಪಾರ -

ಸಂಚಾರದಿಂದ, ಮಾಯಾಮಯ - ಮಾಯಾಸ್ವರೂಪವಾಗಿ, ಸ್ಫುರತ್ - ಪ್ರಕಾಶಿಸುತ್ತಿರ್ಪ, ಅಜ್ಞಾನ - ಅಜ್ಞಾನದಿಂದಲಾದ, ವಿಮೋಹ - ಮರವೆಯೊಡನೆಕೂಡಿದ, ಕೈತವ - ಕಪಟವಾದ, ಫಲ - ಫಲದ, ಕಾಂಕ್ಷಾ – ಅಪೇಕ್ಷೆಯಿಂದ, ವಿನಿರ್ಮುಕ್ತ-ಬಿಡಲ್ಪಟ್ಟಾತನು, ಈ ಅರ್ಥದಲ್ಲಿ—

"ಕರ್ಮಜಿತೋಲೋಕಃ ಕ್ಷೀಯತೇಪುಣ್ಯಜಿತೋಲೋಕಃ ಕ್ಷೀಯತೇ"

ಎಂದು ಛಾಂದೋಗ್ಯೋಪನಿಷತ್ತುಂಟಾಗಿ, ಉತ್ತ......ಕ್ರಿಯಾಚರಣಂ - ಉತ್ತರ-ಎಲ್ಲವಕ್ಕೂ ಮೇಲಾದ, ಸಮ್ಯಕ್ - ಚೆನ್ನಾದ, ಶಿವಯೋಗ - ಶಿವಸಾಮರಸ್ಯ ಪ್ರತಿಪಾದಕವಾದ, ಷಟ್ಸ್ಥಲವೆಂಬ, ಪರಬ್ರಹ್ಮ - ಉತ್ಕೃಷ್ಟನಾದ ಬ್ರಹ್ಮನಲ್ಲಿಯ, ಏಕ - ಮುಖ್ಯವಾದ, ಮಾರ್ಗ - ಆಚರಣೆಯಲ್ಲಿ, ಕ್ರಿಯಾ - ವ್ಯಾಪಾರದ, ಆಚರಣಂ-ಆಚರಣೆಯುಳ್ಳಾತನು, ಚಿದಾಭರಣಂ-ಜ್ಞಾನವೇ ಅಲಂಕಾರವುಳ್ಳಾತನು, ಅದ್ವಂದ್ವಂ-ದ್ವಂದ್ವದುಃಖಗಳಿಲ್ಲದಾತನು. ೭೩

ಭಾವಾರ್ಥಬೋಧಿನಿ : ಸಚ್ಚರಿತನಾಗಿ ಶಿವಜ್ಞಾನವೇ ಅಲಂಕಾರವಾಗುಳ್ಳ ಶರಣನು ಇಹಪರಲೋಕಗಳ ಫಲಕ್ಕೆ ಸಾಧ್ಯವಾದ ಪುಣ್ಯಾಪುಣ್ಯಮಯ ಕರ್ಮ-ಗಳನ್ನು ಆಚರಿಸುವ ವ್ಯವಹಾರದಿಂದ ಲಭಿಸಿದ ಮಾಯಾಮಯದ ಅಜ್ಞಾನದಿಂದುಂಟಾದ ಮರವೆಯೊಡನೆ ಕೂಡಿದ ಕಪಟರೂಪಫಲಾಕಾಂಕ್ಷೆಯಿಂದ ಬಿಡ-ಲ್ಪಟ್ಟವನಾಗಿರುವನು. ಮತ್ತು ಎಲ್ಲವುಗಳಿಗೂ ಮಿಗಿಲಾದ ಸುಂದರ ಶಿವಸಾಮರಸ್ಯ ಪ್ರತಿಪಾದಕವಾದ ಷಟ್‌ಸ್ಥಲಪರಬ್ರಹ್ಮಮಾರ್ಗದ ಕ್ರಿಯಾಚರಣೆಯುಳ್ಳಾತನಾಗಿ ದ್ವಂದ್ವದುಃಖಗಳಿಲ್ಲದಾತನಾಗಿರುವನು. ೭೩

## ಮತ್ತೇಭವಿಕ್ರೀಡಿತಂ

ಮೊದಲಿಲ್ಲೆಂದೆಲೆ ಕರ್ಮಮಂ ಬರಿದೆ ಮತ್ತುಂಟೆಂದು ಮತ್ತಂ ತದ
ಕ್ಕಿದುಪಾಯಂ ಪರಿಹಾರಮೆಂದು ಬರಿದೊಂದಂಮಾಡಿ ಮತ್ತಾಗಳಂ
ತದುಹೋಯಿತ್ತು ವಿಮುಕ್ತರೆಂದು ಬರಿದೇ ತಮ್ಮಲ್ಲಿ ತಾವೇ ವಿಮೋ
ಹದ ಸಂಕಲ್ಪದ ಕರ್ಮಿಗಳ್ಗಳಹುವರ್ನೋಡಾ ಶಿವಾವಲ್ಲಭಾ ೭೪

**ಟೀಕೆ :** ಬರಿದೆ - ಸುಮ್ಮನೆ, ಕರ್ಮಮಂ – ಕರ್ಮವನ್ನು, ಮೊದಲ್-ಮುನ್ನೆ, ಇಲ್ಲೆಂದು - ಇಲ್ಲವೆಂದು, ಮತ್ತೆ - ಮರಳಿ, ಉಂಟು - ಒಳವು, ಎಂದು-ಹೀಗೆಂದು, ಮತ್ತೆ - ಮರಳಿ, ಅಂತು - ಹಾಗೆ, ಅದಕ್ಕೆ, ಇದು - ಇದುತಾನು ಉಪಾಯಂ - ಮಾರ್ಗವೆಂದು, ಪರಿಹಾರವೆಂದು - ಪ್ರಾಯಶ್ಚಿತ್ತವೆಂದು, ಬರಿದೆ - ಸುಮ್ಮನೆ, ಒಂದಂಮಾಡಿ - ಏನಾದಡೆಯೂ ಒಂದು ಕೃತ್ಯವಂಮಾಡಿ, ಮತ್ತೆ - ಮರಳಿ, ಆಗಳ್ - ಆಗ, ಅಂತು - ಹಾಂಗೆ, ಅದು, ಹೋಯಿತ್ತು-ಪೋದುದು, ವಿಮುಕ್ತರ್ ಎಂದು - ಇನ್ನು ಪಾಪಗಳಿಂದಬಿಡಲ್ಪಟ್ಟವರೆಂದು, ಬರಿದೆ - ಸುಮ್ಮನೆಯೇ, ತಮ್ಮಲ್ಲಿ ತಾವೆ - ತಮ್ಮೊಳ್ತಾವೇ, ವಿಮೋಹದ - ಅಜ್ಞಾನದ, ಸಂಕಲ್ಪದ - ಸಂದೇಹದ, ಕರ್ಮಿಗಳ್ - ಕರ್ಮನಿಷ್ಠರು, ಗಳಹುವರ್-ಬಗುಳುತ್ತಿರ್ಪರು. ೭೪

**ಭಾವಾರ್ಥಬೋಧಿನಿ :** ಶಿವಾವಲ್ಲಭನೆ, ಸುಮ್ಮಸುಮ್ಮನೆ ಮೊದಲು ಕರ್ಮವಿಲ್ಲೆಂದೂ, ಆಮೇಲೆ ಕರ್ಮವಿರುವುದೆಂದೂ, ಆ ಕರ್ಮಕ್ಕೆ ಇದು ಉಪಾಯವೆಂದೂ, ಇದು ಪ್ರಾಯಶ್ಚಿತ್ತವೆಂದೂ ಹೇಳಿ, ಏನಾದರೊಂದು ಕೃತಿಯನ್ನು ವ್ಯರ್ಥವಾಗಿಮಾಡಿ, ಆ ಕರ್ಮದೋಷವು ಹೋದುದು ಆದುದರಿಂದ ನಾವು ಕರ್ಮಮುಕ್ತರೆಂದು ತಮ್ಮಲ್ಲಿ ತಾವೇ ಗಳಹುತ್ತಿರುವರು ಅಜ್ಞಾನಜನ್ಯ ಸಂದೇಹಗಳುಳ್ಳ ಕರ್ಮನಿಷ್ಠರು. ೭೪

## ಮತ್ತೇಭವಿಕ್ರೀಡಿತಂ

ಮೊದಲೊಳ್ ಪುಣ್ಯಮನಂತರಂ ಬಳಿಕೆ ಪಾಪಂ ಪುಣ್ಯಮೇ ನೋಡೆ ಪಾ
ಪವಮೂಲಂ ಪರಿಹಾರಮುಂಟೆ ಬರಿದೇ ಪಾಪಕ್ಕೆ ಬೇರೊಂದು ಮಾ
ಟದಿ ನಾಪುಣ್ಯಮನಾಹಮಾಡದಿಹುದೇ ತನ್ಮೂಲ ಪಾಪಕ್ಕೆ ಕೇ
ಳಮ ತಾನೇ ಪರಿಹಾರಮೆನ್ನೈಸೆ ಪುಸಿ ಮತ್ತೆಲ್ಲಂ ಶಿವಾವಲ್ಲಭಾ ೭೫

**ಟೀಕೆ :** ಮೊದಲೊಳ್ - ಮೊದಲಲ್ಲಿ, ಪುಣ್ಯಂ - ಪುಣ್ಯವು, ಅನಂತರಂ-ಅಗಲದುದು. ("ಭಿನ್ನಾತ್ಮೀಯಯವಿನಾಬಹಿಃ" ಎಂಬನಂತರ ಶಬ್ದಕ್ಕೆವುಂಟು.) ಬಳಿಕೆ-ಮರಳಿ, ಪಾಪಂ-ಪಾಪವು, ನೋಡೆ - ವಿಚಾರಿಸಲಾಗಿ ಪುಣ್ಯಮೆ - ಪುಣ್ಯತಾನ

ಪಾಪದ ಮೂಲಂ - ಪಾಪಕ್ಕೆ ಮೊದಲು, ಬರಿದೇ - ಸುಮ್ಮನೆ, ಪಾಪಕ್ಕೆ - ದುಷ್ಕೃತ್ಯಕ್ಕೆ, ಪೇರೊಂದು ಮಾಟದಿಂ - ಮತ್ತೊಂದು ಕೃತ್ಯದಿಂದ, ಪರಿಹಾರಂ ಉಂಟೆ-ಪ್ರಾಯಶ್ಚಿತ್ತವುಂಟೆ, ಇಲ್ಲ. ಆ ಪುಣ್ಯಮಂ - ಆ ಸುಕೃತವನ್ನು, ಮಾಡದಿಹುದೆ-ಮಾಡದೆಯಿರ್ಪುದೇ, ಪಾಪಕ್ಕೆ - ಆ ದುಷ್ಕೃತ್ಯ ಕೆಡುವುದಕ್ಕೆ, ತನ್ಮೂಲಂ - ಆ ಪುಣ್ಯವ ಮಾಡದಿರ್ಪುದೇ ಮುಖ್ಯವು, ಅದುತಾನೆ - ತಾನದೇ, ಪರಿಹಾರವೈಸೆ - ಪ್ರಾಯಶ್ಚಿತ್ತಮಪ್ಪೇ ? ಮತ್ತಿಲ್ಲಂ - ಉಳಿದುದೆಲ್ಲವೂ, ಪುಸಿ - ಸಟೆ, ಆಹ - ಆಶ್ಚರ್ಯವು.

**ಭಾವಾರ್ಥಬೋಧಿನಿ** - ಶಿವಾವಲ್ಲಭನೆ, ಮೊದಲು ಪುಣ್ಯವು ಪ್ರಾಪ್ತವಾದಲ್ಲಿ ಅದರ ಹಿಂದೆಯೇ ಪಾಪವು ಸಂಘಟಿಸುವುದು ಎಂದರೆ-ಪುಣ್ಯವನ್ನು ಭೋಗಿಸುವ ಸಮಯದಲ್ಲಿಯೇ ಅದು ಪಾಪಕ್ಕೆ ದಾರಿಮಾಡಿಕೊಡುವುದು. ಆದುದರಿಂದ ವಿಚಾರಮಾಡಿ ನೋಡಿದರೆ, ಪುಣ್ಯವೇ ಪಾಪದ ಮೂಲವಾಗಿರುವುದು. ಸುಮ್ಮ ಸುಮ್ಮನೆ ಯಾವುದಾದರೊಂದು ಕೃತ್ಯವನ್ನು ಮಾಡಿ, ಅದು ಪ್ರಾಯಶ್ಚಿತ್ತವೆಂದುಕೊಂಡರೆ, ಪಾಪಪರಿಹಾರವಾಗುವುದುಂಟೆ ? ಇನ್ನು ಪುಣ್ಯವನ್ನು ಮಾಡದಿರುವುದೇ ಪಾಪಕ್ಕೆ ಪರಿಹಾರವಲ್ಲದೆ ಉಳಿದ ಪ್ರಾಯಶ್ಚಿತ್ತ ಕೃತಿಯೆಂಬುದು ಸುಳ್ಳು. ೭೫

**ಮತ್ತೇಭವಿಕ್ರೀಡಿತಂ**

> ಫಲಕಾಮತ್ವವೆ ಪುಣ್ಯಕರ್ಮರತಿಯಾಪುಣ್ಯಕ್ರಿಯಾಲಬ್ಧತ
> ತ್ಫಲವೇ ಭೋಗವಿಶೇಷವಾವಿವಿಧಭೋಗಾಸಕ್ತಿಯೇ ದುರ್ಮದಂ
> ಸಲೆತದ್ದುಷ್ಟಮದಾಂಧವೃತ್ತಿಯೆ ಕಣಾ ಪಾಪಂ ತದಂತಂ ಕಣಾ
> ಫಲಕಾಮಾನ್ವಿತ ಪುಣ್ಯ ಕರ್ಮಕರಣಾಭಾವಂ ಶಿವಾವಲ್ಲಭಾ ೭೬

**ಟೀಕೆ :** ಫಲಕಾಮತ್ವವೇ - ಫಲವಬಯಸುವತನವೇ, ಪುಣ್ಯಕರ್ಮರತಿ - ಪುಣ್ಯ ವ್ಯಾಪಾರದಲ್ಲಿ ಪ್ರೀತಿಯು, ಆ ಪುಣ್ಯ ಕ್ರಿಯಾಲಬ್ಧ ತತ್ಫಲವೇ - ಆ ಪುಣ್ಯ ಕ್ರಿಯಾ - ಆ ಪುಣ್ಯಕರ್ಮದಿಂದ, ಲಬ್ಧ - ಪಡೆಯಲ್ಪಟ್ಟ, ತತ್ಫಲವೇ - ಅದರ ಫಲವೇ, ಭೋಗ ವಿಶೇಷಂ - ಭೋಗವಿಶೇಷವು, ಆ ವಿವಿಧ ಭೋಗಾಸಕ್ತಿಯೇ - ಆ ಹಲವು ಪ್ರಕಾರವಾದ ಭೋಗದಪೇಕ್ಷೆಯೇ, ದುರ್ಮದಂ - ಕೆಟ್ಟ ಮದವು, ತದ್ದುಷ್ಟಮದಾಂಧವೃತ್ತಿಯೇ - ಆ ದುಷ್ಟವಾದ ಮದದಲ್ಲಿ ಕಂಗಾಣದಿರ್ಪುದೇ,

ಸಲೆ - ಚೆನ್ನಾಗಿ, ಪಾಪಂ ಕಣಾ - ಪಾಪವಲಾ ? ತದಂತಂ - ಆ ಪಾಪಕ್ಕೆ ನಾಶವು, ಫಲಕಾಮಾನ್ವಿತ ಪುಣ್ಯ ಕರ್ಮಕರಣಾಭಾವಂಕಣಾ - ಫಲಕಾಮ - ಫಲದ ಬಯಕೆ ಯೊಡನೆ, ಅನ್ವಿತ - ಕೂಡಿದ, ಪುಣ್ಯಕರ್ಮ - ಪುಣ್ಯ ವ್ಯಾಪಾರದ, ಕರಣಾಭಾವಂ ಕಣಾ - ಮಾಡದಿರ್ಪುದೆಯಲಾ ?

**ಭಾವಾರ್ಥ ಬೋಧಿನಿ :** ಈ ಪದ್ಯದಲ್ಲಿ ಪುಣ್ಯವು ಹೇಗೆ ಪಾಪಮೂಲವಾಗು ವುದೆಂಬುದನ್ನೇ ವಿವರಿಸುವನು.

ಮೊದಲು ಮನುಷ್ಯನಲ್ಲಿ ಯಾವುದಾದರೊಂದು ಫಲದ ಅಪೇಕ್ಷೆಯುಂಟಾಗು ವುದು. ಬಳಿಕ ಆ ಫಲಪ್ರಾಪ್ತಿಗೆ ಕಾರಣವಾದ ಪುಣ್ಯವನ್ನು ಮಾಡುವುದರಲ್ಲಿ ಪ್ರೀತಿಯುಂಟಾಗುವುದು. ಆ ಪುಣ್ಯವನ್ನು ಮಾಡಿದುದರಿಂದ ಲಭಿಸಿದ ಫಲವೇ ಭೋಗವಿಶೇಷವೆನಿಸುವುದು. ಆ ವಿವಿಧ ಭೋಗದಲ್ಲಿರುವ ಆಸಕ್ತಿಯೇ ದುರ್ಮದ ವಾಗಿ ಪರಿಣಮಿಸುವುದು. ಆ ದುರ್ಮದದಲ್ಲಿ ಕಣ್ಗೆಟ್ಟು ವರ್ತಿಸುವುದೇ ಪಾಪ ಮಾರ್ಗವಾಗುವುದಲ್ಲವೆ ? ಇದರಿಂದ ಪುಣ್ಯವೇ ಪಾಪಕ್ಕೆ ಮೂಲವಾಗುವುದೆಂದು ಗೊತ್ತಾಗುವುದು. ಆದುದರಿಂದ ಫಲಾಪೇಕ್ಷೆಯಿಂದ ಪುಣ್ಯವನ್ನು ಮಾಡದಿರುವುದೇ ಪಾಪಕ್ಕೆ ಪರಿಹಾರವೆನಿಸುವುದು.

## ಮತ್ತೇಭವಿಕ್ರೀಡಿತಂ

ಕ್ರಮದಿಂ ನೋಳ್ಪೊಡೆ ಪುಣ್ಯಪಾಪ ಸುಖದುಃಖಸ್ವರ್ಗದೌರ್ಗತ್ಯಪಾ
ರಮತಂ ತದ್ವಿಪರೀತಮಾವಮತಮೆಲ್ಲಿಂತಾಗಿ ತಾನೀಗ ಮೊ
ತ್ತಮೊದಲ್ಪುಣ್ಯ ಮದುಳ್ಳೊಡುಂಟು ತರುವಾಯಿಂ ದ್ವಂದ್ವಮೆಲ್ಲಂ ವೃಥಾ
ಭ್ರಮೆಯೇಕಯ್ಯ ಮೊದಲ್ಕಿಡಲ್ಕಿಡುಗುಮಾಲಾಭಂ ಶಿವಾವಲ್ಲಭಾ ೭೭

**ಟೀಕೆ :** ಪುಣ್ಯ......ಪಾರಮತಂ, ಪುಣ್ಯಪಾಪ - ಸುಕೃತದುಷ್ಕೃತಂಗಳ, ಸುಖದುಃಖಹರ್ಷಶೋಕಂಗಳ ಸ್ವರ್ಗದೌರ್ಗತ್ಯ - ಸ್ವರ್ಗ ನರಕಂಗಳ, ಪಾರ - ಕಡೆಯ, ಮತಂ - ಸ್ವರೂಪವು, ಕ್ರಮದಿಂ - ಪರಿವಿಡಿಯಿಂದೆ, ನೋಳ್ಪೊಡೆ - ವಿಚಾರಿಸಲಾಗಿ, ತಾನೀಗ - ಇದು ತಾನು, ಮೊತ್ತಮೊದಲ್ - ಮೊದಲಲ್ಲಿ, ಪುಣ್ಯಮ ದ್ದುಳ್ಳೊಡೆ - ಪುಣ್ಯ ತಾನುಂಟಾದೊಡೆ, ತರುವಾಯಿಂ - ಪರಿವಿಡಿಯಿಂದ, ದ್ವಂದ್ವ ಮೆಲ್ಲಂ - ಈ ಪೇಳ್ದದ್ವಂದ್ವದುಃಖಂಗಳೆಲ್ಲವೂ, ಉಂಟು - ಒಳವು, ತದ್ವಿಪರೀತ

ವಾದ, ತತ್ - ಆ ಪುಣ್ಯಪಾಪಾದಿಗಳ್ಗೆ, ವಿಪರೀತವಾದ - ಪುಣ್ಯಕೆಟ್ಟೊಡೆ ಎಲ್ಲವೂ ಕೆಡುವವೆಂಬ, ಮತಂ - ಇಷ್ಟವು, ಎಲ್ಲಂ - ಎಲ್ಲವೂ, ಅಂತಾಗಿ - ಅದುಕಾರಣವಾಗಿ ವೃಥಾಭ್ರಮೆಯೇಕಯ್ಯ - ವ್ಯರ್ಥವಾದ ಭ್ರಮೆಯಾತಕ್ಕಯ್ಯ ? ಇಲ್ಲವೆಂದರ್ಥ. (ಇಲ್ಲಿ ಅರ್ಥಾಂತರನ್ಯಾಸವು, ಎಂತೆಂದೊಡೆ) ಮೊದಲ್‌ಕಿಡಲ್ - ಮೂಲ್ಯಕೆಟ್ಟೊಡೆ, ಆ ಲಾಭಂ - ಅದರಿಂದ ಬರ್ಪ ಆದಾರ್ಯವೂ, ಕಿಡುಗುಂ - ಕೆಟ್ಟು ಪೋಪುದು.

**ಭಾಷಾರ್ಥಬೋಧಿನಿ** : ಪುಣ್ಯಪಾಪಗಳು, ಸುಖದುಃಖಗಳು, ಸ್ವರ್ಗನರಕ ಗಳು-ಇವೆಲ್ಲವುಗಳ ಸ್ವರೂಪವನ್ನು ಕ್ರಮದಿಂದ ವಿಚಾರಿಸಿ ನೋಡಲಾಗಿ - ಇವೆಲ್ಲವು ಗಳಿಗೆ ಮೊತ್ತಮೊದಲು ಪುಣ್ಯವೊಂದನ್ನು ಮಾಡಲಪೇಕ್ಷಿಸಿದರೆ ಅದರಿಂದ ಮೇಲೆ ಹೇಳಿದ ದ್ವಂದ್ವ ದುಃಖಂಗಳೆಲ್ಲವೂ ಕ್ರಮವಾಗಿ ಸಂಭವಿಸುವವು. ಎಲ್ಲಕ್ಕೂ ಮೂಲವಾದ ಆ ಪುಣ್ಯವೇ ಇಲ್ಲದಿದ್ದರೆ ಯಾವ ದ್ವಂದ್ವ ದುಃಖವೂ ಇಲ್ಲ. ಮೂಲ ಧನವೇ ಕೆಟ್ಟರೆ ಲಾಭವೂ ಕೆಡುವುದೆಂಬುದು ಲೋಕಪ್ರಸಿದ್ಧವಲ್ಲವೆ ? ಈ ವಿಚಾರ ದಿಂದ ಕರ್ಮಮಾಡುವ ಭ್ರಮೆ ಏಕೆ ? ಅದು ವ್ಯರ್ಥವೆಂದು ತಾತ್ಪರ್ಯ. ೭೭

**ಮತ್ತೇಭವಿಕ್ರೀಡಿತಂ**

ಶುಭಕರ್ಮಾಶುಭಕರ್ಮಮೆಂದು ಯುಗಳಂ ಜ್ಞಾನಪ್ರಸಾದಾಖ್ಯಮೆಂ
ದುಭಯಂ ಕರ್ಮಮದಿಂತು ನಾಲ್ಕುತೆರನಾಕರ್ಮಕ್ಕೆ ತತ್ತದ್ವಿಧಿ
ಪ್ರಭವಂ ತಾನೆನಿಪಾ ಪ್ರಸಿದ್ಧಫಲಮಾಗಸ್ವರ್ಗದೌರ್ಗತ್ಯ ಮೋ
ಕ್ಷಭವಧ್ವಂಸಿನಿ ಭಕ್ತಿಯಿಂದಿದು ಚತುರ್ಭೇದಂ ಶಿವಾವಲ್ಲಭಾ ೭೮

**ಟೀಕೆ** : ಶುಭಕರ್ಮಾಶುಭಕರ್ಮಮೆಂದು - ಪುಣ್ಯಪಾಪಕರ್ಮಂಗಳೆಂದು, ಯುಗಳಂ - ಎರಡು, ಜ್ಞಾನಪ್ರಸಾದಾಖ್ಯಮೆಂಮು - ಜ್ಞಾನಪ್ರಸಾದವೆಂಬ ಹೆಸರು ಳ್ಳವೆಂದು, ಉಭಯಂ - ಎರಡು, ಇಂತು - ಈ ತೆರದಿಂದೆ, ಕರ್ಮಮದು-ಕರ್ಮ ತಾನು, ನಾಲ್ಕು ತೆರಂ - ನಾಲ್ಕುವಿಧವು, ಆ ಕರ್ಮಕ್ಕೆ - ನಾಲ್ಕು ವಿಧವಾದ ಕರ್ಮಕ್ಕೆ, ತತ್ತದ್ವಿಧೀಪ್ರಭವಂ - ತತ್ತದ್ವಿಧಿ-ಆಯಾ ಕರ್ಮಗಳ ವಿಧಿಯತ್ತಣಿಂದಿಂ ಪ್ರಭವಂ-ಹುಟ್ಟಿದುದು, ತಾಂ, ಎನಿಸುವ, ಆ ಪ್ರಸಿದ್ಧಫಲಮಾಗ - ಆ ಪ್ರಕಟವಾದ ಫಲವು ತಾನು, ಸ್ವರ್ಗದೌರ್ಗತ್ಯ ಮೋಕ್ಷಭವಧ್ವಂಸಿನಿ - ಸ್ವರ್ಗ - ಸ್ವರ್ಗವು, ದೌರ್ಗತ್ಯ - ನರಕವು, ಮೋಕ್ಷ - ಕರ್ಮಬಂಧಮೋಚನವು, ಭ ವ ಧ್ವಂ ಸಿ ನಿ -

ಸಂಸಾರವ ಕೆಡಿಸುವಂಥ, ಭಕ್ತಿಯೆಂದು - ಭಕ್ತಿತಾನೆಂದು, ಇದು - ಈ ಫಲವು, ಚತುರ್ಭೇದಂ - ನಾಲ್ಕು ವಿಧವು. ಈ ಅರ್ಥದಲ್ಲಿ—

"ಪಾಪಾನ್ನರಕಃ ಪುಣ್ಯಾತ್ಸ್ವರ್ಗಸ್ತಾಭ್ಯಾಂ ವಿನೈವಕರ್ಮಭ್ಯಾಂ
ಜ್ಞಾನಂ ಮೋಕ್ಷಸ್ತ್ರೈಸ್ತ್ರಿಭಿರೆವವಿನಾಸ್ಯಾತ್ಪ್ರಸಾದತೋ ಭಕ್ತಿಃ"

ಎಂದುಂಟು.

**ಭಾವಾರ್ಥಬೋಧಿನಿ :** ಕರ್ಮವು ಪುಣ್ಯಕರ್ಮ, ಪಾಪಕರ್ಮ, ಜ್ಞಾನ ಕ್ರಿಯೆ, ಪ್ರಸಾದಕ್ರಿಯೆಯೆಂದು ೪ ವಿಧ. ಈ ನಾಲ್ಕು ವಿಧ ಕರ್ಮದ ಆಚರಣೆಯಿಂದ ಕ್ರಮವಾಗಿ - ಎಂದರೆ ಪುಣ್ಯಕರ್ಮದಿಂದ ಸ್ವರ್ಗವೂ, ಪಾಪಕರ್ಮದಿಂದ ನರಕವೂ ಜ್ಞಾನಕ್ರಿಯೆಯಿಂದ ಕರ್ಮಬಂಧವಿಮೋಚನವೂ, ಪ್ರಸಾದಕ್ರಿಯೆಯಿಂದ ಭವ ಧ್ವಂಸಿನಿಯಾದ ಭಕ್ತಿಯೂ ಫಲರೂಪವಾಗಿ ಸಂಭವಿಸುವವು. (ಇಲ್ಲಿ ಶರಣರು ಪ್ರಸಾದಕ್ರಿಯೆಯನ್ನೇ ಆಚರಿಸುವರೆಂಬುದನ್ನು ಗ್ರಹಿಸಬೇಕು) ೭೮

**ಶಾರ್ದೂಲ ವಿಕ್ರೀಡಿತ ವೃತ್ತಂ**

ಪಾಪಂಗೆಯ್ಯದೆ ಸುಮ್ಮನಿರ್ಪುದದು ತಾನೇ ಪುಣ್ಯಕರ್ಮಂಮಗು
ಳ್ದಾ ಪುಣ್ಯಕ್ರಿಯೆಗೆಯ್ಯದಿರ್ಪುದದು ತಾನೇ ಪಾಪಮಂತಾಗಿನಿ
ರ್ಲೇಪತ್ವಂ ಪುಸಿಪುಣ್ಯಪಾಪಯುಗ ಮನ್ಯೋನ್ಯಾಶ್ರಿತಂ ಭಕ್ತಿಯೋ
ಗೋಪಾಯಂ ಸುಲಭಂ ಸುಖಪ್ರದಮೆ ನಿರ್ಲೇಪಂ ಶಿವಾವಲ್ಲಭಾ ೭೯

**ಟೀಕೆ :** ಪಾಪಂಗೆಯ್ಯದೆ - ಪಾಪವಮಾಡದೆ, ಸುಮ್ಮನಿರ್ಪುದು - ಸುಮ್ಮನೆ ಇರ್ಪುದು, ಅದುತಾನೇ - ತಾನದೇ, ಪುಣ್ಯಕರ್ಮಂ - ಸುಕೃತಕರ್ಮವು, ಮಗುಳ್ದು - ಮರಳಿ, ಆ ಪುಣ್ಯಕ್ರಿಯೆಗೆಯ್ಯದಿರ್ಪುದು - ಆ ಪುಣ್ಯವ್ಯಾಪಾರವ ಮಾಡದಿರುವುದು, ಅದುತಾನೇ - ತಾನದೇ, ಪಾಪಂ - ದುಷ್ಕೃತವು, ಪುಣ್ಯಪಾಪಯುಗಂ - ಪುಣ್ಯ ಪಾಪಂಗಳೆರಡು, ಅನ್ಯೋನ್ಯಾಶ್ರಿತಂ - ಒಂದನೊಂದು ಬಿಡದಿರ್ಪುದು, ಅಂತಾಗಿ- ಅದು ಕಾರಣವಾಗಿ, ನಿರ್ಲೇಪತ್ವಂ - ಪುಣ್ಯಪಾಪಲೇಪವಿಲ್ಲೆಂದು ಪೇಳ್ವುದು, ಪುಸಿ- ಎಲೆ ಕರ್ಮವಾದೀ ಅದುಸಟಿ, ಭಕ್ತಿಯೋಗೋಪಾಯಂ - ಭಕ್ತಿಯೋಗವೆಂಬ ಉಪಾಯವು, ಸುಲಭಂ - ಸುಲಭವಾಮುದಾಗಿ, ಸುಖಪ್ರದಮೆ - ಸುಖವಕೊಡು ವುದೇ, ನಿರ್ಲೇಪಂ - ಪುಣ್ಯಪಾಪಲೇಪವಿಲ್ಲದುದು. ೭೯

**ಭಾವಾರ್ಥಬೋಧಿನಿ :** ಪಾಪವನ್ನು ಮಾಡದೆ ಸುಮ್ಮನಿರುವುದೇ ಪುಣ್ಯವು. ಮತ್ತು ಪುಣ್ಯವನ್ನು ಆಚರಿಸದೆ ಸುಮ್ಮನಿರುವುದೇ ಪಾಪವು. ಪುಣ್ಯಪಾಪಗಳೆರಡೂ ಒಂದನ್ನೊಂದು ಬಿಡದೆ ಕೂಡಿರುವವು. ಆದುದರಿಂದ ಕರ್ಮವಾದಿಯು ತನಗೆ ಪುಣ್ಯಪಾಪ ಲೇಪವಿಲ್ಲೆಂದು ಹೇಳುವುದು ಸುಳ್ಳಾಗುವುದು. ಇನ್ನು ಭಕ್ತಿಯೋಗದ (ಲಿಂಗಾಂಗಸಾಮರಸ್ಯದ) ಆಚರಣೆಯೇ ಸುಲಭವೂ ಸುಖಪ್ರದವೂ ಪುಣ್ಯಪಾಪ ಲೇಪರಹಿತವೂ ಆಗಿರುವುದು. ೭೯

**ಮತ್ತೇಭವಿಕ್ರೀಡಿತಂ**

ಅವನುತ್ಕೃಷ್ಟವಿಶಿಷ್ಟ ಪುಣ್ಯಚರಿತಂ ಯತ್ತತ್ಫಲಾಕಾಂಕ್ಷೆಯುಂ
ಸವಿದುತ್ತಾಗಿಯೆ ನುಂಗಿನೀರ್ಗುಡಿದು ನಿಶ್ಚಿಂತಂ ನಿರೀಹಂ ಬಳಿ
ಕ್ಕವನೇ ಕಷ್ಟನಿಕೃಷ್ಟಪಾಪಚರಿತಂ ಮಿಕ್ಕಾದವಂ ಕಾಂಕ್ಷೆಯಿಂ
ಭವಬಂಧಕ್ಕುರೆ ಮಾರುವೋದ ಕೃತಪುಣ್ಯಂ ಕೇಳ್ಶಿವಾವಲ್ಲಭಾ ೮೦

**ಟೀಕೆ :** ಯತ್ತತ್ಫಲಾಕಾಂಕ್ಷೆಯುಂ - ಯತ್ - ಆವುದಾನೊಂದು ಫಲಾಕಾಂಕ್ಷೆಯುಂಟು, ತತ್ಫಲಾಕಾಂಕ್ಷೆಯುಂ - ಆಫಲಾಪೇಕ್ಷೆಯುನ್ನು, ಸವಿದುತ್ತಾಗಿಯೆ- ಸವಿಯುಳ್ಳ ತುತ್ತಾಗಿಯೇ, ನುಂಗಿ, ನೀರ್ಗುಡಿದು - ಉದಕಪಾನವಂ ಮಾಡಿ, (ಆ ಫಲಾಕಾಂಕ್ಷೆಯುಂ ನಿರ್ಮೂಲವಂ ಮಾಡಿಯೆಂಬುವರ್ಥ.) ನಿಶ್ಚಿಂತಂ - ಚಿಂತೆಯಿಲ್ಲದಾತನಾಗಿ, ನಿರೀಹಂ - ನಿಸ್ಪೃಹನಾಗಿರ್ಪಂ, ಅವನೇ - ಆತನೇ, ಉತ್ಕೃ.... ಚರಿತಂ - ಉತ್ಕೃಷ್ಟ, ವಿಶಿಷ್ಟ - ಉತ್ತಮೋತ್ತಮವಾದ, ಪುಣ್ಯಚರಿತಂ - ಪವಿತ್ರ ಚರಿತ್ರವನುಳ್ಳಾತನು, ಬಳಿಕ – ಮರಳಿ, ಮಿಕ್ಕಾದ - ಉಳಿದಂಥ, ಕಾಂಕ್ಷೆಯಿಂ- ಫಲಾಕಾಂಕ್ಷೆಯಿಂದೆ, ಭವಬಂಧಕ್ಕೆ - ಸಂಸಾರಬಂಧಕ್ಕೆ, ಉರೆ - ಚೆನ್ನಾಗಿ, ಮಾರುವೋದ - ವಿಕ್ರಯಕ್ಕೆಸಂದ, ಕೃತಪುಣ್ಯಂ - ಆ ಪುಣ್ಯವಂತನು, ಅವಂ - ಆತನೇ, ಕಷ್ಟನಿಕೃಷ್ಟಪಾಪಚರಿತಂ - ಕಷ್ಟನಿಕೃಷ್ಟ - ಅತ್ಯಂತ ಇಳಿತರವಾದ, ಪಾಪ ಚರಿತಂ - ಪಾಪವ್ಯಾಪಾರವುಳ್ಳವನು. ೮೦

**ಭಾವಾರ್ಥಬೋಧಿನಿ :** ಮನುಷ್ಯನಿಗೆ ಯಾವುದಾದರೊಂದು ಫಲಾಪೇಕ್ಷೆ ಯಿದ್ದೇ ಇರುವುದಷ್ಟೆ. ಯಾವನು, ಫಲಾಪೇಕ್ಷೆಯೆಂಬುದನ್ನೇ ನುಂಗಿ ನೀರ್ಗುಡಿದು, ಎಂದರೆ - ಫಲಾಪೇಕ್ಷೆಯನ್ನೇ ನಿರ್ಮೂಲಮಾಡಿ - ನಿಶ್ಚಿಂತನೂ, ಆಶಾರಹಿತನೂ

ಆಗಿ ಇರುವನೋ; ಅವನೇ ಉತ್ತಮೋತ್ತಮ ಪವಿತ್ರ ಚರಿತ್ರವುಳ್ಳವ ನೆನಿಸಿಕೊಳ್ಳು-ವನು. ಫಲಾಪೇಕ್ಷೆಯಿಂದ ಭವಬಂಧನಕ್ಕೆ ಮಾರಲ್ಪಟ್ಟವನಾಗಿ, ಯಾವನು ಪುಣ್ಯಾ ಚರಣೆಯುಳ್ಳವನಾಗಿರುವನೋ; ಅವನು ಅತ್ಯಂತ ನಿಕೃಷ್ಟಪಾಪಚರಿತ್ರೆ ನೆನಿಸಿಕೊ ಳ್ಳುವನು. ೮೦

**ಶಾರ್ದೂಲ ವಿಕ್ರೀಡಿತ ವೃತ್ತಂ**

ಕಾಮಾಕಾಮಕೃತಂಗಳಪ್ಪ ಜಡಪುಣ್ಯಾಪುಣ್ಯ ಕರ್ಮಂಗಳೇ
ವ್ಯೋಮಾಲೇಪ ಶಿವಾರ್ಚನಾರ್ಪಣ ಕಳಾಕಾರಂಗಳಾಗಿರ್ಪ್ಪತ
ತ್ಸಾಮರ್ಥ್ಯಂ ಶರಣಂಗೆ ಭಕ್ತಿಪರನಿರ್ವಾಣಕ್ರಿಯಾಚಾರನಿ
ನ್ಸಿಸೀಮಂಗಲ್ಲದೆ ಮಿಕ್ಕಕರ್ಮಿಗಳಿಗುಂಟೇಪೇಳ್ಶಿವಾವಲ್ಲಭಾ ೮೧

**ಟೀಕೆ :** ಕಾಮಾಕಾಮಕೃತಂಗಳಪ್ಪ - ಕಾಮ -ಇಚ್ಛೆಯಿಂದಲೂ, ಅಕಾಮ-ಇಚ್ಛೆಯಿಲ್ಲದಿಹುದರಿಂದಲೂ, ಕೃತಂಗಳಪ್ಪ - ಮಾಡಲ್ಪಟ್ಟ, ಜಡ-ಅಚೇತನವಾದ, ಪುಣ್ಯಾಪುಣ್ಯಕರ್ಮಂಗಳೇ – ಶುಭಾಶುಭಕರ್ಮಂಗಳೇ, ವ್ಯೋಮಾಲೇಪ ಶಿವಾರ್ಚನಾ ರ್ಪಣಕಳಾಕಾರಂಗಳ್ - ವ್ಯೋಮ - ಆಕಾಶದಂತೆ, ಅಲೇಪ - ನಿರ್ಲೇಪವಾದ, ಶಿವಾರ್ಚನ - ಶಿವಪೂಜೆಯು, ಅರ್ಪಣ - ಶಿವಾರ್ಪಣದ, ಕಳಾ - ಸೊಬಗಿನ, ಆಕಾರಂಗಳ್ - ಸ್ವರೂಪಂಗಳು, ಆಗಿರ್ಪ - ಆಗಿರುವ, ತತ್ಸಾಮರ್ಥ್ಯಂ - ಅಂತಪ್ಪ ಶಕ್ತಿಯು, ಭಕ್ತಿಪರನಿರ್ವಾಣಕ್ರಿಯಾಚಾರನಿಸ್ಸೀಮಂಗೆ - ಭಕ್ತಿ -ಶಿವಭಕ್ತಿಯೆಂಬ, ಪರನಿರ್ವಾಣ - ಉತ್ಕೃಷ್ಟವಾದ ಮೋಕ್ಷದಲ್ಲಿ, ಕ್ರಿಯಾ - ವ್ಯಾಪಾರದ, ಆಚಾರ - ನಡತೆಯುಳ್ಳ, ನಿಸ್ಸೀಮಂಗೆ - ಅವಧಿಯಿಲ್ಲದಾತನಾದ, ಶರಣಂಗಲ್ಲದೆ - ಶಿವಶರಣಂ ಗಲ್ಲದೆ, ಮಿಕ್ಕ - ಉಳಿದಂಥ, ಕರ್ಮಿಗಳಿಗೆ – ಕರ್ಮನಿಷ್ಠರಿಗೆ, ಉಂಟೇಪೇಳ್-ಉಂಟೇಹೇಳು ?

**ಭಾವಾರ್ಥಬೋಧಿನಿ :** ಫಲವನ್ನು ಇಚ್ಛಿಸುತ್ತ ಅಥವಾ ಫಲವನ್ನು ಇಚ್ಛಿಸದೆ ಮಾಡುವ ಜಡರೂಪವಾದ ಪುಣ್ಯಾಪುಣ್ಯಕರ್ಮಂಗಳನ್ನು, ಆಕಾಶದಂತೆ ನಿರ್ಲೇಪವಾಗಿರುವ - ಎಂದರೆ - ಪುಣ್ಯಪಾಪ ಫಲಗಳನ್ನು ಸೋಂಕದಿರುವ - ಶಿವಾ ರ್ಚನ - ಶಿವಾರ್ಪಣ - ಸ್ವರೂಪಗಳನ್ನಾಗಿ ಮಾರ್ಪಡಿಸುವ ಶಕ್ತಿಯು, ಭಕ್ತಿಯೆಂಬ

ಸರ್ವೋತ್ತಮವಾದ ಮುಕ್ತಿ ಸ್ಥಿತಿಯು ಆಚರಣೆಯಲ್ಲಿ ನಿಸ್ಸೀಮನಾಗಿರುವ ಶಿವಶರಣನಿಗಿರುವುದಲ್ಲದೆ ಕರ್ಮನಿಷ್ಠರಾದವರಿಗೆ ಇರುವುದಿಲ್ಲ. ೮೧

## ಶಾರ್ದೂಲ ವಿಕ್ರೀಡಿತ ವೃತ್ತಂ

ಭಕ್ತಿಜ್ಞಾನವಿಹೀನ ಪುಣ್ಯಮದುತಾಂ ಪಾಪಂ ಶಿವಜ್ಞಾನಸ
ದ್ಭಕ್ತಿಸ್ವೀಕೃತಪಾಪಕರ್ಮ ಮದುಪುಣ್ಯಂ ಪುಣ್ಯಪಾಪದ್ವಯಂ
ಭಕ್ತಿಜ್ಞಾನಸಮೇತ ಸದ್ಗುರುಕೃಪಾಲಬ್ಧ ಪ್ರಸಾದಕ್ರಿಯಾ
ಯುಕ್ತಂಗಿಲ್ಲಿದು ಕಾರಣಂ ಶ್ರುತಿಮತಂ ಸತ್ಯಂ ಶಿವಾವಲ್ಲಭಾ ೮೨

**ಟೀಕೆ :** ಭಕ್ತಿಜ್ಞಾನವಿಹೀನಪುಣ್ಯಂ - ಭಕ್ತಿಜ್ಞಾನ - ಶಿವಭಕ್ತಿಶಿವಜ್ಞಾನಂಗಳು, ವಿಹೀನ - ಇಲ್ಲದಂಥ, ಪುಣ್ಯಂ - ಪುಣ್ಯವು, ಅದುತಾಂ - ಅದುತಾನು, ಪಾಪಂ - ಪಾಪಕೃತ್ಯವು, ಈ ಅರ್ಥದಲ್ಲಿ—

"ಶಿವಭಕ್ತಿ ವಿಹೀನಸ್ಯ ಸುಕೃತಂಚಾಪಿನಿಷ್ಫಲಂ
ವಿಪರೀತ ಫಲಂಚಾಸ್ಯದಕ್ಷಸ್ಯಾಪಿಮಹಾಧ್ವರೇ"

ಎಂದುಂಟು. ಶಿವಜ್ಞಾನಸದ್ಭಕ್ತಿಸ್ವೀಕೃತಪಾಪಕರ್ಮಂ - ಶಿವಜ್ಞಾನಸದ್ಭಕ್ತಿ - ಶಿವಜ್ಞಾನದೃಢಭಕ್ತಿಗಳಿಂ, ಸ್ವೀಕೃತ - ಅಂಗೀಕರಿಸಲ್ಪಟ್ಟ, ಪಾಪಕರ್ಮಂ - ಪಾಪಕೃತ್ಯವು, ಅದು - ತಾನು, ಪುಣ್ಯಂ - ಸುಕೃತವು, ಈ ಅರ್ಥದಲ್ಲಿ—

"ಅತ್ಯಂತಪಾಪಕರ್ಮಾಪಿ ಶಿವಭಕ್ತ್ಯಾವಿಶುದ್ಧ್ಯತಿ
ಚಂಡೋಯಥಾಪರಾಧಕ್ತ್ಯಾಪಿತೃಹಾಪಿ ಶಿವೋಭವೇತ್"

ಎಂದುಂಟು. ಭಕ್ತಿಜ್ಞಾನಸಮೇತಸದ್ಗುರುಕೃಪಾಲಬ್ಧ ಪ್ರಸಾದಕ್ರಿಯಾಯುಕ್ತಂಗೆ- ಭಕ್ತಿಜ್ಞಾನಸಮೇತ - ಭಕ್ತಿಜ್ಞಾನದೊಡನೆ ಕೂಡಿದ, ಸದ್ಗುರು - ಶ್ರೀಗುರುವಿನ, ಕೃಪಾ - ಕರುಣದಿಂದ, ಲಬ್ಧ - ಪಡೆಯಲ್ಪಟ್ಟ, ಪ್ರಸಾದಕ್ರಿಯಾಯುಕ್ತಂಗೆ - ಅನುಗ್ರಹಾಚಾರಗಳುಳ್ಳವನಿಗೆ, ಪುಣ್ಯಪಾಪದ್ವಯಂ - ಆ ಪುಣ್ಯಪಾಪಂಗಳೆರಡೂ, ಇಲ್ಲ - ಇಲ್ಲವು, ಅದುಕಾರಣಂ - ಅದುನಿಮಿತ್ತವಾಗಿ, ಶ್ರುತಿಮತಂ- "ನಪುಣ್ಯಪಾಪೇ ಮಮನಾಸ್ತಿ ಶೋಕಃ" ಎಂಬ ಕೈವಲ್ಯೋಪನಿಷತ್ತಿಗೆ ಸಮ್ಮತವು, ಸತ್ಯಂ - ಯಥಾರ್ಥವು.

ಭಾವಾರ್ಥಬೋಧಿನಿ : ಶಿವಭಕ್ತಿ ಶಿವಜ್ಞಾನಗಳಿಲ್ಲದೆ ಮಾಡಿದ ಪುಣ್ಯವು ಪಾಪವಾಗಿ ಪರಿಣಮಿಸುವುದು. ಹೇಗೆಂದರೆ - ಶಿವಭಕ್ತಿ ಶಿವಜ್ಞಾನದೂರನಾಗಿ ದಕ್ಷನು ಮಾಡಿದ ಯಜ್ಞರೂಪಸತ್ಕರ್ಮವು ಪಾಪವಾಗಿ ಪರಿಣಮಿಸಿ, ಅವನ ತಲೆಯನ್ನು ಅಪಹರಿಸಿತು. ಮತ್ತು ಶಿವಜ್ಞಾನ ಶಿವಭಕ್ತಿಯುಕ್ತವಾಗಿ ಮಾಡಿದ ಪಾಪ ಕೃತಿಯೂ ಕೂಡ ಪುಣ್ಯವಾಗಿ ಪರಿಣಮಿಸುವುದು. ಹೇಗೆಂದರೆ - ಶಿವಭಕ್ತಿಯುಕ್ತನಾದ ಚಂಡೇಶನು ಕುರಿಯ ಹಿಕ್ಕೆಯನ್ನು ಶಿವಲಿಂಗವೆಂದು ನಂಬಿ ಪೂಜಿಸುತ್ತಿದ್ದುದನ್ನು ಅವನ ತಂದೆ ಬಂದು ಕಾಲಿನಿಂದ ತಳ್ಳಿಹಾಕಲಾ , ಆಗ ತನ್ನ ತಂದೆಯ ಕಾಲನ್ನೇ ಕಡಿದು ಹಾಕಿದನು ಚಂಡೇಶನು. ಈ ದುಷ್ಕೃತ್ಯವು ಪುಣ್ಯವಾಗಿ ಪರಿಣಮಿಸಿ, ಚಂಡನಿಗೂ ಅವನ ತಂದೆಗೂ ಕೈಲಾಸಸ್ಥಾನವನ್ನುಂಟುಮಾಡಿತು. ಇನ್ನು ಭಕ್ತಿಜ್ಞಾನಯುಕ್ತರಾಗಿ ಗುರುಕರುಣಾಲಬ್ಧಪ್ರಸಾದಕ್ರಿಯಾಬದ್ಧರಾದ ಶಿವಶರಣರಿಗೆ ಪುಣ್ಯಪಾಪಗಳೆರಡರ ಸಂಬಂಧವೂ ಇರುವುದಿಲ್ಲ. ಇದು ಶ್ರುತಿ ಸಮ್ಮತವೂ ಸತ್ಯವೂ ಆಗಿರುವುದು. (ಪುಣ್ಯ ಪಾಪ ಶೋಕಗಳು ಶಿವಭಕ್ತನಿಗಿಲ್ಲವೆಂದು ಹೇಳುವ ಉಪನಿಷದ್ವಾಕ್ಯವನ್ನು ಟೀಕಾಕಾರನು ಉದಾಹರಿಸಿರುವನು.)

**ಶಾರ್ದೂಲ ವಿಕ್ರೀಡಿತ ವೃತ್ತಂ**

ಪಾಶದ್ವಂದ್ವ ವಿಮುಕ್ತನಾಗಿ ಶಿವಭಕ್ತಿಜ್ಞಾನಯೋಗಕ್ರಿಯಾ
ವೇಶೋಲ್ಲಾಸವಿಲಾಸ ವಿಕ್ರಮವಿಶೇಷೋತ್ಕೃಷ್ಟ ಸದ್ವೀರಮಾ
ಹೇಶಾಚಾರ ಪರಾಯಣಂ ಶರಣನಿರ್ಪಂ ಪುಣ್ಯಪಾಪೋಭಯ
ಕ್ಲೇಶಾಯಾಸ ನಿಷೇಧವೈಧರಹಿತೋದ್ಯುಕ್ತಂ ಶಿವಾವಲ್ಲಭಾ ೮೩

**ಟೀಕೆ :** ಶಿವಭಕ್ತಿ......ಪರಾಯಣಂ - ಶಿವಭಕ್ತಿ - ಶಿವಭಕ್ತಿಯ, ಜ್ಞಾನ - ಶಿವಜ್ಞಾನದ, ಯೋಗ - ಕೂಟದಲ್ಲಿಯ, ಕ್ರಿಯಾ - ಆಚರಣೆಯ, ಆವೇಶ - ಪರವಶದಲ್ಲಿ, ಉಲ್ಲಾಸ – ಸಂತಸದಿಂದಲಾದ, ವಿಲಾಸ - ಲೀಲೆಯಲ್ಲಿ, ವಿಕ್ರಮವಿಶೇಷ - ಪರಾಕ್ರಮಾತಿಶಯದಿಂದ, ಉತ್ಕೃಷ್ಟ - ಅಧಿಕನಾದ, ಸತ್ - ಒಳ್ಳೆತ್ತಾದ, ವೀರ ಮಾಹೇಶ್ವರಾಚಾರ - ವೀರಮಾಹೇಶ್ವರಾಚಾರದಲ್ಲಿ, ಪರಾಯಣಂ-ಅಭಿಪ್ರಾಯವನುಳ್ಳ, ಪುಣ್ಯಪಾಪೋಭಯಕ್ಲೇಶಾಯಾಸನಿಷೇಧವೈಧರಹಿತೋದ್ಯುಕ್ತಂ-ಪುಣ್ಯಪಾಪ - ಶುಭಾಶುಭಕರ್ಮಂಗಳೆಂಬ, ಉಭಯ - ಎರಡರಲ್ಲಿ, ಕ್ಲೇಶ - ದುಃಖದಿಂದ, ಆಯಾಸ - ಪ್ರಯಾಸದಿಂದಲೂ, ನಿಷೇಧವೈಧ - ವಿಧಿನಿಷೇಧಂಗಳಿಂ, ರಹಿತ - ಬಿಡುವುದರಲ್ಲಿ,

ಉದ್ಯುಕ್ತಂ - ಉದ್ಯೋಗವನುಳ್ಳಂಥ, ಶರಣಂ - ಶಿವಶರಣನು, ಪಾಶದ್ವಂದ್ವ ವಿಮುಕ್ತವಾಗಿ, ಪುಣ್ಯಪಾಪಂಗಳೆಂಬೆರಡು ಪಾಶಗಳಿಂ ಬಿಡಲ್ಪಟ್ಟಾತನಾಗಿ, ಇರ್ಪಂ- ಇರ್ಪನು. ೮೩

**ಭಾವಾರ್ಥಬೋಧಿನಿ :** ಶಿವಶರಣನು, ಶಿವಭಕ್ತಿಶಿವಜ್ಞಾನಯೋಗದ ಆಚರಣೆಯ ಪರವಶತೆಯಿಂದುಂಟಾದ ಸಂತಸದ ವಿಲಾಸದಲ್ಲಿ ಕೂಡಿದವನೂ, ಅತಿಶಯ ಧೀರವೃತ್ತಿಯಿಂದ ಕೂಡಿದ ಸದ್ವೀರಮಾಹೇಶ್ವರಾಚಾರದಲ್ಲಿ ಪರಾಯಣನೂ, ಪುಣ್ಯಪಾಪಾಚರಣೆಯ ಕ್ಲೇಶವಿಲ್ಲದುದೂ, ಪುಣ್ಯಪಾಪ ದುಃಖ ರಹಿತನೂ, ತತ್ಪುಣ್ಯಪಾಪಸಂಬಂಧ ವಿಧಿನಿಷೇಧರಹಿತವೂ ಆದ ವ್ಯವಹಾರವುಳ್ಳವನೂ ಆಗಿ, ಪುಣ್ಯಪಾಪಪಾಶಗಳಿಂದ ಬಿಡಲ್ಪಟ್ಟವನಾಗಿರುವನು. ೮೩

**ಶಾರ್ದೂಲ ವಿಕ್ರೀಡಿತ ವೃತ್ತಂ**

ಪಾಪಾಪಾಪವಿಲೇಪಲೋಪಕರನಿರ್ಲೇಪ ಪ್ರಸಾದಪ್ರಭಾ
ವೋಪೇತ ಪ್ರಬಲಪ್ರತಾಪವಿಲಸದ್ಭಕ್ತಿ ಕ್ರಿಯಾಯೋಗದೊ
ಳ್ಪಾಪಂ ಪಾಪಮದಲ್ಲ ಪುಣ್ಯಮದು ತಾನುಂ ಪುಣ್ಯಮಲ್ಲಂ ಸ್ವಲೀ
ಲಾಪರ್ಯಾಪ್ತಗುಣೈಕಭಕ್ತಿವಿಭವಂ ತಾನೇ ಶಿವಾವಲ್ಲಭಾ ೮೪

**ಟೀಕೆ :** ಪಾಪಾ............ಯೋಗದೊಳ್ - ಪಾಪಾಪಾಪ - ಪಾಪ ಪುಣ್ಯಂಗಳ, ವಿಲೇಪ - ವಿವಿಧಲೇಪಕ್ಕೆ, ಲೋಪಕರ - ನಾಶವಮಾಡುತ್ತಿರ್ಪ, ನಿರ್ಲೇಪ - ನಿರ್ಮಳವಾದ, ಪ್ರಸಾದ - ಜ್ಞಾನದ, ಪ್ರಭಾವ - ಸಾಮರ್ಥ್ಯದೊಡನೆ, ಉಪೇತ - ಕೂಡಿದಂಥ, ಪ್ರಬಲ - ವೆಗ್ಗಳವಾದ, ಪ್ರತಾಪ - ಪರಾಕ್ರಮದಿಂದ, ವಿಲಸತ್ - ಒಪ್ಪುತಲಿರ್ಪ, ಭಕ್ತಿಕ್ರಿಯಾಯೋಗದೊಳ್ - ಭಕ್ತಿವ್ಯಾಪಾರಕೂಟದಲ್ಲಿ, ಪಾಪಂ - ಪಾಪವು, ಪಾಪಮದಲ್ಲ - ಅದು ಪಾಪವಲ್ಲ, ಪುಣ್ಯಮದುತಾನುಂ - ಆ ಪುಣ್ಯವೂ, ಪುಣ್ಯಮಲ್ಲಂ - ಪುಣ್ಯಮಲ್ಲವು, ಸ್ವಲೀಲಾಪರ್ಯಾಪ್ತಗುಣೈಕಭಕ್ತಿ ವಿಭವಂ - ಸ್ವ - ತನ್ನ, ಲೀಲಾ - ವಿಲಾಸದಿಂದ, ಪರ್ಯಾಪ್ತ - ಚೆನ್ನಾಗಿ ಐದಲ್ಪಟ್ಟ, ಗುಣ - ಸದ್ಗುಣಂಗಳಲ್ಲಿ, ಏಕ - ಮುಖ್ಯವಾದ, ಭಕ್ತಿ - ಶಿವಭಕ್ತಿಯ, ವಿಭವಂ - ಐಶ್ವರ್ಯವನುಳ್ಳಾತನು, ತಾನೇ - ಶರಣನುತಾನೇ.

**ಭಾವಾರ್ಥಬೋಧಿನಿ :** ಪಾಪಪುಣ್ಯಗಳ ಸಂಬಂಧವನ್ನು ನಾಶಮಾಡುವ ನಿರ್ಮಲವಾದ ಜ್ಞಾನದ ಸಾಮರ್ಥ್ಯದಿಂದ ಕೂಡಿ, ಅಧಿಕ ಪ್ರತಾಪದಿಂದ ಶೋಭಿಸುವ ಭಕ್ತಿಕ್ರಿಯಾಯೋಗದಲ್ಲಿ ಪಾಪಪುಣ್ಯ ಕ್ರಿಯೆಗಳು ಪಾಪಪುಣ್ಯಫಲಗಳನ್ನುಂಟು ಮಾಡುವುದಿಲ್ಲ. ( ಭಕ್ತಿಯೋಗಿಯ ಸರ್ವಕ್ರಿಯೆಗಳು ದಗ್ಧಪಟದಂತೆ ತೋರಿಕೆಗೆ ಮಾತ್ರ ಗೋಚರವಾಗಿ ನಿಷ್ಫಲಗಳಾಗಿರುವವೆಂದು ಭಾವ ) ಇಂತಹ ಭಕ್ತಿಯೋಗದಲ್ಲಿರುವ ಶರಣನ ಕ್ರಿಯೆಗಳು ಆತನ ಭಕ್ತಿಲೀಲಾಮಯ ವೈಭವಗಳಾಗಿರುವವು. ೮೪

**ಮತ್ತೇಭವಿಕ್ರೀಡಿತಂ**

ತಮಮುಂ ಜೊನ್ನಮುಮೇಕರಾತ್ರಿಯೊಳೆ ವರ್ತಿಪ್ಪಂದದಿಂ ಪಾಪಮುಂ
ಸುಮಹತ್ಪುಣ್ಯಮುಮೇಕ ಕರ್ಮದೊಳೆವರ್ತಿಕ್ಕುಂ ಸಮಂ ಮತ್ತಮಾ
ತಮಮುಂ ಜೊನ್ನಮುಮಂ ಕೆದರ್ಚಿದಿನಕೃತ್ತೀವ್ರಾತಪಂ ನಿಲ್ವಸಂ
ಭ್ರಮಮೆಂತಂತೆ ಶಿವೈಕಭಕ್ತಿವಿಭವಂ ನಿಲ್ಕುಂ ಶಿವಾವಲ್ಲಭಾ ೮೫

**ಟೀಕೆ :** ತಮಮುಂ - ಕತ್ತಲೆಯೂ, ಜೊನ್ನಮುಂ - ಬೆಳ್ದಿಂಗಳೂ, ಏಕರಾತ್ರಿಯೋಳ್ - ಒಂದೇ ರಾತ್ರಿಯಲ್ಲಿಯೇ, ವರ್ತಿಪ್ಪಂದದಿಂ - ವರ್ತಿಸುವ ಹಾಂಗೆ, ಪಾಪಮುಂ - ದುಷ್ಕೃತವೂ, ಸುಮಹತ್ಪುಣ್ಯಮುಂ - ಮಿಗೆದೊಡ್ಡಿತ್ತಾದ ಸುಕೃತವೂ, ಏಕಕರ್ಮದೊಳೆ - ಒಂದೇ ಕರ್ಮದಲ್ಲಿಯೇ, ಸಮಂ - ಸಮವಾಗಿ, ವರ್ತಿಕ್ಕುಂ - ವರ್ತಿಸಿರ್ಪುವು,ಆ ತಮಮುಂ -ಆ ಕತ್ತಲೆಯನ್ನು, ಜೊನ್ನಮುಮಂ-ಬೆಳ್ದಿಂಗಳನ್ನೂ, ಕೆದರ್ಚಿ - ಓಡಿಸಿ, ಮತ್ತೆ - ಮರಳಿ, ದಿನಕೃತ್ತೀವ್ರಾತಪಂ- ದಿನಕೃತ್ - ಸೂರ್ಯನ, ತೀವ್ರ - ಪ್ರಚಂಡವಾದ, ಆತಪಂ - ಬಿಸಿಲು, ನಿಲ್ವ - ಉಂಟಾಗುವ, ಸಂಭ್ರಮಂ - ಉತ್ಸಾಹವು, ಎಂತು - ಹೇಗೋ, ಅಂತು - ಹಾಗೆ, ಶಿವೈಕಭಕ್ತಿವಿಭವಂ - ಶಿವೈಕಾಂತಭಕ್ತಿಯ ಐಶ್ವರ್ಯವು, ನಿಲ್ಕುಂ - ಸ್ಥಿರವಾಗಿ ನಿಲ್ಲುವುದು, (ಪುಣ್ಯಪಾಪಂಗಳಿಲ್ಲವೆಂಬುವಭಿಪ್ರಾಯಂ). ೮೫

**ಭಾವಾರ್ಥಬೋಧಿನಿ :** ಕತ್ತಲು ಬೆಳ್ದಿಂಗಳೆರಡೂ ಒಂದೇ ರಾತ್ರಿಯಲ್ಲಿರುವಂತೆ ಪಾಪಪುಣ್ಯಗಳೆರಡೂ ಕರ್ಮಮಾರ್ಗವೊಂದರಲ್ಲಿಯೇ ಇರುವವು. ಕತ್ತಲು

ಬೆಳ್ದಿಂಗಳೆರಡನ್ನೂ ಓಡಿಸಿ, ಸೂರ್ಯನ ಬಿಸಿಲು ತಾನೊಂದೇ ಸ್ಥಿರವಾಗಿ ನಿಲ್ಲುವಂತೆ, ಪಾಪಪುಣ್ಯಗಳೆರಡನ್ನೂ ಪರಿಹರಿಸಿ, ಶಿವೈಕಾಂತಭಕ್ತಿಯ ಸಂಪತ್ತು ತಾನೊಂದೇ ಸ್ಥಿರವಾಗಿ ನಿಲ್ಲುವುದು. ೮೫

**ಮತ್ತೇಭವಿಕ್ರೀಡಿತಂ**

ದಿವದೊಳ್ಚಂದ್ರಮರೀಚಿಯುಂ ತಿಮಿರಮುಂ
ವರ್ತಿಕ್ಕುಮೇರಾತ್ರಿಯೊಳ್
ಪ್ರವರಂಬೆತ್ತಗಲಕ್ಕೆ ಪರ್ವಿಮಿಗೆ ವರ್ತಿಪ್ಪಂದದಿಂ ಪುಣ್ಯ ಪಾ
ಪವಿಕಾರಂ ಜಡಕರ್ಮಕಾಂಡದೊಳೆ ತಾಂ ವರ್ತಿಕ್ಕುಮೈಸಲ್ಲದೀ
ಶಿವಭಕ್ತಿಸ್ಥಲದೊಳ್ಪ್ರವರ್ತಿಸುಗುಮೇ ಪೇಳಾ ಶಿವಾವಲ್ಲಭಾ ೮೬

**ಟೀಕೆ :** ರಾತ್ರಿಯೋಳ್ - ರಾತ್ರಿಯಲ್ಲಿ, ಚಂದ್ರಮರೀಚಿಯುಂ-ಬೆಳ್ದಿಂಗಳೂ ತಿಮಿರಮುಂ - ಕತ್ತಲೆಯೂ, ಪ್ರವರಂಬೆತ್ತು - ಅತ್ಯಂತ ಪೆರ್ಮೆಗೆಯಾಗಿ, ಅಗಲಕ್ಕೆ - ವಿಸ್ತಾರವಾಗಿ, ಪರ್ವಿ - ಪಸರಿಸಿ, ಮಿಗೆ - ಚೆನ್ನಾಗಿ, ವರ್ತಿಪ್ಪಂದದಿಂ - ವರ್ತಿಸುವ ಹಾಂಗೆ, ದಿವದೊಳ್ - ಪಗಲಲ್ಲಿ, ವರ್ತಿಕ್ಕುಮೋ - ವರ್ತಿಸುವುವೇ ? ಜಡಕರ್ಮಕಾಂಡದೊಳೆ - ಅಚೇತನ ಕರ್ಮಕಾಂಡದಲ್ಲಿಯೇ, ಪುಣ್ಯಪಾಪ ವಿಕಾರಂ - ಶುಭಾಶುಭಂಗಳ ವಿಕಾರವು, ತಾಂ - ತಾವು, ವರ್ತಿಕ್ಕುಮೈಸಲ್ಲದೆ - ವರ್ತಿಸುವವಪ್ಪಲ್ಲದೆ, ಈ ಶಿವಭಕ್ತಿಸ್ಥಲದೊಳ್ - ಈ ಶಿವಭಕ್ತಿಮಾರ್ಗದಲ್ಲಿ, ಪೆರ್ತಿಸುಗುಮೆ - ವರ್ತಿಸುವುವೆ ?

**ಭಾವಾರ್ಥಬೋಧಿನಿ :** ಶಿವಾವಲ್ಲಭನೆ, ರಾತ್ರಿಯಲ್ಲಿ ಕತ್ತಲೂ ಬೆಳ್ದಿಂಗಳೂ ವಿಸ್ತಾರವಾಗಿ ಹಬ್ಬಿಕೊಂಡಿರುವಂತೆ ಹಗಲಿನಲ್ಲಿರುವವೇನು ? ಇರುವುದಿಲ್ಲ. ಇದರಂತೆ ಪುಣ್ಯಪಾಪಗಳ ವಿಕಾರವು ಜಡವಾದ ಕರ್ಮಕಾಂಡದಲ್ಲಿರುವಂತೆ ಶಿವಭಕ್ತಿ ಮಾರ್ಗದಲ್ಲಿರುವವೇ ? ಇರಲಾರವು. ೮೬

**ಮತ್ತೇಭವಿಕ್ರೀಡಿತಂ**

ಫಲಮಂ ಮುಕ್ತಿಫಲಾಂತಮಾಗಿ ಕುಡುವಾ ಸಾಮರ್ಥ್ಯಮುಂಟಾಗಿಯುಂ
ಫಲಮೇನುಂ ತನಗಿಲ್ಲ ನೋಡೆ ಸಫಲಂ ತಾನಾಗಿಯುಂ ಬಂಧಕ
ತ್ಫಲದಾನಸ್ಪೃಹೆಯಿಲ್ಲ ನಿಷ್ಫಲತೆಯಿಂ ಸಾಫಲ್ಯಮಂ ಸ್ವಕ್ರಿಯಾ
ಫಲದೊಳ್ ಪೊರ್ದ್ದದ ಭಕ್ತಿಯೋಗಫಲಮಾಶ್ಚರ್ಯಂ ಶಿವಾವಲ್ಲಭಾ ೮೭

**ಟೀಕೆ :** ಮುಕ್ತಿಫಲಾಂತವಾಗಿ - ಮೋಕ್ಷಫಲವೇ ಕಡೆಯಾಗಿ, ಫಲಮಂ - ಫಲವನ್ನು, ಕುಡುವ - ಈಯುವಂಥ, ಆ ಸಾಮರ್ಥ್ಯಂ - ಆ ಶಕ್ತಿಯು, ಉಂಟಾಗಿಯುಂ - ಉಳ್ಳುದಾಗಿಯೂ, ನೋಡೆ - ವಿಚಾರಿಸಲಾಗಿ, ಸಫಲಂ ತಾನಾಗಿಯುಂ - ತಾನೇ ಫಲಸ್ವರೂಪನಾಗಿಯೂ, ಫಲಂ - ಫಲವು, ತನಗೆ - ಭಕ್ತಿಯೋಗವೆಂಟಾತನಿಗೆ, ಏನುಮಿಲ್ಲ - ಕಿಂಚಿನ್ಮಾತ್ರವೂ ಇಲ್ಲ, ನಿಷ್ಫಲತೆಯಿಂ - ತನಗೆ ಮತ್ತೊಂದು ಫಲವಿಲ್ಲದಿಹುವರಿಂದ, ಬಂಧಕೃತ್ಫಲದಾನಸ್ಪೃಹೆಯಿಲ್ಲ - ಬಾಧಕೃತ್ - ಸಂಸಾರಬಂಧಮಂ ಮಾಳ್ಪ, ಫಲದಾನ - ಫಲವ ಕೊಡುವಲ್ಲಿ, ಸ್ಪೃಹೆ - ಇಚ್ಛೆ, ಇಲ್ಲ - ದೊರಕದು, ಸ್ವಕ್ರಿಯಾ ಫಲದೊಳ್ - ತನ್ನ ಕ್ರಿಯಾಫಲದಲ್ಲಿ, ಸಾಫಲ್ಯಮಂ - ಸಾರ್ಥಕತ್ವವನು, ಪೊರ್ದದ - ಸಂಬಂಧಿಸದ, ಭಕ್ತಿಯೋಗಫಲಂ, ಶಿವಭಕ್ತಿಯೋಗದ ಫಲವು, ಆಶ್ಚರ್ಯಂ - ಚೋದ್ಯವು.

**ಭಾವಾರ್ಥಬೋಧಿನಿ :** ಭಕ್ತಿಯೋಗಕ್ಕೆ ಮೋಕ್ಷಫಲವೇ ಕೊನೆಯದಾಗಿರುವಂತೆ ಫಲವನ್ನು ಕೊಡುವ ಶಕ್ತಿಯಿರುವದು. ಆದರೆ ವಿಚಾರಿಸಿ **ನೋಡಲಾಗಿ** ಆ ಭಕ್ತಿಯೋಗವು ತಾನೇ ಫಲಸ್ವರೂಪವಾಗಿರುವುದರಿಂದ ಅದು ಪಡೆಯಬೇಕಾದುದು ಕಿಂಚಿತ್ತಾದರೂ ಇರುವುದಿಲ್ಲ. ಹೀಗೆ ಫಲಾಂತರರಹಿತವಾಗಿ ನಿಷ್ಫಲವೆನಿಸಿಕೊಂಡಿರುವುದರಿಂದಲೇ ಆ ಭಕ್ತಿಯೋಗದಲ್ಲಿ ಭವಬಂಧನವನ್ನುಂಟುಮಾಡುವ ಫಲದ ಇಚ್ಛೆಯೇ ಹುಟ್ಟುವದಿಲ್ಲ. ಈ ಕಾರಣದಿಂದ ತನ್ನ ಕ್ರಿಯೆಗೆ ಯಾವ ಫಲವನ್ನೂ ಅಪೇಕ್ಷಿಸದಿರುವ ಈ ಭಕ್ತಿಯೋಗದ ಫಲವು ಆಶ್ಚರ್ಯಕರವಾಗಿರುವುದು. (ಈ ಭಕ್ತಿಯೇ ಸಾಮರಸ್ಯಭಕ್ತಿಯಾಗುವದೆಂದು ಭಕ್ತಿತತ್ವಜ್ಞರ ಅಭಿಪ್ರಾಯ. ೮೭

**ಮತ್ತೇಭವಿಕ್ರೀಡಿತಂ**

ಫಲಕಾಮತ್ವಮದುಳ್ಳೊಡಂ ಸಕಲಸತ್ಕರ್ಮಂಗಳೊಳ್ಭಕ್ತಿಗಾ
ಫಲದಿಂ ಬಂಧಮದಿಲ್ಲ ಮೋಕ್ಷಮುಮಮಂ ತಾನಿಲ್ಲ ನಿಷ್ಕಾಮ್ಯತಾ
ಫಲದಿಂ ನೋಳ್ಪೊಡೆ ಬಂಧಮೋಕ್ಷಯುಗಮುಂಟಾವಲ್ಲಿ ಶಶ್ವನ್ಮಹಾ
ಫಲಮಪ್ಪುತ್ತರಭಕ್ತಿಯೋಗಫಲಮಿಲ್ಲೆಂಮಂ ಶಿವಾವಲ್ಲಭಾ ೮೮

**ಟೀಕೆ :** ಭಕ್ತಿಗೆ - ಶಿವಭಕ್ತಿಗೆ, ಸಕಲಕರ್ಮಂಗಳೊಳ್ - ಸಮಸ್ತವಾದ ಸತ್ಕ್ರಿಯೆಗಳಲ್ಲಿ ಫಲಕಾಮತ್ವಂ - ಫಲವ ಬಯಸುವುದು, ಅದು - ತಾನು,

ಉಳ್ಳೊಡಂ - ಉಂಟಾದೊಡೆಯೂ, ಆ ಫಲದಿಂ - ಆ ಫಲದಿಂದೆ, ಬಂಧವಮದು - ಸಂಸಾರಬಂಧವೆಂಬುದು ತಾನು, ಇಲ್ಲ - ಉಂಟಾಗುತ್ತಿರದು, ನೋೞ್ಪೊಡೆ-ವಿಚಾರಿಸುವೊಡೆ, ನಿಷ್ಕಾಮ್ಯತಾ ಫಲದಿಂ - ನಿಷ್ಕಾಮ್ಯತ್ವವೇ ಫಲವಾಗುಳ್ಳುದರಿಂದೆ, ಮೋಕ್ಷವಮದುಂ - ಆ ಮೋಕ್ಷವೆಂಬುದೂ, ತಾಂ - ತಾನು, ಇಲ್ಲ - ಉಂಟಾಗದು, ಬಂಧಮೋಕ್ಷಯುಗಂ - ಬಂಧಮೋಕ್ಷಂಗಳೆರಡೂ, ಉಂಟಾದಲ್ಲಿ - ಉಂಟೆಂಬ ಪಕ್ಷದಲ್ಲಿ, ಶಶ್ವನ್ಮಹಾಫಲಮಪ್ಪ - ನಿತ್ಯವಾದಮಹಾಫಲಮಪ್ಪ, ಉತ್ತರಭಕ್ತಿಯೋಗಫಲಂ - ಉತ್ತರಮಾರ್ಗವಾದ ಶಿವಭಕ್ತಿಯೋಗದ ಫಲವು, ಎಂದುಂ - ಎಲ್ಲಾಗಳೂ ಇಲ್ಲ - ಉಂಟಾಗುತ್ತಿರದು. (ಈ ಅರ್ಥದಲ್ಲಿ

"ನ ಬಂಧೋಽಸ್ತಿ ನ ಮೋಕ್ಷೋಽಸ್ತಿ ನಿತ್ಯಮುಕ್ತಸ್ಯ ಕಾಮುಕ್ತಿಃ

ಎಂದು ಯಾಜ್ಞವಲ್ಕ್ಯೋಪನಿಷತ್ತುಂಟು.)

ಭಾವಾರ್ಥಬೋಧಿನಿ : ಶಿವಾವಲ್ಲಭನೆ, ಶಿವಭಕ್ತಿಗೆ ಫಲಾಪೇಕ್ಷೆಯಿದ್ದರೂ ಆ ಶಿವಭಕ್ತಿಗೆ ಸಂಬಂಧಿಸಿದ ಸತ್ಕರ್ಮಗಳನ್ನಾಚರಿಸುವುದರಿಂದುಂಟಾಗುವ ಫಲವು ಬಂಧವನ್ನುಂಟುಮಾಡುವುದಿಲ್ಲ ಮತ್ತು ವಿಚಾರಿಸಿ ನೋಡಲಾಗಿ ಆ ಶಿವಭಕ್ತಿಗೆ ನಿಷ್ಕಾಮತ್ವವೇ ಫಲವಾಗಿದ್ದರೂ ಆ ಫಲದಿಂದ ಮೋಕ್ಷವೂ ಉಂಟಾಗುವುದಿಲ್ಲ. ಅದಕ್ಕೆ ಬಂಧಮೋಕ್ಷಗಳೆರಡೂ ಉಂಟೆಂದು ಹೇಳುವ ಪಕ್ಷದಲ್ಲಿ ಆ ಶಿವಭಕ್ತಿಗೆ ಎಲ್ಲಕ್ಕೂ ಮಿಗಿಲಾದ ಶಿವಭಕ್ತಿಯೋಗದ ಫಲವೇ ಎಂದೂ ಉಂಟಾಗುತ್ತಿರದು. ಎಂದರೆ - ಶಿವಭಕ್ತಿಗೆ ಬಂಧಮೋಕ್ಷಗಳೆಂಬುವಿಲ್ಲ; ಶಿವಸಾಮರಸ್ಯರೂಪಯೋಗವೇ ಫಲವಾಗಿರುವುದೆಂದು ತಾತ್ಪರ್ಯ. ೮೮.

### ಶಾರ್ದೂಲ ವಿಕ್ರೀಡಿತ ವೃತ್ತಂ

ಬಂಧಂ ಸಂಸೃತಿಪಾಶಪಾವರಣಮಾಬಂಧಾಪೃತಿಚ್ಛೇದನಂ
ಬಂಧಚ್ಛೇದನ ಮಾಪ್ರಗಾಢತರಬಂಧಚ್ಛೇದನಂ ಮೋಕ್ಷಮಾ
ಬಂಧಂ ಮೋಕ್ಷದನಂತರಂ ಮರಳಿ ತಾನುಂಟಾಗಿ ಸದ್ಭಕ್ತಿಯಾ
ಬಂಧಂ ಮೋಕ್ಷಮುಮಿಲ್ಲವಲ್ಲಿ ಬೆಳಗುತ್ತಿರ್ಕುಂ ಶಿವಾವಲ್ಲಭಾ ೮೯

**ಟೀಕೆ :** ಸಂಸೃತಿಪಾಶದ - ಸಂಸಾರಪಾಶದ, ಆವರಣಂ - ಬಲೆಯೇ, ಬಂಧಂ - ಬಂಧವೆನಿಸುವುದು. ಆ ಬಂಧಾವೃತಿಚ್ಛೇದನಂ - ಆ ಬಂಧಾವರಣವ ಕಡಿವುದೇ, ಬಂಧಚ್ಛೇದನಂ - ಬಂಧಚ್ಛೇದನವೆನಿಸುವುದು, ಆ ಪ್ರಗಾಢತರಬಂಧ ಚ್ಛೇದನಂ - ಆ ಪ್ರಗಾಢತರ - ಆ ಅತ್ಯಂತದೃಢತರವಾದ, ಬಂಧ - ಕಟ್ಟಿನ, ಛೇದನಂ - ಖಂಡಿಸುವುದೇ, ಮೋಕ್ಷಂ - ಮುಕ್ತಿಯೆನಿಸುವುದು, ಮೋಕ್ಷದ ನಂತರದಲ್ಲಿ, ಮರಳಿ - ಪುತ್ತೆಯೂ, ಆ ಬಂಧಂ - ಆ ಮಾಯಾ ಪಾಶಬಂಧವೂ, ತಾನುಂಟಾಗಿ, ಆ ಬಂಧಂ - ಆ ಮಾಯಾಪಾಶಬಂಧವೂ, ಮೋಕ್ಷಮುಂ - ಆ ಮುಕ್ತಿಯೂ, ಇಲ್ಲದಲ್ಲಿ - ಉಂಟಾಗದಲ್ಲಿ, ಭಕ್ತಿ - ಶಿವಭಕ್ತಿಯು,ಬೆಳಗುತ್ತಿರ್ಕುಂ- ಪ್ರಕಾಶಿಸುತ್ತಿರ್ಪುದು. ೮೯

**ಭಾವಾರ್ಥಬೋಧಿನಿ :** ಸಂಸಾರಪಾಶದ ಬಲೆಯೇ ಬಂಧವೆನಿಸುವುದು. ಆ ಬಂಧಾವರಣವನ್ನು ಕಡಿಯುವುದೇ ಬಂಧಚ್ಛೇದನವೆನಿಸುವುದು. ಅತ್ಯಂತ ದೃಢತರ ವಾದ ಆ ಬಂಧಚ್ಛೇದನವೇ ಮುಕ್ತಿಯೆನಿಸುವುದು. ಮುಕ್ತಿಯ ನಂತರದಲ್ಲಿಯೂ ಮರಳಿ ಬಂಧವು ಪ್ರಾಪ್ತವಾಗುವುದು. ಹೀಗೆ ಒಂದರಹಿಂದೆ ಮತ್ತೊಂದು ಪ್ರಾಪ್ತ- ವಾಗುತ್ತಿರುವ ಬಂಧಮೋಕ್ಷಗಳೆಂಬ ದ್ವಂದ್ವವು ಎಲ್ಲಿ ಇರುವುದಿಲ್ಲವೋ; ಅಲ್ಲಿ ಶಿವ- ಭಕ್ತಿಯು ಪ್ರಕಾಶಿಸುವುದು ಎಂದರೆ – ಬಂಧಮೋಕ್ಷಗಳು ಪರಸ್ಪರಾನುಬಂಧಗಳಾಗಿ ರುವವು. ಇವು ಶಿವಭಕ್ತಿಯಿದ್ದಲ್ಲಿ ಇರುವುದಿಲ್ಲವೆಂಬ ತಾತ್ಪರ್ಯ. ೮೯

**ಮತ್ತೇಭವಿಕ್ರೀಡಿತಂ**

ಗಗನಂ ಮಾರುತಪಾಶದಿಂ ಬಿಗಿದು ಕಟ್ಟಲ್ಕಟ್ಟುಗೊಂಡಂದು ಭ
ಕ್ತಿಗೆ ಬಂಧಂ ದೃಢಪಾಶಮೋಚನ ಮದಕ್ಕಾದಂದು ಮೋಕ್ಷಂದಿಟಂ
ಬಗೆಯಲ್ಭಕ್ತಿಗೆ ಬಂಧಮೋಕ್ಷಯುಗಳಂ ಸಂಸಾರಪಾಶಪ್ರಧಾ
ನಗುಣಂ ಸತ್ಯಮದುಂಟೆ ಉಂಟುಪುಸಿ ಮತ್ತೆಲ್ಲಂ ಶಿವಾವಲ್ಲಭಾ ೯೦

**ಟೀಕೆ :** ಗಗನಂ - ಆಕಾಶವು, ಮಾರುತಪಾಶದಿಂ - ವಾಯುವೆಂಬ ಹಗ್ಗದಿಂ, ಬಿಗಿದು - ಬಲಿದು, ಕಟ್ಟಲ್ - ಬಂಧಿಸಲಾಗಿ, ಕಟ್ಟುಗೊಂಡಂದು - ಬಂಧನಕ್ಕೊಳಗಾದಂದು, ಭಕ್ತಿಗೆ - ಶಿವಭಕ್ತಿಗೆ, ಬಂಧಂ - ಬಂಧವುಂಟು,





ಅವಕ್ಕೆ - ಆ ಆಕಾಶಕ್ಕೆ, ಧೃಢಪಾಶಮೋಚನಂ - ಬಲ್ಲಿತ್ತಾದಪಾಶಮೋಚನವು, ಆವಂದು - ಆದಕಾಲದಲ್ಲಿ, ಮೋಕ್ಷಂ - ಮುಕ್ತಿಯು, ದಿಟಂ - ಆ ಭಕ್ತಿಗೆ ಸಹಜವು, ಬಗೆಯಲ್ - ವಿಚಾರಿಸಲಾಗಿ, ಭಕ್ತಿಗೆ - ಆ ಶಿವಭಕ್ತಿಗೆ, ಸಂಸಾರಪಾಶ ಪ್ರಧಾನಗುಣಂ - ಸಂಸಾರಪಾಶ - ಮಾಯಾಪಾಶವೆಂಬ, ಪ್ರಧಾನಗುಣಂ - ಮುಖ್ಯ ವಾದ ಹಗ್ಗವು, ಅದು - ತಾನು, ಸತ್ಯಂ - ದಿಟವಾಗಿ, ಉಂಟೆ - ಉಂಟಾದಪಕ್ಷ ದಲ್ಲಿ, ಬಂಧಮೋಕ್ಷಯುಗಳಂ - ಬಂಧಮೋಕ್ಷಂಗಳೆಂಬೆರಡು, ಉಂಟು - ಒಳವು, ಮತ್ತೆಲ್ಲಂ - ಉಳಿದುದೆಲ್ಲವೂ, ಪುಸಿ - ಮಿಥ್ಯೆ (ಆಕಾಶವು ವಾಯುಪಾಶದಿಂ ಬಂಧ ಮೋಕ್ಷಕ್ಕೊಳಗಾದಂದಿಗೆ ಭಕ್ತಿಗೆ ಸಂಸಾರಪಾಶದಿಂ ಬಂಧಮೋಕ್ಷಂಗಳು ದೊರ ಕೊಳ್ಳುವುವು, ಆ ಆಕಾಶಕ್ಕೆ ಇಲ್ಲದಬಳಿಕ ಆ ಭಕ್ತಿಗೆಯೂ ಇಲ್ಲವೆಂಬುದಭಿ ಪ್ರಾಯಂ). ೬೦

**ಭಾವಾರ್ಥಬೋಧಿನಿ :** ಗಗನವನ್ನು ಗಾಳಿಯೆಂಬ ಹಗ್ಗದಿಂದ ಬಿಗಿದು ಕಟ್ಟಿದಾಗ ಆ ಕಟ್ಟಿಗೆ ಆಕಾಶವು ಒಳಪಟ್ಟ ಪಕ್ಷದಲ್ಲಿ ಭಕ್ತಿಗೂ ಸಂಸಾರಪಾಶದಿಂದ ಕಟ್ಟುವಿಕೆಯು ಉಂಟಾಗಬಹುದು. ಆ ಗಗನಕ್ಕೆ ಆ ವಾಯುಪಾಶಬಂಧನದಿಂದ ವಿಮೋಚನವಾಗುವ ಪಕ್ಷದಲ್ಲಿ ಭಕ್ತಿಗೂ ನಿಜವಾಗಿ ಬಂಧಮೋಚನೆಯಾಗಬಹುದು. ಬಂಧಮೋಕ್ಷಗಳೆರಡೂ ಸಂಸಾರಪಾಶದ ಮುಖ್ಯ ಗುಣಗಳಾಗಿರುವವು. ಈ ಬಗೆಯ ಬಂಧಮೋಕ್ಷಗಳು ಶಿವಭಕ್ತಿಯಲ್ಲಿರುವುದುಂಟೇ ? ಉಂಟೆಂದು ಹೇಳುವುದು ಸುಳ್ಳು. ೬೦

**ಅವತಾರಿಕೆ :** ಶಿವಭಕ್ತಿಯಿಂ ಪುಟ್ಟಿದ ಜ್ಞಾನವು ಸಕಲ ಕರ್ಮಬಂಧನಗಳಂ ಪರಿಹರಿಪುದೆಂದು ಪೇಳುತ್ತಿರ್ದಪಂ.

**ಮತ್ತೇಭವಿಕ್ರೀಡಿತಂ**

ಸ್ಫಟಿಕಸ್ವಚ್ಛದ ಕಾಂತಿಯೊಳ್ಪವಿಲಸತ್ಪ್ರದ್ಯೋತನೋದ್ಯತ್ಪ್ರಭಾ
ಪಟಲಂ ಸಂಗಿಸೆ ವಹ್ನಿ ಪುಟ್ಟಿ ದಹಿಸುತ್ತಿರ್ಪಂತೆ ಸೊಂಕಲ್ಪರಿ
ಸ್ಫುಟಭಕ್ತಿಕ್ರಿಯೆಯೊಳ್ಪಸಾದಕಳೆ ಕೂಡಲ್ ಶಾಂಭವ ಜ್ಞಾನಮು
ತ್ಕಟಿಸಿ ಸ್ಪರ್ಶಪ ದೋಷಮಂ ಪ್ರಹರಿಸುತ್ತಿರ್ಕುಂ ಶಿವಾವಲ್ಲಭಾ ೬೧

**ಟೀಕೆ :** ಪ್ರವಿಲಸತ್ಪ್ರದ್ಯೋತನೋದ್ಯತ್ಪ್ರಭಾಪಟಲಂ - ಪ್ರವಿಲಸತ್ - ಮಿಗೆ ಒಪ್ಪುತ್ತಿರ್ಪ, ಪ್ರದ್ಯೋತನ - ಸೂರ್ಯನತ್ತಣಿಂ, ಉದ್ಯತ್-ಹೊರಹೊಮ್ಮುತ್ತಿರ್ಪ, ಪ್ರಭಾ - ಕಾಂತಿಯು, ಪಟಲಂ - ಸಮೂಹವು, ಸ್ಫಟಿಕ ಸ್ವಚ್ಛದ ಕಾಂತಿಯೊಳ್ - ಪಳುಕಿನ ನಿರ್ಮಲವಾದ ಕಾಂತಿಯುಲ್ಲಿ, ಸಂಗಿಸೆ - ಸಂಬಂಧಿಸಲಾಗಿ, ವಹ್ನಿ - ಆಗ್ನಿಯು, ಪುಟ್ಟಿ - ಉದಿಸಿ, ಸೋಂಕಲ್ - ಮುಟ್ಟಲಾಗಿ, ದಹಿಸುತ್ತಿರ್ಪಂತೆ - ಸುಡುವಹಾಂಗೆ, ಪರಿಸ್ಫುಟಭಕ್ತಿಕ್ರಿಯೆಯೊಳ್ - ಪರಿಸ್ಫುಟ - ಮಿಗಿವ್ಯಕ್ತವಾದ, ಭಕ್ತಿಕ್ರಿಯೆಯೊಳ್ - ಭಕ್ತಿವ್ಯಾಪಾರದಲ್ಲಿ, ಪ್ರಸಾದಕಳೆ – ಶಿವಚೈತನ್ಯವು, ಕೂಡಲ್ - ಸಂಬಂಧಿಸಲಾಗಿ, ಶಾಂಭವಜ್ಞಾನಂ - ಶಿವಸಂಬಂಧವಾದ ಜ್ಞಾನವು, ಉತ್ಕಟಿಸಿ - ವೆಗ್ಗಳಿಸಿ, ಸ್ಪರ್ಶಿಪ - ಸೋಂಕುವ, ದೋಷಮಂ - ಅವಿದ್ಯಾವರಣ ಮೆಂಬ ದೋಷವನ್ನು, ಪ್ರಹರಿಸುತ್ತಿರ್ಕುಂ - ಸಂಹಾರವ ಮಾಡುವುದು (ಈ ಅರ್ಥದಲ್ಲಿ — "ಜ್ಞಾನಾಗ್ನಿಸ್ಸರ್ವ ಕರ್ಮಾಣಿಭಸ್ಮಸಾತ್ಕುರುತೇಽರ್ಜುನ") ಎಂದೂ ಭಗವದ್ಗೀತಾ ವಚನವುಂಟು.

**ಭಾವಾರ್ಥಬೋಧಿನಿ :** ಪ್ರಕಾಶಿಸುವ ಸೂರ್ಯನ ಕಾಂತಿಸಮೂಹವು ಸ್ಫಟಿಕದ ಮೇಲೆ ಬಿದ್ದು ಅದರ ಸ್ವಚ್ಛವಾದ ಕಾಂತಿಯುಲ್ಲಿ ಕೂಡಿದಾಗ ಬೆಂಕಿಯು ಹುಟ್ಟಿ (ಹುಲ್ಲು ಮೊದಲಾದುದನ್ನು) ಸುಡುವಂತೆ ಶಿವಭಕ್ತಿಕ್ರಿಯೆಯಲ್ಲಿ ಶಿವ-ಚೈತನ್ಯವು ಕೂಡಿದಾಗ ಹುಟ್ಟಿದ ಶಿವಜ್ಞಾನವು ಕರ್ಮಬಂಧದೋಷವನ್ನು ಪರಿಹರಿ-ಸುವುದು. ಎಂದರೆ - ಶಿವಚೈತನ್ಯಮಯವಾದ ಶಿವಭಕ್ತಿಕ್ರಿಯೆಯಿಂದ ಜನಿಸಿದ ಶಿವಜ್ಞಾನವು ಸರ್ವಕರ್ಮದೋಷಗಳನ್ನು ನಾಶಮಾಡುವುದೆಂದು ತಾತ್ಪರ್ಯ. ೯೧

**ಶಾರ್ದೂಲ ವಿಕ್ರೀಡಿತ ವೃತ್ತಂ**

ಬೀಜಂ ಶಾಂಭವಭಕ್ತಿಯಂಕುರಮತಂ ಜ್ಞಾನಂ ಪ್ರಸಾದಂ ಫಳಂ
ಬೀಜಾಂಕೂರಫಳಾಖ್ಯಭಕ್ತಿವಿಮಲಜ್ಞಾನಪ್ರಸಾದತ್ರಯಂ
ರಾಜಿಪ್ಪಾತ್ಮತನುತ್ರಯೈಕ ಸುಖಭೋಗಪ್ರತ್ಯಯಪ್ರಕ್ರಿಯಾ
ಪೂಜಾಯೋಗಸಮಾಧಿನಿಷ್ಠೆಯೆ ಕಣಾ ಲಿಂಗಂ ಶಿವಾವಲ್ಲಭಾ ೯೨

**ಟೀಕೆ :** ಶಾಂಭವಭಕ್ತಿ - ಶಿವಸಂಬಂಧವಾವ ಭಕ್ತಿಯುಂ, ಬೀಜಂ-ಬಿತ್ತವು, ಜ್ಞಾನಂ - ಶಿವಜ್ಞಾನವೆಂಬುದೇ, ಅಂಕುರಮತಂ - ಮೊಳಕೆಯೆಂದು ಸಮ್ಮತವು, ಪ್ರಸಾದಂ - ಶಿವಚೈತನ್ಯವೇ, ಫಳಂ - ಫಳವು, ಬೀಜಾಂ......ತ್ರಯಂ - ಬೀಜಾಂಕುರ ಫಳಾಖ್ಯ - ಬೀಜ ಅಂಕುರ ಫಲವೆಂಬ ಪೆಸರನುಳ್ಳ, ಭಕ್ತಿ - ಶಿವಭಕ್ತಿಯು, ವಿಮಲ - ನಿರ್ಮಲವಾದ, ಜ್ಞಾನ - ಶಿವಜ್ಞಾನವು, ಪ್ರಸಾದ - ಶಿವಚೈತನ್ಯವು, ತ್ರಯಂ - ಈ ಮೂರು, ರಾಜಿಪ್ಪ - ಒಪ್ಪುತ್ತಿರ್ಪ, ಆತ್ಮ......ನಿಷ್ಠೆಯೆ - ಆತ್ಮ - ಶರಣನಾವ ತನ್ನ, ತನುತ್ರಯ - ತನುಮೂರರಲ್ಲಿ, ಏಕ - ಮುಖ್ಯವಾದ, ಸುಖ - ಪರಿಣಾಮದ, ಭೋಗ - ಅನುಭವಿಸುವುದರಲ್ಲಿಯು, ಪ್ರತ್ಯಯ - ಜ್ಞಾನದ, ಪ್ರಕ್ರಿಯಾ - ಕ್ರಮದಲ್ಲಿಯು, ಪೂಜಾ - ಅರ್ಚನೆಯಲ್ಲಿಯು, ಯೋಗ - ಶಿವಸಾಮರಸ್ಯದಲ್ಲಿಯು, ಸಮಾಧಿ - ಚಿತ್ತೈಕಾಗ್ರತೆಯಲ್ಲಿಯು, ನಿಷ್ಠೆಯೆ - ವಿಶ್ವಾಸವೆ, ಲಿಂಗಂ ಕಣಾ - ಮಹಾಲಿಂಗವೆಯಲಾ ? (ಭಕ್ತಿಜ್ಞಾನ ಪ್ರಸಾದದಿಂದೊಪ್ಪುವ ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯದಲ್ಲಿ ಸಂಬಂಧವಾಗಿರ್ಪ ಪೂಜಾಯೋಗ ಸಮಾಧಿಗಳ ವಿಶ್ವಾಸವೇ ಮಹಾಲಿಂಗಸ್ವರೂಪವೆಂಬುದಭಿಪ್ರಾಯಂ)

**ಭಾವಾರ್ಥಬೋಧಿನಿ :** ಶಿವಭಕ್ತಿಯೇ ಬೀಜವು. ಆ ಬೀಜದಿಂದುದ್ಭವಿಸಿದ ಅಂಕುರವೇ ಶಿವಜ್ಞಾನವು. (ವೃಕ್ಷವಾಗಿ ಪರಿಣಮಿಸುವ) ಆ ಅಂಕುರದ ಫಲವೇ ಶಿವಚೈತನ್ಯಮಯವಾದ ಶಿವಪ್ರಸಾದವು. ಶರಣನು ಈ ರೀತಿಯಾದ ಭಕ್ತಿ-ಜ್ಞಾನ-ಪ್ರಸಾದವೆಂಬ ಮೂರರಿಂದ ಒಪ್ಪುತ್ತಿರುವ ತನ್ನ ಸ್ಥೂಲ-ಸೂಕ್ಷ್ಮ-ಕಾರಣವೆಂಬ ತನುತ್ರಯದಲ್ಲಿ ಮುಖ್ಯವಾಗಿ ಭೋಗಿಸುವ ಶಿವಸುಖಾನುಭವದ ಜ್ಞಾನವುಳ್ಳವನಾಗಿದ್ದು, ಆತನ ಸ್ಥೂಲಾದಿತನುತ್ರಯಕ್ಕೆ ಸಂಬಂಧಿಸಿದ ಶಿವಪೂಜೆ ಶಿವಯೋಗ-ಸಮಾಧಿಗಳಲ್ಲಿಟ್ಟ ವಿಶ್ವಾಸವೇ ಮಹಾಲಿಂಗಸ್ವರೂಪವಾಗಿರುವುದು. ಎಂದರೆ- ಶಿವಸುಖಾನುಭವಿಯಾದ ಶರಣನ ಸ್ಥೂಲ-ಸೂಕ್ಷ್ಮ- ಕಾರಣವೆಂಬ ಮೂರು ಶರೀರಗಳೇ ಕ್ರಮವಾಗಿ ಭಕ್ತಿ-ಜ್ಞಾನ-ಪ್ರಸಾದ ಇವುಗಳ ಸ್ವರೂಪದಿಂದಿರುವವು. ಈ ತನುತ್ರಯದಲ್ಲಿ ಪರಿಪಿಡಿಯಿಂದ ಶರಣನು ಆಚರಿಸುವ ಪೂಜಾ-ಯೋಗ-ಸಮಾಧಿ ಇವುಗಳಲ್ಲಿನ ವಿಶ್ವಾಸವೇ ಲಿಂಗಸ್ವರೂಪವಾಗಿರುವುದೆಂದು ತಾತ್ಪರ್ಯ. ೯೨.

**ಅವತಾರಿಕೆ :** ಮಂತ್ರಯೋಗಿಗಳು ಪರೆ ಪಶ್ಯಂತಿ ಮಧ್ಯಮೆ ವೈಖರಿಯೆಂಬ

ಚತುರ್ವಿಧವಾದ ಶಬ್ದನಿಷ್ಪತ್ತಿಯೇ ಪ್ರಯೋಜನವೆಂಬರು. ಶಿವಶರಣರು ಆ ನಾಲ್ಕನೂ ಭಕ್ತಿಸ್ವರೂಪವಾಗಿಯೇ ಕಾಣ್ಬರೆಂದು ಪೇಳುತ್ತಿರ್ದಪಂ.

**ಮತ್ತೇಭವಿಕ್ರೀಡಿತಂ**

ಪರೆಯೇ ಮಾನಸಭಕ್ತಿ ಚಾಕ್ಷುಷಪದಂ ಪಶ್ಯಂತಿಯೇ ವಾಚಿಕ
ಸ್ಫುರಣಂ ಮಧ್ಯಮೆಯೇ ಗುರೂಕ್ತಿಮತದಿಂ ಸತ್ಕಾಯಕಂ ಭಕ್ತಿವೈ
ಖರಿಯೇ ನೋೞ್ಪೊಡೆಯಿಂತು ನಾಲ್ಕು ತೆರನಾಗಿರ್ಕುಂ ಮನಶ್ಚಕ್ಷುರು
ತ್ತರವಾಕ್ಕಾಯ ಚತುರ್ವಿಧ ಪ್ರಣಿಧಿಯೊಳ್ತಾನೇ ಶಿವಾವಲ್ಲಭಾ ೯೭

**ಟೀಕೆ :** ಮನಶ್ಚಕ್ಷುರುತ್ತರವಾಕ್ಕಾಯ ಚತುರ್ವಿಧ ಪ್ರಣಿಧಿಯೊಳ್-ಮನಃ-ಮನಸ್ಸು, ಚಕ್ಷುಃ - ನೇತ್ರವು, ಉತ್ತರ - ಇದಕ್ಕಿಂತಲೂ ಮೊದಲಾದ, ವಾಕ್-ಶಬ್ದವು, ಕಾಯ - ಶರೀರವು, ಚತುರ್ವಿಧ - ಈ ಚತುರ್ವಿಧವ, ಪ್ರಣಿಧಿಯೊಳ್ - ಯೋಗಮಾರ್ಗದಲ್ಲಿ ಪೇಳಲ್ಪಟ್ಟ ಧ್ಯಾನದಲ್ಲಿರ್ಪ, ತಾನೇ - ಅದುತಾನೇ, ಗುರೂಕ್ತಿಮತದಿಂ - ಶ್ರೀಗುರುನಿರೂಪದಿಂದೆ, ನೋೞ್ಪೊಡೆ - ವಿಚಾರಿಸಲಾಗಿ, ಪರೆಯೆ - ಪರಾಯೆಂಬುದೇ, ಮಾನಸಭಕ್ತಿ - ಮನದಲ್ಲಿ ಭಕ್ತಿಯು, ಪಶ್ಯಂತಿ - ಪಶ್ಯಂತಿಯೆಂಬುದೇ, ಚಾಕ್ಷುಷಪದಂ - ಚಕ್ಷುಸ್ಸಿಗೆ ಗೋಚರಮಪ್ಪ ಭಕ್ತಿಯು, ಮಧ್ಯಮೆಯೇ - ಮಧ್ಯಮೆಯೆಂಬುದೇ, ವಾಚಿಕಸ್ಫುರಣಂ - ವಾಕ್ಕಿನಿಂದ ತೋರಿದ ಭಕ್ತಿಯು, ವೈಖರಿಯೇ - ವೈಖರಿಯೆಂಬುದೇ, ಸತ್ಕಾಯಕಂ - ಒಳ್ಳಿತ್ತಾದ ಕಾಯಕರೂಪವಾದ, ಭಕ್ತಿ - ಭಕ್ತಿಯು, ಇವು - ಇವು ತಾನು, ಇಂತು - ಈ ಪ್ರಕಾರದಿಂದೆ, ನಾಲ್ಕು ತೆರನಾಗಿರ್ಕುಂ - ಚತುರ್ವಿಧಭಕ್ತಿ ಸ್ವರೂಪವಾಗಿರ್ಪುವು.

**ಭಾವಾರ್ಥಬೋಧಿನಿ :** ಮಂತ್ರಯೋಗದಲ್ಲಿ ಪರೆ, ಪಶ್ಯಂತಿ, ಮಧ್ಯಮೆ, ವೈಖರಿಯೆಂಬ ಚತುರ್ವಿಧ ವಾಗ್ವೃತ್ತಿಯ ಉಪಾಸನೆಯು ಮುಖ್ಯವಾಗಿರುವುದು. ಆದರೆ ಶಿವಶರಣನ ಭಕ್ತಿಯೋಗದಲ್ಲಿ ಪರೆ ಮೊದಲಾದ ವಾಗ್ವೃತ್ತಿಯು ಭಕ್ತಿಮಯವಾಗಿ ಪರಿಣಮಿಸಿ ಎಂದರೆ ಪರೆಯು ಮಾನಸಭಕ್ತಿಯಾಗಿಯೂ, ಪಶ್ಯಂತಿಯು ಚಕ್ಷುಸ್ಸಿಗೆ ಗೋಚರವಾದ ಭಕ್ತಿಯಾಗಿಯೂ, ಮಧ್ಯಮೆಯು ವಾಕ್ಕಿನಿಂದ ತೋರುವ ಭಕ್ತಿಯಾಗಿಯೂ, ವೈಖರಿಯೇ ಕಾಯಸಂಬಂಧದ ಭಕ್ತಿಯಾಗಿಯೂ ಪರಿಣಮಿಸು

ವುದು. ಹೀಗೆ ಪರೆ ಮೊದಲಾದವುಗಳು ಚತುರ್ವಿಧ ಭಕ್ತಿಸ್ವರೂಪದಿಂದಿರುವವು. ಹೀಗಿರುವುದು ಗುರೂಪದೇಶಸಮ್ಮತವಾಗಿರುವುದು. ೯೩.

**ಮತ್ತೇಭವಿಕ್ರೀಡಿತಂ**

ಸ್ಮರಣಂ ಪ್ರೇಕ್ಷಣ ಮೀಳನಂ ಯಜನಮೆಂಬೀನಾಲ್ಕು ಸದ್ಭಕ್ತಿಯೊ
ಳ್ಪರಿಣಾಮಂಬಡೆಯಲ್ಕೆ ಲಿಂಗನಿಜಲೀಲಾಲೋಲ ಶೀಲತ್ವದಿಂ
ಪರೆ ಪಶ್ಯಂತಿ ಸುಮಧ್ಯೆ ವೈಖರಿಯೆನಿಪ್ಪಾಕಾರಮಂ ಸಾದರಂ
ಧರಿಸಿರ್ಪೊಂದಿರವಂ ಮಹತ್ತರಮನೇನೆಂಬೆಂ ಶಿವಾವಲ್ಲಭಾ ೯೪

**ಟೀಕೆ** : ಲಿಂಗನಿಜಲೀಲಾಲೋಲಶೀಲತ್ವದಿಂ - ಲಿಂಗನಿಜ - ಸಹಜವಾದ ಮಹಾಲಿಂಗದ, ಲೀಲಾ – ವಿಲಾಸದಲ್ಲಿ, ಲೋಲ – ಲವಲವಿಕೆಯುಳ್ಳ, ಶೀಲತ್ವದಿಂ - ಸ್ವಭಾವವುಂಟಪ್ಪುದರಿಂ, ಪರಿಣಾಮಂಬಡೆಯಲ್ಕೆ - ಭಕ್ತಿಸುಖವಂ ಪಡೆಯುವುದಕ್ಕೆ, ಸ್ಮರಣಂ - ಶಿವಲಿಂಗದ ಸ್ಮರಣೆಯು, ಪ್ರೇಕ್ಷಣಂ - ಶಿವಲಿಂಗದ ನೋಟವು, ಈಳನಂ - ಶಿವಲಿಂಗದಸ್ತುತಿಯು, ಯಜನಂ - ಶಿವಲಿಂಗಪೂಜೆ, ಎಂಬೀನಾಲ್ಕು -ಹೀಗೆಂಬನಾಲ್ಕು, ಸದ್ಭಕ್ತಿಯೊಳ್ - ಅಕಳಂಕವಾದ ಭಕ್ತಿಯಲಿ, ಪರೆ ಪಶ್ಯಂತಿ ಸುಮಧ್ಯೆ ವೈಖರಿಯೆನಿಪ್ಪ - ಪರಾಪಶ್ಯಂತೀಮಧ್ಯಮಾವೈಖರಿಗಳೆಂಬ, ಆಕಾರಮಂ - ಸ್ವರೂಪವನು, ಸಾದರಂ - ಪ್ರೀತಿಸಹಿತಮಪ್ಪಂತೆ, ಧರಿಸಿರ್ಪ - ತಾಳಿರ್ಪ, ಒಂದಿರವಂ - ಒಂದುನಿಲುಗಡೆಯನ್ನು, ಮಹತ್ತರಮಂ - ಅಧಿಕತರವಾದುದನು, ಏನೆಂಬೆಂ - ಏನೆಂದು ಹೇಳುವೆನು. ೯೪

**ಭಾವಾರ್ಥಬೋಧಿನಿ** : ಸಹಜವಾದ ಮಹಾಲಿಂಗದ ಲೀಲೆಯ ಆಸಕ್ತಿಯೇ ಸ್ವಭಾವವಾಗುಳ್ಳ ಶರಣನು ಭಕ್ತಿಸುಖಾನುಭವವನ್ನು ಪಡೆವುದಕ್ಕಾಗಿ – ಲಿಂಗಸ್ಮರಣ - ಲಿಂಗದರ್ಶನ - ಲಿಂಗಸ್ತುತಿ - ಲಿಂಗಪೂಜೆಯೆಂಬ ಚತುರ್ವಿಧ ಭಕ್ತಿಯಲ್ಲಿಯೇ ಕ್ರಮವಾಗಿ ಪರೆ, ಪಶ್ಯಂತಿ, ಮಧ್ಯಮೆ, ವೈಖರಿಯೆಂಬ ನಾಲ್ಕರ ಸ್ವರೂಪವನ್ನು ಧರಿಸಿರುವ ರೀತಿಯು ಅಧಿಕತರವಾಗಿರುವುದು. ಆತನ ಆ ರೀತಿಯನ್ನು ನಾನೇನು ಹೇಳಲಿ! ೯೪

**ಮತ್ತೇಭವಿಕ್ರೀಡಿತಂ**

ಸ್ಮರಿಸುತ್ತೀಕ್ಷಿಸು ತಿಳೀಸುತ್ತೆ ಯಜಿಸುತ್ತಾನಂದದಿಂ ಭಕ್ತಿಶಾಂ
ಕರಿನಿತ್ಯಂ ನಿಜಲಿಂಗಸಂಗರತಿಯೊಳ್ಸಮ್ಯಕ್ಸಮಾಧಿಕ್ರಿಯಾ
ಚರಣಂಬೆತ್ತು ಚತುರ್ವಿಭಾಗವಿಡಿದಿರ್ಪ್ಪಾನಿಷ್ಠೆ ತಾನೀಗಳೇ
ಪರೆ ಪಶ್ಯಂತಿ ಸುಮಧ್ಯೆ ವೈಖರಿಯೆನಲ್ತೋರ್ಕುಂ ಶಿವಾವಲ್ಲಭಾ ೯೫

**ಟೀಕೆ :** ಭಕ್ತಿಶಾಂಕರಿ - ಶಿವಸಂಬಂಧವಾದ ಭಕ್ತಿಯು, ನಿತ್ಯಂ - ಆವಾಗಳೂ, ನಿಜಲಿಂಗಸಂಗರತಿಯೋಳ್ - ನಿಜ - ಸ್ವಕೀಯವಾದ, ಲಿಂಗ - ಮಹಾ ಲಿಂಗದೊಡನೆ, ಸಂಗ - ಸಂಪರ್ಕದಲ್ಲಿ, ರತಿಯೋಳ್ - ತಾತ್ಪರ್ಯದಲ್ಲಿ, ಸ್ಮರಿಸುತ್ತೆ - ನೆನೆವುತ್ತ, ಈಕ್ಷಿಸುತ್ತೆ - ನೋಡುತ್ತೆ, ಈಳಿಸುತ್ತೆ - ಸ್ತುತಿಸುತ್ತ, ಆನಂದದಿ-ಪರಮಾನಂದದಿಂದ, ಸಮ್ಯಕ್ಸಮಾಕ್ರಿಯಾಚರಣಂ ಬೆತ್ತು - ಸಮ್ಯಕ್- ಚೆನ್ನಾಗಿ, ಸಮಾಧಿ - ಚಿತ್ತೈಕಾಗ್ರತೆಯು, ಕ್ರಿಯಾ - ವ್ಯಾಪಾರದ, ಆಚರಣಂ ಬೆತ್ತು - ಆಚರಿಸುವುದನ್ನು ತಾಳ್ದು, ಚತುರ್ವಿಭಾಗವಿಡಿದಿರ್ಪ್ಪ - ನಾಲ್ಕುವಿಧವಾದ ವಿಭಾಗವನು ಧರಿಸಿಕೊಂಡಿರ್ದ, ಆ ನಿಷ್ಠೆ - ಆ ಶಿವಭಕ್ತಿಯು, ತಾನೀಗಳೇ - ತಾನೀಗ, ಪರೆಪಶ್ಯಂತಿಸುಮಧ್ಯೆವೈಖರಿಯೆನಲ್ – ಪರಾ ಪಶ್ಯಂತೀ ಮಧ್ಯಮಾ ವೈಖರಿಯೆಂಬ ನಾಮಂಗಳಂ ತಾಳ್ದು, ತೋರ್ಕುಂ - ತೋರುತ್ತಿರ್ಪುದು. ೯೫

**ಭಾವಾರ್ಥಬೋಧಿನಿ :** ಶರಣನು ಯಾವಾಗಲೂ ಸ್ವಕೀಯಲಿಂಗಸಂಗದ ರತಿಯಲ್ಲಿರ್ದು, ಲಿಂಗವ ನೆನೆವುತ್ತೆ, ಈಕ್ಷಿಸುತ್ತೆ, ಸ್ತುತಿಸುತ್ತೆ, ಪೂಜಿಸುತ್ತೆ ಆನಂದಿಸುವ ದೃಢತರವಾದ ಚಿತ್ತೈಕಾಗ್ರತೆಯ ಆಚರಣೆಯನ್ನು ಪಡೆದಿರುವದು. ಆತನ ಲಿಂಗಸ್ಮರಣಾದಿ ಚತುರ್ವಿಧ ವಿಭಾಗವನ್ನು ಪಡೆದಿರುವ ಶಿವಭಕ್ತಿಯೇ–ಪರಿ ವಿಡಿಯಿಂದ ಪರೆ, ಪಶ್ಯಂತಿ, ಮಧ್ಯಮೆ, ವೈಖರಿಯೆಂಬ ನಾಮುಗಳನ್ನು ತಾಳ್ದು ತೋರುತ್ತಿರುವುದು. ೯೫

**ಅವತಾರಿಕೆ :** ಕರ್ಮಜ್ಞಾನಕಾಂಡಂಗಳತ್ತಣಿಂದುತ್ತರಮಾದ ಭಕ್ತಿ- ಕಾಂಡಮಂ ಪೇಳುತ್ತಿರ್ದಪಂ.

**ಶಾರ್ದೂಲ ವಿಕ್ರೀಡಿತ ವೃತ್ತಂ**

ಆನೆಂದೆಂಬುದು ಕರ್ಮಕಾಂಡಮತ ಮೆಲ್ಲಾಕೃತ್ಯಕರ್ತೃತ್ವದೊ
ಳ್ತಾನಲ್ಲೀ ಕರಣಾಳಿ ಸಾಕ್ಷಿಯಹೆನೆಲ್ಲಕ್ಕೆಂಬುದೇ ಜ್ಞಾನಕಾಂ
ಡಾನುಷ್ಠಾನಮತಂ ಸಮಸ್ತಕರಣಂ ಕರ್ತವ್ಯಮುಂ ಕರ್ತೃವುಂ
ನೀನೇ ಎಂಬುದು ಭಕ್ತಿಕಾಂಡಮತನಿರ್ವಾಹಂ ಶಿವಾವಲ್ಲಭಾ ೯೭

**ಟೀಕೆ :** ಎಲ್ಲಾ ಕೃತ್ಯಕರ್ತೃತ್ವದೊಳ್ - ಎಲ್ಲಾ - ಸಮಸ್ತವಾದ, ಕೃತ್ಯ-ಕಾರ್ಯದ, ಕರ್ತೃತ್ವದೊಳ್ - ಒಡೆತನದಲ್ಲಿ, ಆನೆಂದೆಂಬುದು - ನಾನೆಂದಭಿಮಾನಿಸುವುದು, ಕರ್ಮಕಾಂಡಮತಂ - ಕರ್ಮಕಾಂಡದ ಮತವು, ಈ ಅರ್ಥದಲ್ಲಿ—

"ಅಹಂ ಕರ್ತಾಸಮಸ್ತಸ್ಯ ಧರ್ಮಾಧರ್ಮಸ್ಯಕರ್ಮಣಃ
ಇತ್ಯನೇನಾಭಿಮಾನೇನ ಕರ್ಮಕಾಂಡೋಽಯಮುಚ್ಯತೇ

ಎಂದುಂಟು. ತಾಂಅಲ್ಲ - ಈ ಕಾರ್ಯಕ್ಕೆ ನಾನಲ್ಲ, ಈ ಕರಣಾಳಿಸಾಕ್ಷಿಯಹೆಂ ಎಲ್ಲಕ್ಕೆ - ಈ ಇಂದ್ರಿಯಂಗಳೆಲ್ಲವಕ್ಕೂ ನಾನೇ ಸಾಕ್ಷಿಯಪ್ಪೆನು, ಎಂಬುದೇ - ಹೀಗೆಂಬುದೇ, ಜ್ಞಾನಕಾಂಡಾನುಷ್ಠಾನಮತಂ - ಜ್ಞಾನಕಾಂಡಾಚರಣೆಯ ಮತವು, ಈ ಅರ್ಥದಲ್ಲಿ—

"ನಾಹಂಕರ್ತಾಽಸ್ಯಕರ್ತೃತ್ವಂ ನೈವಸಾಕ್ಷೀಸ್ವಭಾವತಃ
ಇತ್ಯನೇನಾಭಿಮಾನೇನ ಜ್ಞಾನಕಾಂಡೋಽಯಮುಚ್ಯತೇ"

ಎಂದುಂಟು. ಸಮಸ್ತಕರಣಂ - ಸಮಸ್ತ - ಸಕಲವಾದ, ಕರಣಂ - ಮಾಡುವತನವೂ, ಕರ್ತವ್ಯಂ - ಮಾಡಲ್‌ತಕ್ಕವಸ್ತುವೂ, ಕರ್ತೃವುಂ - ಮಾಡುವಾತನೂ, ನೀನೇ ಎಂಬುದು - ಹೀಗೆಂಬುದು, ಭಕ್ತಿಕಾಂಡಮತನಿರ್ವಾಹಂ - ಭಕ್ತಿಕಾಂಡ ಮತದನಿರುಗೆಯು, ಈ ಅರ್ಥದಲ್ಲಿ—

"ನಕಾರ್ತಾಹಂ ನಸಾಕ್ಷೀಚ ಶಿವಏವೇತಿಕರ್ಮಣಃ
ದ್ವಯಾಭಿಮಾನರಾಹಿತ್ಯಂ ಭಕ್ತಿಕಾಂಡೋಽಯಮುಚ್ಯತೇ"

ಎಂದುಂಟು. ೯೭

**ಭಾವಾರ್ಥಬೋಧಿನಿ :** ಸಮಸ್ತಕಾರ್ಯದ ಒಡೆತನದಲ್ಲಿ, ನಾನೇ ಎಂಬಭಿಮಾನವಿರುವುದೇ ಕರ್ಮಕಾಂಡದ ಮತವು. ಈ ಕಾರ್ಯಜಾತವನ್ನು ಮಾಡುವವನು ನಾನಲ್ಲ. ಇಂದ್ರಿಯಗಳು ಮಾಡುವವು, ಆ ಇಂದ್ರಿಯಗಳಿಗೆ ನಾನು ಸಾಕ್ಷಿಯಾಗಿದ್ದೇನೆ, ಎಂಬುದೇ ಜ್ಞಾನಕಾಂಡದ ಮತವು. ಎಲ್ಲಾ ಕಾರ್ಯದ ಕರಣವೂ, ಕರ್ತವ್ಯವೂ, ಕರ್ತೃವೂ ನೀನೇ ಎಂದಿರುವುದು ಭಕ್ತಿಕಾಂಡದ ಮತವೆನಿಸುವುದು. ೯೬

**ಶಾರ್ದೂಲ ವಿಕ್ರೀಡಿತ ವೃತ್ತಂ**

ಕರ್ಮಜ್ಞಾನ ಶಿವೈಕಭಕ್ತಿಯೆನಿಪೀ ಕಾಂಡತ್ರಯಾನುಷ್ಠಿತಂ
ಕರ್ಮಂ ತಾಂ ಪ್ರಕಟಂ ರಹಸ್ಯಮುಭಯಾನ್ಯತ್ವ ಪ್ರಕಾರಕ್ರಮಂ
ವರ್ಮಾವರ್ಮ ವಿಧಾನಯೋಗ ವಿವಿಧಾಶೇಷ ಸ್ವಕರ್ತವ್ಯದೊ
ಳ್ನೈರ್ಮಲ್ಯಂ ತನಗಪ್ಪ ಶುದ್ಧಿಕರಣೋಪಾಯಂ ಶಿವಾವಲ್ಲಭಾ ೯೭

**ಟೀಕೆ :** ಕರ್ಮಜ್ಞಾನಶಿವೈಕಭಕ್ತಿಯೆನಿಪ - ಕರ್ಮಜ್ಞಾನಶಿವೈಕಭಕ್ತಿಯೆನಿಸುವ, ಈ ಕಾಂಡತ್ರಯಾನುಷ್ಠಿತಂ - ಈ ಪೇಳ್ದಮೂರು ಕಾಂಡಂಗಳಿಂದಪ್ಪನುಷ್ಠಾನಕ್ರಮವೆಂತೆಂದೊಡೆ, ಕರ್ಮಂತಾಂ - ಕರ್ಮವೆಂಬುದು ತಾನು, ಪ್ರಕಟಂ - ವ್ಯಕ್ತವಾಗಿರ್ಪುದು, ರಹಸ್ಯಂ – ಜ್ಞಾನಕಾಂಡವೆಂಬುದು ಗೂಢವಾಗಿರ್ಪುದು, ಉಭಯಾನ್ಯತ್ವಪ್ರಕಾರಕ್ರಮಂ - ಉಭಯ - ಕರ್ಮಜ್ಞಾನವೆಂಬೆರಡಕ್ಕಿಂದೆಯೂ, ಅನ್ಯತ್ವ – ಬೇರಪ್ಪಶಿವಭಕ್ತಿಯ, ಪ್ರಕಾರ - ಮಾರ್ಗವ, ಕ್ರಮಂ - ಲಕ್ಷಣವು, ವರ್ಮಾವರ್ಮವಿಧಾನಯೋಗ ವಿವಿಧಾಶೇಷಸ್ವಕರ್ತವ್ಯದೋಳ್ - ವರ್ಮ-ಅಂಗದ, ಅವರ್ಮ - ಲಿಂಗದ, ವಿಧಾನ - ಉಪಾಸನೆಯಮಾಡುವಲ್ಲಿಯ, ಯೋಗ - ಜ್ಞಾನದಿಂದ, ವಿವಿಧ - ಅನೇಕ ಪ್ರಕಾರವಾದ, ಅಶೇಷ - ಸಮಸ್ತವಾದ, ಸ್ವಕರ್ತವ್ಯದೊಳ್ - ತಾಮಾಡಲ್ತಕ್ಕುದರಲ್ಲಿ, ತನಗೆ - ಶರಣಂಗೆ, ನೈರ್ಮಲ್ಯಂಅಪ್ಪ-ನಿರ್ಮಲಸ್ವರೂಪವಾದ, ಶುದ್ಧಿಕರಣೋಪಾಯಂ – ಪರಿಶುದ್ಧಿಯ ಮಾಡುವುದಕ್ಕುಪಾಯವು. ೯೭

**ಭಾವಾರ್ಥಬೋಧಿನಿ :** ಕರ್ಮ - ಜ್ಞಾನ - ಭಕ್ತಿಗಳೆಂಬ ಮೂರುಕಾಂಡಗಳ ಆಚರಣದ ರೀತಿಯು ಹೀಗಿರುವುದು – ಕರ್ಮಾಚರಣವು ವ್ಯಕ್ತವಾಗಿರುವುದು.

ಜ್ಞಾನಕಾಂಡವು ಗೂಢವಾಗಿರುವುದು. ಈ ಕರ್ಮಜ್ಞಾನಕಾಂಡಗಳಿಗಿಂತಲೂ ಬೇರೆಯಾದ ಶಿವಭಕ್ತಿಮಾರ್ಗವು, ಶರಣನು ಲಿಂಗಾಂಗಯೋಗದಲ್ಲಿ ಆಚರಿಸುವ ಸಕಲ ಕ್ರಿಯೆಗಳಲ್ಲಿ ಲೇಪವಿಲ್ಲದೆ ಆತನಿಗೆ ಪರಿಶುದ್ಧಿಯನ್ನುಂಟುಮಾಡುವ ಉಪಾಯವಾಗಿರುವುದು. ೯೭

## ಶಾರ್ದೂಲ ವಿಕ್ರೀಡಿತ ವೃತ್ತಂ

ಆಯಾಸಂ ಪ್ರಕಟಂ ಸ್ವಕರ್ಮಕಮನಾಯಾಸಂ ರಹಸ್ಯಂ ಪರಂ
ಪ್ರಾಯಶ್ಚಿತ್ತ ವಿಧಾನಮಿಂತಿವೆರಡುಕ್ಕುಂ ಬಾಹ್ಯಮಾಗಿರ್ಪತ
ತ್ಪ್ರಾಯಶ್ಚಿತ್ತವಿಧಾನಮೆಂಬುಭಯನಾನ್ಯಂ ಭಾಕ್ತಿಕಂ ಶುದ್ಧ ನಿ
ರ್ಮಾಯಂ ಸೌಖ್ಯತರಂ ಶಿವಾರ್ಪಣಕರಂ ನಿತ್ಯಂ ಶಿವಾವಲ್ಲಭಾ ೯೮

**ಟೀಕೆ :** ಪ್ರಕಟಂ - ಪ್ರಸಿದ್ಧವಾದ, ಸ್ವಕರ್ಮಕಂ - ಕರ್ಮವೇ ತಾನಾಗಿರ್ಪುದು, ಆಯಾಸಂ - ಪ್ರಯಾಸವು, ರಹಸ್ಯಂ - ಗೂಢವಾದ, ಪ್ರಾಯಶ್ಚಿತ್ತ ವಿಧಾನಂ - ಆ ಕರ್ಮಕ್ಕೆ ಪ್ರಾಯಶ್ಚಿತ್ತವ ಮಾಡುವ, ಪರಂ - ಬೇರಾದ ಜ್ಞಾನವು, ಅನಾಯಾಸಂ - ಪ್ರಯಾಸವಿಲ್ಲದುದು, ಇಂತಿವೆರಡುಕ್ಕುಂ - ಈ ಕರ್ಮಜ್ಞಾನ ಕಾಂಡವೆರಡಕ್ಕೂ, ಬಾಹ್ಯಮಾಗಿರ್ಪ - ಬೇರಾಗಿರ್ಪ, ತತ್ಪ್ರಾಯಶ್ಚಿತ್ತ ವಿಧಾನಂ - ತತ್ - ಆ ಜ್ಞಾನಕರ್ಮಂಗಳಿಗೆ, ಪ್ರಾಯಶ್ಚಿತ್ತ ವಿಧಾನಂ - ಪರಿಶುದ್ಧಿಯ ಮಾಡುವುದು, ಎಂಬ - ಹೀಗೆಂಬ, ಉಭಯ - ಜ್ಞಾನ ಕ್ರಿಯೆಗಳೆರಡಕ್ಕೆ, ನಾನ್ಯಂ - ಬೇರಲ್ಲವಂಥ, ಭಾಕ್ತಿಕಂ - ಭಕ್ತಿಸಂಬಂಧವಾದ ಕಾಂಡವು, ಶುದ್ಧನಿರ್ಮಾಯಂ - ಶುದ್ಧ - ಪರಿಶುದ್ಧವಾಗಿ, ನಿರ್ಮಾಯಂ-ಪ್ರಪಂಚ ರಹಿತವು, ಸೌಖ್ಯತರಂ - ಪರಮಾನಂದಸ್ವರೂಪವಾಗಿರುವುದು, ಶಿವಾರ್ಪಣಕರಂ - ಶಿವಸಾಮರಸ್ಯಮಂ ಮಾಳ್ಪುದು, ನಿತ್ಯಂ - ಕೇಡಿಲ್ಲದುದು.

**ಭಾವಾರ್ಥಬೋಧಿನಿ** - ಪ್ರಸಿದ್ಧವಾದ ಕರ್ಮಕಾಂಡವು ಬಹು ಪ್ರಯಾಸಕರವಾದುದು. ಗೂಢವಾಗಿಯೂ ಕರ್ಮಕ್ಕೆ ಪ್ರಾಯಶ್ಚಿತ್ತವ ಮಾಡುವುದಾಗಿಯೂ ಇರುವ ಜ್ಞಾನಕಾಂಡವು ಪ್ರಯಾಸವಿಲ್ಲದುದಾಗಿರುವುದು. ಕರ್ಮಜ್ಞಾನಕಾಂಡವೆರಡಕ್ಕೂ ಮೀರಿದುದಾಗಿರ್ದು, ಆ ಕರ್ಮಜ್ಞಾನಗಳನ್ನು ಪರಿಶುದ್ಧಿಮಾಡುತ್ತ, ಆ ಕರ್ಮಜ್ಞಾನಗಳಿಗೆ ಬೇರೆಯಾಗದೆ ಎಂದರೆ, ಆ ಕರ್ಮಜ್ಞಾನಸಹಿತವಾಗಿರುವುದು. ಭಕ್ತಿಕಾಂಡವೆನಿಸುವುದು. ಈ ಭಕ್ತಿಕಾಂಡವು ಶುದ್ಧವೂ, ಮಾಯಾರಹಿತವೂ, ಪರಮಾನಂದಸ್ವರೂಪವೂ, ಶಿವಸಾಮರಸ್ಯಪ್ರದವೂ, ನಿತ್ಯವೂ ಆಗಿರುವುದು. ೯೮

**ಮತ್ತೇಭವಿಕ್ರೀಡಿತಂ**

ಅಣಿಮಾದ್ಯಷ್ಟ ಗುಣಪ್ರಸಿದ್ಧ ಮಹದೈಶ್ವರ್ಯಂ ನಿಜೈಶ್ವರ್ಯದೊ
ಳ್ತೃಣಸಾಧಾರಣ ಮಿಂದ್ರಜಾಲಕೃತಕಂ ಸ್ವಾಭೀಷ್ಟಸಂಸಿದ್ಧಿಯೊ
ಳ್ಮಣಿಮಂತ್ರೌಷಧಸಿದ್ಧಿಗಿದ್ದಿಗಳವೆಲ್ಲಂ ಭ್ರಾಂತಿಮಿಥ್ಯಾಮಯಂ
ಕ್ಷಣಿಕಂ ತಾನೆನಿಸಿರ್ಪ ಭಕ್ತಿಪದಮಿನ್ನೇನೋ ಶಿವಾವಲ್ಲಭಾ ೯೯

**ಟೀಕೆ :** ನಿಜೈಶ್ವರ್ಯದೊಳ್ - ಭಕ್ತಿಕಾಂಡವಾದತನ್ನೈಶ್ವರ್ಯದಲ್ಲಿ, ಅಣಿಮಾದ್ಯಷ್ಟಗುಣಪ್ರಸಿದ್ಧ ಮಹದೈಶ್ವರ್ಯಂ - ಅಣಿಮಾ - ಅಣಿಮೆ, ಆದಿ - ಮೊದಲಾದ, ಅಷ್ಟಗುಣ - ಎಂಟುಗುಣಗಳಿಂ, ಪ್ರಸಿದ್ಧ - ಪ್ರಖ್ಯಾತವಾದ, ಮಹದೈಶ್ವರ್ಯಂ - ದೊಡ್ಡಿತ್ತಾದ ಐಶ್ವರ್ಯವು, ತೃಣಸಾಧಾರಣಂ - ಹುಲ್ಲಿಗೆಸಮ, ಸ್ವಾಭೀಷ್ಟಸಂಸಿದ್ಧಿಯೊಳ್ - ತನ್ನಭಿಮತದ ಸಂಸಿದ್ಧಿಯಲ್ಲಿ, ಇಂದ್ರಜಾಲಕೃತಕಂ - ಇಂದ್ರಜಾಲದ ಹಾಗೆ ಕಪಟವಾದ, ಮಣಿಮಂತ್ರೌಷಧ ಸಿದ್ಧಿಗಳ್ - ಮಣಿ - ರಕ್ಷಾಮಣಿಯು, ಮಂತ್ರ - ಕುಟಿಲಮಂತ್ರಗಳು, ಔಷಧ - ನಾರುಬೇರುಗಳು, ಸಿದ್ಧಿ - ವಾದವಶ್ಯಸ್ತಂಭ ಮೊದಲಾದ ಸಿದ್ಧಿಯು, ಗಿದ್ದಿಗಳ್ - ನಗೆಗೆಡೆಯಾದ, ಅವೆಲ್ಲಂ - ಅವುತಾವೆಲ್ಲವೂ, ಭ್ರಾಂತಿ - ಭ್ರಮೆ, ಮಿಥ್ಯಾಮಯಂ-ಪುಸಿಯೇ ತಾನು, ಕ್ಷಣಿಕಂ ತಾಂ - ಒಂದು ಕ್ಷಣಕ್ಕೆ ತಾನುಕೆಟ್ಟು ಪೋಪುದು, ಎನಿಸಿರ್ಪ - ಹೀಂಗಿವೆಲ್ಲಮಂ ತೃಣೀಕರಿಸಿರ್ಪ, ಭಕ್ತಿಪದಂ - ಶಿವಭಕ್ತಿಮಾರ್ಗವು, ಇನ್ನೇನೋ- ಇನ್ನೆಂತಪ್ಪುದೊ ! ತಿಳಿಯಲಶಕ್ಯವೆಂಬುದರ್ಥ. ೯೯

**ಭಾವಾರ್ಥಬೋಧಿನಿ :** ಭಕ್ತಿಕಾಂಡದ ನಿಜವಾದ ಸಂಪತ್ತಿದ್ದರೆ ಆ ಸಂಪತ್ತಿಗೆ ಅಣಿಮಾದಿಯಾದ ಎಂಟು ತೆರದ ಐಶ್ವರ್ಯವು ತೃಣಕ್ಕೆ ಸಮಾನ. ಆ ಭಕ್ತಿಯ ಸಿದ್ಧಿಯಿದ್ದರೆ, ಆ ಸಿದ್ಧಿಯ ದೃಷ್ಟಿಯಲ್ಲಿ ರಕ್ಷಾಮಣಿಯೂ, ಕುಟಿಲಮಂತ್ರಗಳೂ, ಔಷಧವೂ ವಾದವಶ್ಯಸ್ತಂಭನಾದಿಸಿದ್ಧಿಯೆಂಬಿವೆಲ್ಲವೂ ನಗೆಗೆಡೆಯೂ, ಪುಸಿಯೂ, ಕ್ಷಣಿಕವೂ ಆಗಿ ತೋರುವವು. ಈ ಬಗೆಯಿಂದ ಎಲ್ಲವನ್ನೂ ತೃಣೀಕರಿಸಿದ ಭಕ್ತಿಮಾರ್ಗದ ಮಹತ್ವವನ್ನು ಹೇಳಲಶಕ್ಯವು. ೯೯

**ಶಾರ್ದೂಲ ವಿಕ್ರೀಡಿತ ವೃತ್ತಂ**

ನಾನಾಭಾವವಿಕಲ್ಪಕಲ್ಪಿತಸರಾಗದ್ವೇಷವಿಜ್ಞಾನಕ
ರ್ಮಾನುಷ್ಠಾನ ವಿಧಾನಲೋಕರಚನಾಡಂಭೋಕ್ತಿಕಾಭಕ್ತಿಸಂ
ಧಾನಾಚಾರನಿರಾಸಕೃತ್ಪ್ರಬಲಸಮ್ಯಗ್ಭಕ್ತಿಯೋಗಕ್ರಿಯಾ
ಜ್ಞಾನಧ್ಯಾನಪರೈಕನಿಷ್ಠಶತಕಂ ಪೂರ್ಣಂ ಶಿವಾವಲ್ಲಭಾ ೧೦೦

**ಟೀಕೆ :** ನಾನಾ......ಶತಕಂ - ನಾನಾ - ಅನೇಕವಾದ, ಭಾವ - ಭಿನ್ನ ಭಾವಂಗಳಲ್ಲಿಯು, ವಿಕಲ್ಪ - ಅದೋ ಇದೋ ಎಂಬ ಸಂದೇಹದಿಂದೆ, ಕಲ್ಪಿತ - ಕಲ್ಪಿಸಲ್ಪಡೆವ, ಸರಾಗದ್ವೇಷ - ರಾಗದ್ವೇಷಂಗಳೊಡನೆ ಕೂಡಿದ, ವಿಜ್ಞಾನಕರ್ಮ - ಕುತ್ಸಿತವಾದ ಜ್ಞಾನಕರ್ಮಂಗಳ, ಅನುಷ್ಠಾನ - ಆಚಾರದ, ವಿಧಾನ - ಮಾಡುವಲ್ಲಿಯು, ಲೋಕರಚನಾ - ಜನರಂಜನದಿಂದಾದ, ಡಂಭ - ಡಾಂಭಿಕವಾದ, ಉಕ್ತಿ - ವಚನಂಗಳುಳ್ಳ, ಕಾಭಕ್ತಿ - ಕಪಟಭಕ್ತಿಗಳ, (ಕಾಭಕ್ತಿಯೆಂಬ ಕೋಽ ಕಾಪಲಿಯೆಂಬಸೂತ್ರದಿಂ ಕು ಎಂಬ ಶಬ್ದಕ್ಕೆ ಕಾ ಎಂಬಾದೇಶವಾಗಿ, ಕುತ್ಸಿತಾ ಭಕ್ತಿಃ ಎಂದಾಯಿತು.) ಸಂಧಾನ-ಸಂಬಂಧದಿಂದಾದ, ಆಚಾರ - ದುರಾಚಾರಂಗಳ, ನಿರಾಸಕೃತ್ - ತಿರಸ್ಕಾರ ಮಾಡುತ್ತಿರ್ಪ, ಪ್ರಬಲ - ಮಹಾಸಾಮರ್ಥ್ಯವನುಳ್ಳ, ಸಮ್ಯಕ್ - ಚೆನ್ನಾದ, ಭಕ್ತಿಯೋಗ - ಶಿವಭಕ್ತಿಯೋಗದಲ್ಲಿಯು, ಕ್ರಿಯಾಜ್ಞಾನ - ಸತ್ಕ್ರಿಯಾಜ್ಞಾನಂಗಳ, ಧ್ಯಾನ - ಧ್ಯಾನದಲ್ಲಿ, ಪರ - ತಾತ್ಪರ್ಯವನುಳ್ಳ, ಏಕನಿಷ್ಠ - ಮುಖ್ಯವಾದ ನಿಷ್ಠೆಯನುಳ್ಳ, ಶತಕಂ - ನೂರುಪದ್ಯಗಳುಳ್ಳ ಪ್ರಬಂಧವು, ಭೋಃಶಿವಾವಲ್ಲಭಾ - ಎಲೈ ಪಾರ್ವತೀ ರಮಣನೆ, ಪೂರ್ಣಂ-ಸಂಪೂರ್ಣವಾದುದು.

**ಭಾವಾರ್ಥಬೋಧಿನಿ :** ಶಿವಾವಲ್ಲಭನೆ, ಬಹುವಿಧದ ಸಂಶಯಗಳಿಂದ ಯುಕ್ತವಾಗಿಯೂ, ರಾಗದ್ವೇಷಗಳಿಂದ ಕೂಡಿಯೂ ಇರುವ ಕನಿಷ್ಟತರದ ಕರ್ಮಜ್ಞಾನಮಾರ್ಗಗಳಿಗೆ ಸಂಬಂಧಿಸಿದ ಜನರಂಜಕವೂ ಡಾಂಭಿಕವೂ ಆದ ಕುತ್ಸಿತ ಭಕ್ತಿಯ ದುರಾಚಾರಗಳನ್ನು ತಿರಸ್ಕಾರಮಾಡುವ ಮಹಾಸಾಮರ್ಥ್ಯವುಳ್ಳ ಶಿವಭಕ್ತಿಯೋಗದ ಸತ್ಕ್ರಿಯಾಜ್ಞಾನಧ್ಯಾನಪರವಾದ ಮುಖ್ಯನಿಷ್ಠೆಯನುಳ್ಳ ಶತಕವು ಇಲ್ಲಿಗೆ ಪೂರ್ಣವಾದುದು. ೧೦೦

**ಅವತಾರಿಕೆ** . ಇನ್ನು ಆಚಾರ್ಯಂ ಪ್ರಬಂಧಾಂತ್ಯದಲ್ಲಿ ಸ್ವವಾಗ್ವೈಭವಮಂ ಪ್ರಕಟಿಸುತ್ತಿರ್ದಪಂ.

**ಮತ್ತೇಭವಿಕ್ರೀಡಿತಂ**

ಇದು ಸಾಕ್ಷಾಚ್ಛಿವಯೋಗಪಟ್ಟ ಸ್ಥಲಪರಬ್ರಹ್ಮಾಂಗಲಿಂಗೈಕ್ಯ ಸೌ
ಖ್ಯದ ಸದ್ಭಕ್ತಿ ಪರಾನುಭೂತಿಪರಮಜ್ಞಾನ ಕ್ರಿಯಾಚಾರ ಸಂ
ಪದ ಸೌಭಾಗ್ಯಸಮಗ್ರಸದ್ಗುರುಪದಪ್ರತ್ಯಕ್ಷ ಸಾದಾಕ್ಷರಾ
ಸ್ಪದ ವಾಕ್ಛ್ರೀಮುಖಮಾಯಿದೇವವಿಭುಸಂಪ್ರೋಕ್ತಂ
ಶಿವಾವಲ್ಲಭಾ ೧೦೧

**ಟೀಕೆ :** ಇದು-ಈ ಶತಕವೆಂಬುದು, ಸಾಕ್ಷಾತ್......ಪ್ರೋಕ್ತಂ - ಸಾಕ್ಷಾತ್ ಪ್ರತ್ಯಕ್ಷವಾದ, ಶಿವಯೋಗ - ಶಿವಸಾಮರಸ್ಯ ಬೋಧಕವಾದ, ಷಟ್‌ಸ್ಥಲ - ಷಟ್ ಸ್ಥಲವೆಂಬ, ಪರಬ್ರಹ್ಮ - ಪರಬ್ರಹ್ಮದಲ್ಲಿಯು, ಅಂಗಲಿಂಗೈಕ್ಯ - ಅಂಗಲಿಂಗ ಸಂಬಂಧದ, ಸೌಖ್ಯದ - ಪರಿಣಾಮವಂ ಕೊಡುವ, ಸದ್ಭಕ್ತಿ - ಅಕಳಂಕವಾದ ಭಕ್ತಿಯಲ್ಲಿಯು, ಪರಾನುಭೂತಿ - ಉತ್ಕೃಷ್ಟಾನುಭವದಲ್ಲಿಯು, ಪರಮ - ನಿರಧಿಕ ವಾದ, ಜ್ಞಾನಕ್ರಿಯಾಚಾರ - ಜ್ಞಾನಕ್ರಿಯಾಚರಣೆಗಳಿಗೆ, ಸಂಪದ - ಒಳ್ಳಿತ್ತಾದ ಸ್ಥಾನವಾದ, ಸೌಭಾಗ್ಯ - ಮಹಾಮಹಿಮೆಯಿಂ, ಸಮಗ್ರ - ಸಂಪೂರ್ಣವಾದ, ಸದ್ಗುರುಪದ - ಶ್ರೀಗುರುಚರಣಂಗಳ, ಪ್ರತ್ಯಕ್ಪ್ರಸಾದ - ಜ್ಞಾನಪ್ರಸಾದಸ್ವರೂಪ ವಾದ, ಅಕ್ಷರ-ವರ್ಣಂಗಳಿಗೆ, ಆಸ್ಪದ - ಸ್ಥಳವಾದ, ವಾಕ್ಛ್ರೀ-ವಾಗೈಶ್ವರ್ಯವು, ಮುಖ - ವದನದಲ್ಲುಳ್ಳ, ಮಾಯಿದೇವವಿಭು - ಮಾಯಿದೇವಪ್ರಭುವಿನಿಂ, ಸಂಪ್ರೋಕ್ತಂ - ಪೇಳಲ್ಪಟ್ಟುದು.

**ಭಾವಾರ್ಥಬೋಧಿನಿ :** ಶಿವಾವಲ್ಲಭನೆ, ಶಿವಸಾಮರಸ್ಯಬೋಧಕವಾದ ಷಟ್‌ಸ್ಥಲಬ್ರಹ್ಮವಿದ್ಯೆಯಿಂದ ಲಭಿಸುವ ಅಂಗಲಿಂಗಸಂಯೋಗಕ್ಕೆ ಸಂಬಂಧಿಸಿದ ಸೌಖ್ಯವನ್ನುಂಟುಮಾಡುವ ಸದ್ಭಕ್ತಿಯು ಮತ್ತು ನಿರತಿಶಯಜ್ಞಾನಕ್ರಿಯೆಗಳ ನೆಲೆ ಯಾದಾತನೂ, ಮಹಾಮಹಿಮಾಶಾಲಿಯಾದ ಸದ್ಗುರುವಿನ ಪಾದದಿಂದ ಪ್ರಾಪ್ತ ವಾದ ಜ್ಞಾನಪ್ರಸಾದರೂಪವರ್ಣಗಳಿಗೆ (ಷಟ್‌ಸ್ಥಲವಿದ್ಯೆಗೆ) ಸ್ಥಾನವಾದ ವಾಕ್ಸಂಪ ತ್ತಿನಿಂದ ಕೂಡಿದ ಮುಖವುಳ್ಳಾತನೂ ಆದ ಮಾಯಿದೇವ ಪ್ರಭುವಿನಿಂದ ಈ ಶತಕವು ಉಕ್ತವಾಗಿರುವುದು. ೧೦೧

**ಅವತಾರಿಕೆ :** ಸೋಮನೆಂಬ ಶಬ್ದವು ಪ್ರಣವದ ಸ್ವರೂಪವೆಂದು ಪೇಳು ತ್ತಿರ್ದಪಂ.

**ಶಾರ್ದೂಲ ವಿಕ್ರೀಡಿತ ವೃತ್ತಂ**

ಓಮಿತ್ಯಕ್ಷರಮಾತೃಕಾತ್ರಯದ ತದ್ವಾಕ್ಯಸ್ಥಮಾತ್ರಾತ್ರಯಂ
ನಾಮಂ ಶ್ರೀಮದುಮಾ ಎನಲ್ಪರತರಂ ದೀರ್ಘಂ ಮಕಾರಂ ದ್ವಿತೀ
ಯಾಮಾಸಪ್ರಥಮಾ ಉಕಾರಮುಭಯಂ ಗೂಡಿರ್ದುಮಾ ಸಾರ್ಥಕಂ
ಸೋಮಂ ಮಂತ್ರಭುವೈಪುರೀಶನೆನಲಾಂ ಧನ್ಯಂ ಶಿವಾವಲ್ಲಭಾ ೧೦೨

**ಟೀಕೆ :** ಓಮಿತ್ಯಕ್ಷರಮಾತೃಕಾತ್ರಯದ - ಓಮಿತಿ - ಓಂ ಎಂಬ, ಅಕ್ಷರ ಮಾತೃಕಾ - ಮಾತೃಕಾಕ್ಷರಂಗಳ, ತ್ರಯದ ಮೂರರ, ತದ್ವಾಕ್ಯಸ್ಥ-ಆ ಓಂ ಎಂಬ ವಾಕ್ಯದಲ್ಲಿರ್ಪ, ಮಾತ್ರಾತ್ರಯಂ - ಅಕಾರ ಉಕಾರ ಮಕಾರಗಳು ಮೂರು, ನಾಮಂ - ಪ್ರಾತಿಪದಿಕವು, ಶ್ರೀಮದುಮಾ ಎನಲ್ - ಶ್ರೀಮತ್ - ಒಪ್ಪುತ್ತಿರ್ಪ, ಉಮಾ ಎನಲ್ - ಉಮಾ ಎಂದೆನಲಾಗಿ, ಪರತರಂ - ಅಕ್ಷರಾಣಾಮಕಾರೋಸ್ಮಿ ಎಂಬುದರಿಂ ಪರತರವೆಂದೊಡೆ ಅಕಾರವು, ದೀರ್ಘಂ - ಆ ಅಕಾರವು ದೀರ್ಘ ವುಳ್ಳುದಾಗಿ, ಮಕಾರಂ - ಮಕಾರದೊಡನೆ ಕೂಡಲಾಗಿ, ದ್ವಿತೀಯಾ - ಎರಡನೆಯ ದಾದ, ಮಾ-ಮಾ ಎಂಬಕ್ಷರವಾದುದು, ಉಕಾರಂ-ಉಕಾರವು ಉಭಯಂಗೊಂಡಿರ್ದು 'ಉ' ಎಂಬುದೂ 'ಮಾ' ಎಂಬುದೂ ಕೂಡಿದ್ದು, ಉಮಾ - 'ಉಮಾ' ಎಂಬು ದಾದುದು, ಅದು, ಸಪ್ರಥಮಾ - ಸಕಾರವೇ ಮೊದಲುಳ್ಳುದಾಗಿ, ಸೋಮಂ - ಸೋಮನೆಂದು, ಸಾರ್ಥಕಂ - ಅನ್ವರ್ಥನಾಮವಾದುದು, ಮತ್ಪ್ರಭು - ಎನ್ನೊಡೆಯ ನಾದ, ಐಪುರೀಶನೆನಲ್ - ಜ್ಞಾನವೆಂಬ ಪಟ್ಟಣಕ್ಕಧೀಶ್ವರನೆನಲಾಗಿ, ಅಂ - ನಾನು, ಧನ್ಯಂ - ಕೃತಾರ್ಥನು, (ಈ ಅರ್ಥದಲ್ಲಿ—

"ಯಸ್ಯಾಮಾತ್ರಾತ್ರಯಂ ನಾಮವ್ಯತ್ಯಸ್ತ ಪ್ರಣವಾತ್ಮಕಂ
ಬಭೌಹ್ರಸ್ವದ್ವಯಂ ದೀರ್ಘಂ ದ್ವಿಮಾತ್ರತ್ವಾದುಮೈವಸಾ"

ಎಂಮುಂಟು.)

**ಭಾವಾರ್ಥಬೋಧಿನಿ :** ಓಂ ಎಂಬುದು ಅ+ಉ+ಮ ಎಂಬ ಮಾತೃಕಾಕ್ಷರ ತ್ರಯವುಳ್ಳುದಾಗಿದೆ. ಈ ಪ್ರಣವದ ಆದಿಯ ಅಕಾರವು ಅಂತ್ಯದ ಮಕಾರದೊಡನೆ ಕೂಡಿ ಮಾ ಎಂದಾದುದು. ಆ ಮಾಕಾರವು ಮಧ್ಯದ ಉಕಾರದೊಡನೆ ಸೇರಲಾಗಿ ಉಮಾ (ಪಾರ್ವತಿ) ಎಂಬ ನಾಮವು ರೂಪುಗೊಂಡಿತು. ಪ್ರಣವಸ್ವರೂಪಿಣಿ ಯಾದ ಈ ಉಮೆಯೊಡನೆ ಕೂಡಿ, ಸ + ಉಮಾ = ಸೋಮನೆಂಬ ಸಾರ್ಥಕ ನಾಮವು ಸಿದ್ಧವಾದುದು. ನನ್ನೊಡೆಯನಾದ ಆ ಸೋಮನನ್ನು ಜ್ಞಾನನಗರಿಗೆ ಅಧೀಶ್ವರನು (ಐಪುರಾಧೀಶ್ವರನು) ಎಂದು ಸ್ತುತಿಸಿ ನಾನು ಧನ್ಯನಾದೆನು. ೧೦೨

**ಅವತಾರಿಕೆ .** ಆಚಾರ್ಯನು ಈ ಶತಕವನೋದಿದವರ್ಗೆಯುಂ ಕೇಳಿದವರ್ಗೆ ಯುಂ ಫಲಮಂ ಪೇಳುತಿರ್ದಪಂ.

## ಮತ್ತೇಭವಿಕ್ರೀಡಿತಂ

ಇದನಾರೋದಿದವರ್ಗೆ ಕೇಳ್ದವರಿಗುದ್ಯದ್ಭಕ್ತಿಯೋಗಕ್ರಿಯಾ
ಸ್ಪದಸಮ್ಯಕ್ಪರಮಪ್ರಸನ್ನ ಪರಿಪೂರ್ಣೈಕಾಗ್ರನಿಷ್ಠಾನುಭೂ
ತಿದಸಚ್ಚಿತ್ಸುಖರೂಪನಿಷ್ಕಳ ಮಹಾಲಿಂಗೈಕ್ಯ ನಿರ್ವಾಣ ಸಂ
ಪದನಿತ್ಯತ್ವಮನೀವುದಯ್ಯ ಕೃಪೆಯಿಂ ನೀನೇ ಶಿವಾವಲ್ಲಭಾ ೧೦೩

**ಟೀಕೆ :** ಇದಂ - ಈ ಜ್ಞಾನ ಪ್ರತಿಪಾದಕವಾದ ಶತಕವನ್ನು ಆರ್ - ಆರಾದೊಡೆ, ಓದಿದವರ್ಗೆ-ಪಠಿಸಿದವರ್ಗೆಯೂ, ಕೇಳ್ದವರಿಗೆ-ಕೇಳಿದವರ್ಗೆಯೂ, ಉದ್ಯತ್ ನಿತ್ಯತ್ವಮಂ - ಉದ್ಯತ್ - ಪ್ರಕಾಶಿಸುತ್ತಿರ್ಪ, ಭಕ್ತಿಯೋಗ - ಭಕ್ತಿಸಂಬಂಧದಲ್ಲಿಯು, ಕ್ರಿಯಾ - ಸತ್ಕ್ರಿಯೆಗೆ, ಆಸ್ಪದ - ಸ್ಥಾನವಾದ, ಸಮ್ಯಕ್ - ಲೇಸಾದ, ಪರಮ, ಉತ್ಕೃಷ್ಟವಾದ, ಪ್ರಸನ್ನ - ನಿರ್ಮಲವಾದ, ಪರಿಪೂರ್ಣ - ಅಖಂಡಿತವಾದ, ಏಕಾಗ್ರ - ಚಿತ್ತೈಕಾಗ್ರತೆಯಲ್ಲಿಯು, ನಿಷ್ಠಾ - ವಿಶ್ವಾಸದಿಂದಲಾದ, ಅನುಭೂತಿ - ಜ್ಞಾನವನ್ನು, ದ-ಕೊಡುತ್ತಿರ್ಪ, ಸಚ್ಚಿತ್ಸುಖರೂಪ - ಸತ್ಯಜ್ಞಾನಾನಂದರೂಪವಾದ, ನಿಷ್ಕಳ - ಕಳಾತೀತವಾದ, ಮಹಾಲಿಂಗೈಕ್ಯ - ಮಹಾಲಿಂಗಸಾಮರಸ್ಯವೆಂಬ, ನಿರ್ವಾಣ - ಮೋಕ್ಷಕ್ಕೆ, ಸಂಪದ - ಸ್ಥಾನವಾದ, ನಿತ್ಯತ್ವಮಂ - ನಿತ್ಯತ್ವವನ್ನು, ಭೋ ಶಿವಾವಲ್ಲಭಾ - ಎಲೈ ಉಮಾರಮಣನೆ, ನೀನೆ – ನೀನುತಾನೆ, ಕೃಪೆಯಿಂ - ಕಾರುಣ್ಯದಿಂದೆ, ಈವುದಯ್ಯ - ಕೊಡುವುದಯ್ಯ.

### ಗದ್ಯ

ಇದು ಸಮಸ್ತಶಿವಯೋಗಿಜನಮನೋನಿಲಯ ಶ್ರೀಮನ್ನಿರಂಜನಲಿಂಗ ಚರಣಸರಸೀರುಹಸೌರಭಾಸಕ್ತ ಮತ್ತಮಧುಕರಾಯಮಾಣ ಷಟ್‌ಸ್ಥಲಸಿದ್ಧಾಂತ ಸಂಯೋಗಸನ್ಮಾರ್ಗಸಿದ್ಧಾಂತಸ್ಥಾಪನಾಚಾರ್ಯ ಪರಮಸುಜ್ಞಾನಸತ್ಕ್ರಿಯಾಯುಕ್ತ ಭಕ್ತಿಭರಿತಾಂತರಂಗ ಪ್ರಣವಪೂರ್ವಕಪಂಚಾಕ್ಷರೀ ಮಂತ್ರೋಚ್ಚಾರಿತ ಮಂಜುಳಭಾಷಾವಿಲಾಸನಪ್ಪ ತೋಂಟದ ಸಿದ್ಧಲಿಂಗದೇಶಿಕನಿಂ ವಿರಚಿತಮಪ್ಪ ಶ್ರೀ ಮದ್ವೀರಶೈವಾಚಾರಸಾರೋದ್ಧಾರಭಕ್ತಿಜ್ಞಾನವೈರಾಗ್ಯಪ್ರತಿಪಾದಕ ಶತಕತ್ರಯ ಮಹಾವ್ಯಾಖ್ಯಾನದೊಳ್ ಜ್ಞಾನಪ್ರತಿಪಾದಕ ಶಿವಾವಲ್ಲಭಶತಕಂ ಸಂಪೂರ್ಣಂ.

**ಭಾವಾರ್ಥಬೋಧಿನಿ:** ಶಿವಾವಲ್ಲಭನೆ, ನೀನು ಈ ಶತಕವನ್ನು ಓದುವವರಿಗೂ, ಕೇಳುವವರಿಗೂ ಭಕ್ತಿಗೆ ಸಂಬಂಧಿಸಿದ ಆಚರಣೆಗೆ ನೆಲೆಯಾಗಿಯೂ, ಉತ್ಕೃಷ್ಟವೂ, ನಿರ್ಮಲವೂ, ಅಖಂಡಿತವೂ ಆದ ಚಿತ್ತೈಕಾಗ್ರತೆಯ ನಿಷ್ಠೆಯಿಂದ ಪ್ರಾಪ್ತ-ವಾಗುವ ಅನುಭವವನ್ನು ಕೊಡುವುದಾಗಿಯೂ, ಸತ್ಯಜ್ಞಾನಾನಂದ ಸ್ವರೂಪ-ವಾಗಿಯೂ ಇರುವ ಲಿಂಗಾಂಗಸಾಮರಸ್ಯವೆಂಬ ನಿರ್ವಾಣದ ನಿತ್ಯಪದವಿಯನ್ನು ಕೃಪೆಯಿಂದ ನೀಡು. ೧೦೩

ಎಂಬಲ್ಲಿಗೆ ಜ್ಞಾನಪ್ರತಿಪಾದಕ ಶಿವಾವಲ್ಲಭಶತಕದ ಭಾವಾರ್ಥವು

**ಸಂಪೂರ್ಣಂ**

ಓಂ

# ಮಹದೈಪುರೀಶ್ವರಶತಕಂ

## ಉತ್ಪಲಮಾಲಾವೃತ್ತ

ಶ್ರೀಮದಪಾರಸಾರ ಕರುಣಾಮೃತಸಾಗರ ಭಕ್ತಲೋಕಚಿಂ
ತಾಮಣಿನೂತ್ನರತ್ನ ದಿವಿಜೇಂದ್ರಮುನೀಂದ್ರಗಣೇಂದ್ರ ದಿವ್ಯತೇ
ಜೋಮಯಮೌಳಿಮಂಡಿತಪದಾಂಬುಜ ಸರ್ವಗುಣಾಭಿರಾಮ ನಿ
ಸ್ಸೀಮ ಧೃತೇಂದುನೇಮ ಪರಮಪ್ರಭುವೇ ಮಹದೈಪುರೀಶ್ವರಾ ೧

### ಟೀಕಾಕಾರನ ಮಂಗಲಂ

ಕಂದ || ತನುಕರಣೇಂದ್ರಿಯ ಸುಖಗಳ
ನನವರತಂ ಬಿಡವ ಮನದ ಭ್ರಾಂತ್ರಿಯಡಗಿಪಾ
ಘನವೈರಾಗ್ಯಮ ನೊಲವಿಂ
ದೆನಗಿತ್ತೋವುದೆಲೆ ಗುರುನಿರಂಜನಲಿಂಗಾ

ಇಂತು ಆಚಾರ್ಯಂ ಶತಕದ್ವಯದಲ್ಲಿ ಭಕ್ತಿಜ್ಞಾನಂಗಳಂ ಪ್ರತಿಪಾದಿಸಿ, ಆ ಭಕ್ತಿಜ್ಞಾನಂಗಳು ವೈರಾಗ್ಯವಿಲ್ಲದೆ ದೊರಕೊಳ್ಳವಾಗಿ, ಮೂರನೆಯ ಶತಕದಲ್ಲಿ

ವೈರಾಗ್ಯಮಂ ಪೇಳಲುದ್ಯುಕ್ತನಾಗಿ, ಆದಿಯಲ್ಲಿ ಹತ್ತು ಪದ್ಯಗಳಿಂ ಸ್ವೇಷ್ಟದೇವತೆಯಾದ ಐಪುರದ ಸೋಮೇಶ್ವರನಂ ಸ್ತುತಿಸುತ್ತಿರ್ದಪಂ—

**ಟೀಕೆ :** ಶ್ರೀಮದಪಾರಸಾರ ಕರುಣಾಮೃತಸಾಗರ - ಶ್ರೀಮತ್ - ಒಪ್ಪುತ್ತಿರ್ಪ, ಅಪಾರ - ಕಡೆಯಿಲ್ಲದಿರ್ಪ, ಸಾರ - ಶ್ರೇಷ್ಠವಾದ, ಕರುಣ - ಕಾರುಣ್ಯಕ್ಕೆ, ಅಮೃತಸಾಗರ - ಕ್ಷೀರಸಮುದ್ರವಾದಾತನೆ, ಭಕ್ತಲೋಕ ಚಿಂತಾಮಳನೂತ್ನರತ್ನ– ಭಕ್ತಲೋಕ - ಭಕ್ತಜನರುಗಳ, ಚಿಂತಾ - ಬಯಕೆಗೆ, ಅಮಳ - ನಿರ್ಮಳವಾದ, ನೂತ್ನ - ಹೊಸದಾದ, ರತ್ನ - ರತ್ನವಾದಾತನೆ, ದಿವಿಜೇಂದ್ರ……ಪದಾಂಬುಜ - ದಿವಿಜೇಂದ್ರ - ದೇವೇಂದ್ರನ, ಮುನೀಂದ್ರ - ಮುನೀಶ್ವರರುಗಳ, ಗಣೇಂದ್ರ - ಗಣೇಶ್ವರರುಗಳ, ದಿವ್ಯ - ಒಪ್ಪುತ್ತಿರ್ಪ, ತೇಜೋಮಯ - ಕಾಂತಿಮಯವಾದ, ಮೌಳಿ - ಕಿರೀಟಂಗಳಿಂ, ಮಂಡಿತ - ಅಲಂಕರಿಸಲ್ಪಟ್ಟ, ಪದಾಂಬುಜ - ಪಾದಾರವಿಂದಗಳುಳ್ಳಾತನೆ, ಸರ್ವಗುಣಾಭಿರಾಮ - ಅನಂತಕಲ್ಯಾಣಗುಣಗಳಿಂದೊಪ್ಪುವಾತನೆ, ನಿಸ್ಸೀಮ - ಕಡೆಯಿಲ್ಲದಾತನೆ, ಧೃತೇಂದುನೇಮ - ಧರಿಸಲ್ಪಟ್ಟ ಚಂದ್ರಖಂಡವುಳ್ಳಾತನೆ, ("ನೇಮಾರ್ಧಭಿತ್ತಖಂಡಾನಿ" ಎಂದು ವೈಜಯಂತಿ) ಪರಮಪ್ರಭುವೇ - ಉತ್ಕೃಷ್ಟವಾದ ಸ್ವತಂತ್ರಕರ್ತೃವಾದಂಥ, ಮಹದೈಪುರೀಶ್ವರಾ -- ಮಹತ್ - ಪೂಜ್ಯವಾದ, ಐಪುರೀಶ್ವರಾ - ಜ್ಞಾನವೆಂಬ ಪಟ್ಟಣಕ್ಕೆ ಅಧೀಶ್ವರನಾದ ಎಲೈ ಸೋಮೇಶ್ವರನೆ, ಜಯ - ಸರ್ವೋತ್ಕೃಷ್ಟನಾಗು (ಇಲ್ಲಿ "ಜಯ"ವೆಂಬ ಕ್ರಿಯಾಧ್ಯಾಹಾರಮಂ ಹತ್ತು ಪದ್ಯಂಗಳಿಗೂ ಮಾಡಿಕೊಳ್ಳುವುದು).

**ಭಾವಾರ್ಥಬೋಧಿನಿ :** ಅಪಾರಸಾರ ಕರುಣಾಮೃತಸಾಗರನೂ, ಭಕ್ತಜನರಿಗೆ ನೂತ್ನಚಿಂತಾರತ್ನನೆನಿಸಿದವನೂ, ದೇವೇಂದ್ರ-ಮುನೀಂದ್ರರು-ಗಣೇಂದ್ರರು-ಇವರುಗಳಿಂದ ನಮಸ್ಕರಿಸಲ್ಪಟ್ಟ ಪಾದಾಂಬುಜಗಳುಳ್ಳವನೂ, ಸರ್ವಮಂಗಳಗುಣಶೋಭಿತನೂ, ನಿಸ್ಸೀಮನೂ, ಚಂದ್ರಾರ್ಧಮೌಳಿಯೂ, ಶ್ರೇಷ್ಠವಾದ ಸ್ವತಂತ್ರ ಕರ್ತೃವೂ, ಪೂಜ್ಯನೂ ಆದ ಮತ್ತು ಜ್ಞಾನವೆಂಬ ಪಟ್ಟಣಕ್ಕೆ ಅಧೀಶ್ವರನಾದ ಸೋಮೇಶ್ವರನೆ, ಸರ್ವೋತ್ಕೃಷ್ಟನಾಗು. ೧

**ಚಂಪಕಮಾಲಾವೃತ್ತಂ**

ವರವೃಷವೀರಭದ್ರ ಪ್ರಮುಖಸತ್ಪ್ರಮಥಪ್ರಕರಪ್ರಕೀರ್ಣ ಜಾ
ತರಜತಶೈಲಮೂಲಮಣಿಕೀಲವಿಶಾಲ ವಿಚಿತ್ರಮಂಟಪ
ಸ್ಥಿರತರತುಂಗಮಂಗಳ ಮೃಗಾಧಿಪಪೀಠಸುಖೋಪವಿಷ್ಟ ದೇ
ವರಮಣ ದೇವದೇವ ಪರಮಪ್ರಭುವೇ ಮಹದೈಪುರೀಶ್ವರಾ ೨

**ಟೀಕೆ :** ವರವೃಷ.........ಸುಖೋಪವಿಷ್ಟ, ವರ - ಶ್ರೇಷ್ಠನಾದ, ವೃಷಭ-ವೃಷಭೇಶ್ವರನು, ವೀರಭದ್ರ - ವೀರಭದ್ರನು, ಮುಖ - ಮೊದಲಾದ, ಸತ್ಪ್ರಮಥ-ಮಹಾಪ್ರಮಥಗಣಂಗಳ, ಪ್ರಕರ - ಸಮೂಹಂಗಳಿಂ, ಪ್ರಕೀರ್ಣ - ಹರವಲ್ಪಟ್ಟ, ಚಾರು - ರಮ್ಯವಾದ, ರಜತಶೈಲ - ಬೆಳ್ಳಿಯ ಬೆಟ್ಟದ, ಮೂಲ - ಮೊದಲಿನಲ್ಲಿಯು, ಮಣಿ - ರತ್ನಂಗಳಲ್ಲಿಯು, ದೀಪ್ತಿ - ಕಾಂತಿಗಳಿಂ, ವಿಶಾಲ - ವಿಸ್ತಾರವಾದ, ವಿಚಿತ್ರ - ಆಶ್ಚರ್ಯಕರವಾದ, ಮಂಟಪ - ಮಂಟಪದಲ್ಲಿ, ಸ್ಥಿರತರ - ಅತ್ಯಂತ ಸ್ಥಿರವಾದ, ತುಂಗ - ಉನ್ನತವಾದ, ಮಂಗಳ - ಪರಮಮಂಗಳ ಸ್ವರೂಪವಾದ, ಮೃಗಾಧಿಪಪೀಠ - ಸಿಂಹಾಸನದಲ್ಲಿ, ಸುಖ - ಸುಖಮಪ್ಪಂತೆ, ಉಪವಿಷ್ಟ - ಕುಳ್ಳಿರ್ಪಾತನೆ, ದೇವರಮಣ - ಬ್ರಹ್ಮವಿಷ್ಣ್ವಾದಿ ದೇವತಾವಲ್ಲಭನೆ, ದೇವದೇವ - ಇಂದ್ರಿಯಂಗಳಿಗೊಡೆಯನಾದ,('ಭಿಷೋಹಿದೇವಸ್ಸಹ ಸಸ್ಸಹೀಯಾನ್' ಎಂದು ತೈತ್ತಿರೀಯೋಪನಿಷತ್ತಿನಲ್ಲಿ "ದೇವ" ಎಂದೊಡೆ ಇಂದ್ರಿಯಕ್ಕೆ ಪೆಸರೆಂದು ತದ್ವ್ಯಾಖ್ಯಾನದಲ್ಲಿ ಉಂಟು). ಎಲೆ ಸೋಮೇಶ್ವರ, ಜಯ - ಸರ್ವೋತ್ಕೃಷ್ಟನಾಗು. ೨

**ಭಾವಾರ್ಥಬೋಧಿನಿ :** ಶ್ರೇಷ್ಠರಾದ ವೃಷಭೇಶ್ವರ ವೀರಭದ್ರರು ಮೊದಲಾದ ಮಹಾಪ್ರಮಥಗಣಂಗಳ ಸಮೂಹಗಳಿಂದ ತುಂಬಿದ ಕೈಲಾಸದಲ್ಲಿರುವ ಮಣಿಕಾಂತಿಭೂಷಿತವಾದ ವಿಸ್ತೃತಮಂಟಪದಲ್ಲಿ ಅತ್ಯಂತ ಸ್ಥಿರವಾದುದೂ, ಉನ್ನತವಾದುದೂ, ಮಂಗಳಮಯವಾದುದೂ ಆದ ಸಿಂಹಾಸನದಲ್ಲಿ ಸುಖದಿಂದ ಕುಳ್ಳಿರ್ಪಾತನೆ ! ಬ್ರಹ್ಮವಿಷ್ಣುವೇ ಮೊದಲಾದ ದೇವತೆಗಳ ಒಡೆಯನೆ ? ಸರ್ವೇಂದ್ರಿಯಂಗಳಧಿನಾಯಕನೆ ! ಸೋಮೇಶ್ವರನೆ ! ಸರ್ವೋತ್ಕೃಷ್ಟನಾಗು. ೨

## ಉತ್ಪಲಮಾಲಾವೃತ್ತ

ಭೂಮಿಧರಾತಪತ್ರಶತಪತ್ರ ಸುಪುತ್ರ ಸರೋಜಮಿತ್ರಸು
ತ್ರಾಮ ಸುಧಾಮಯೂಖ ದಿವಿಜಾತ ದಿತಿಪ್ರಭವೋರಗಾಪ್ಸರ
ಸ್ತೋಮ ನಿಬರ್ಹಣಪ್ರಳಯವಹ್ನಿಸಮಪ್ರಭಕಾಳಕೂಟಕೂ
ಟಾಮಳರಾಮಕಂಠ ಪರಮಪ್ರಭುವೇ ಮಹದೈಪುರೀಶ್ವರಾ ೩

**ಟೀಕೆ :** ಭೂಮಿಧರಾತಪತ್ರ...ಕಂಠ, ಭೂಮಿಧರಾತಪತ್ರ - ಗೋವರ್ಧನ ಗಿರಿಯೇ ಕೊಡೆಯಾಗುಳ್ಳ ವಿಷ್ಣುವು, ಶತಪತ್ರಸುಪುತ್ರ - ತಾವರೆಯಮಗನಾದ ಬ್ರಹ್ಮನು, ಸರೋಜಮಿತ್ರ - ಕಮಲಂಗಳಿಗೆ ಸಖನಾದ ಸೂರ್ಯನು, ಸುತ್ರಾಮ- ದೇವೇಂದ್ರನು, ಸುಧಾಮಯೂಖ - ಅಮೃತಕಿರಣನಾದ ಚಂದ್ರನು, ದಿವಿಜಾತ - ದೇವರ್ಕಳು, ದಿತಿಪ್ರಭವ - ರಾಕ್ಷಸರು, ಉರಗ - ನಾಗರ್ಕಳು, ಅಪ್ಸರಃ - ಅಪ್ಸರ ಸ್ತ್ರೀಯರು, ಸ್ತೋಮ - ಇವರ ಸಮೂಹಂಗಳನ್ನು, ನಿಬರ್ಹಣ - ಕೊಲ್ಲುತ್ತಿರ್ದ, ಪ್ರಳಯವಹ್ನಿಸಮ - ಪ್ರಳಯಕಾಲದಗ್ನಿಗೆ ಸರಿಯಾದ, ಪ್ರಭ - ಕಾಂತಿಯನುಳ್ಳ, ಕಾಳಕೂಟ - ಕಾಳಕೂಟವಿಷದ, ಕೂಟ - ಸಂಬಂಧದಿಂದ, ಅಮಳ - ನಿರ್ಮಳ ವಾಗಿ, ರಾಮ - ಒಪುತ್ತಿರ್ಪ, ಕಂಠ - ಕೊರಳನುಳ್ಳಾತನಾದ ಎಲೆ ಸೋಮೇಶ್ವರನೆ, ಜಯ - ಸರ್ವೋತ್ಕೃಷ್ಟನಾಗು. ೩

**ಭಾವಾರ್ಥಬೋಧಿನಿ :** ವಿಷ್ಣು - ಬ್ರಹ್ಮ - ಸೂರ್ಯ - ಚಂದ್ರ - ಇಂದ್ರ ಇವರೇ ಮೊದಲಾದ ದೇವತೆಗಳು ಮತ್ತು ರಾಕ್ಷಸರೂ, ನಾಗರೂ, ಅಪ್ಸರಸ್ತ್ರೀಯರು ಇವರೆಲ್ಲರ ಸಮೂಹವನ್ನು ನಾಶಗೊಳಿಸುವ ಪ್ರಳಯಕಾಲಾಗ್ನಿಗೆ ಸದೃಶವಾದ ತೇಜಸ್ಸುಳ್ಳ ಕಾಳಕೂಟವಿಷದ ಸಂಬಂಧದಿಂದ ಸೊಗಸಾಗಿ ಶೋಭಿಸುವ ಕಂಠವುಳ್ಳ ವನಾದ ಸೊಮೇಶ್ವರನೆ ! ಸರ್ವೋತ್ಕೃಷ್ಟನಾಗು. ೩

## ಉತ್ಪಲಮಾಲಾವೃತ್ತಂ

ದಾರುವನಾಶ್ರಯಾಶ್ರಿತ ತಪೋಜಪಹೋಮಯಮಾದಿಸತ್ಕ್ರಿಯಾ
ಚಾರವಿಯುಕ್ತಮಾರ್ಗ ನಿಯತದ್ವಿಜರಾಜವಧೂಜನಸ್ಮರಾ
ಪಾರವಿಕಾರತಾಪಕೃತಿಕಾರಣಭಿಕ್ಷುಕವೇಷಕೃತ್ರಿಮಯಾ
ಕಾರಕಳಾವಿಳಾಸ ಪರಮಪ್ರಭುವೇ ಮಹದ್ವೈಪುರೀಶ್ವರಾ ೪

**ಟೀಕೆ :** ದಾರುವನಾ.........ವಿಳಾಸ - ದಾರುವನಾಶ್ರಯ - ದಾರುವನ ವೆಂಬಾಶ್ರಯದಲ್ಲಿ, ಆಶ್ರಿತ - ನೆಲಸಿದಂಥ, ತಪಃ - ಚಾಂದ್ರಾಯಣಾದಿ ತಪವು, ಜಪ - ಮಂತ್ರಜಪವು, ಹೋಮ - ಹವನವು, ಯಮಾದಿ - ಯಮನಿಯಮಾದಿ ಅಷ್ಟಾಂಗಯೋಗಂಗಳ, ಸತ್ಕ್ರಿಯಾ - ಒಳ್ಳಿತ್ತಾದ ಕ್ರಿಯೆಗಳ, ಆಚಾರ - ಆಚಾರ

ದೊಡನೆ, ವಿಯುಕ್ತ - ವಿಶೇಷವಾಗಿ ಕೂಡಲ್ಪಟ್ಟ, ಮಾರ್ಗ - ಧರ್ಮಮಾರ್ಗದಲ್ಲಿ, ನಿಯತ - ನಿರತರಾದ, ದ್ವಿಜರಾಜ - ಬ್ರಾಹ್ಮಣೋತ್ತಮರುಗಳ, ವಧೂಜನ - ಸ್ತ್ರೀ ಜನಂಗಳ, ಸ್ಮರಾಪಾರ ವಿಕಾರ-ಮನ್ಮಥನ ಕಡೆಯಿಲ್ಲದ ವಿಕಾರಂಗಳಿಂದಾದ, ತಾಪ-ಸಂತಾಪವನ್ನು, ಕೃತಿ - ಮಾಡುವುದಕ್ಕೆ, ಕಾರಣ - ನಿಮಿತ್ತವಾದ, ಭಿಕ್ಷುಕವೇಷ-ತಾಪಸವೇಷದ, ಕೃತ್ರಿಮ - ಕಪಟವಾದ, ಆಕಾರ - ಮೂರ್ತಿಯ, ಕಳಾ - ಸೌಂದರ್ಯದ, ವಿಲಾಸ – ಲೀಲೆಯುಳ್ಳಾತನಾದ ಎಲೆ ಸೋಮೇಶ್ವರನೆ, ಜಯ - ಸರ್ವೋತ್ಕೃಷ್ಟನಾಗು. ೪

**ಭಾವಾರ್ಥಬೋಧಿನಿ** : ದಾರುವನವನ್ನಾಶ್ರಯಿಸಿ, ಜಪ, ತಪ, ಹೋಮ, ಯಮನಿಯಮಾದಿಯಾದ ಅಷ್ಟಾಂಗಯೋಗದ ಸತ್ಕ್ರಿಯಾಚರಣದಲ್ಲಿ ನಿರತರಾದ ದ್ವಿಜೋತ್ತಮರ ಸತಿಯರಲ್ಲಿ ಆಪಾರ ಮದನ ವಿಕಾರವನ್ನುಂಟುಮಾಡಲು ಕಾರಣವಾದ ಭಿಕ್ಷುಕವೇಷದ ಕಪಟ ಮೂರ್ತಿಯ ಸುಂದರ ಲೀಲೆಯುಳ್ಳಾತನಾದ ಸೋಮೇಶ್ವರನೆ! ಸರ್ವೋತ್ಕೃಷ್ಟನಾಗು. ೪

**ಚಂಪಕಮಾಲಾವೃತ್ತ**

ಅಹರಹರಂಬುಜೋದ್ಗಮ ಸಹಸ್ರಕೃತಾರ್ಚನ ತತ್ಪರತ್ವನಿ
ರ್ವಹಣನಿಜಾವಧಾನ ನಿಯಮಸ್ಖಲನೋತ್ಕಟಭಕ್ತಿಭಾವಸ
ನ್ನಿಹಿತ ಗುಣಾರ್ಪಿತಾತ್ಮನಯನಾಚ್ಯುತ ದಿವ್ಯಸುದರ್ಶನಪ್ರದ
ಪ್ರಹಸಿತವಕ್ತ್ರಪದ್ಮ ಪರಮಪ್ರಭುವೇ ಮಹದೈಪುರೀಶ್ವರಾ ೫

**ಟೀಕೆ** : ಅಹರಹ.........ಪ್ರದ – ಅಹರಹಃ - ಪ್ರತಿದಿವಸವಲ್ಲಿಯೂ, ಅಂಬುಜೋದ್ಗಮ - ತಾವರೆಯ ಹೂವುಗಳು, ಸಹಸ್ರ - ಸಾವಿರದಿಂ, ಕೃತ - ಮಾಡಲ್ಪಟ್ಟ, ಅರ್ಚನ - ಪೂಜೆಯಲ್ಲಿಯ, ತತ್ಪರತ್ವ - ತಾತ್ಪರ್ಯವುಳ್ಳತನದ, ನಿರ್ವಹಣ - ನಿರ್ವಹಿಸುವುದರಲ್ಲಿ, ನಿಜ - ತನ್ನ, ಅವಧಾನ - ಎಚ್ಚರವಲ್ಲಿನ, ನಿಯಮ-ನೇಮದ, ಸ್ಖಲನ - ಜಾರುವುದರಿಂ, ಉತ್ಕಟ - ಅಧಿಕವಾದ, ಭಕ್ತಿಭಾವ - ಭಕ್ತಿಭಾವದಿಂ, ಸನ್ನಿಹಿತ - ಸಮೀಪವಲ್ಲಿರ್ದ, ಗುಣ - ಧೈರ್ಯ ಗುಣದಿಂ, ಅರ್ಪಿತ - ಸಮರ್ಪಿಸಲ್ಪಟ್ಟ, ಆತ್ಮ - ತನ್ನ, ನಯನ - ನೇತ್ರವನುಳ್ಳ, ಅಚ್ಯುತ - ವಿಷ್ಣುವಿಗೆ,

ದಿವ್ಯ - ತೇಜೋಮಯವಾದ, ಸುದರ್ಶನ - ಚಕ್ರವನ್ನು, ಪ್ರದ - ಕೊಟ್ಟಾತನೆ, ಪ್ರಹಸಿತವಕ್ತ್ರಪದ್ಮ - ಪ್ರಹಸಿತ - ನಗುವ, ವಕ್ತ್ರಪದ್ಮ - ಮುಖಾರವಿಂದವನುಳ್ಳ, ಎಲೆಸೋಮೇಶ್ವರನೆ, ಜಯ - ಸರ್ವೋತ್ಕೃಷ್ಟನಾಗು. ೫

**ಭಾವಾರ್ಥಬೋಧಿನಿ :** ದಿನದಿನದಲ್ಲಿಯೂ ಸಹಸ್ರಕಮಲಗಳಿಂದ ತಪ್ಪದೆ ನಿನ್ನನ್ನು ಪೂಜಿಸುವ ನಿಯಮದಲ್ಲಿ ಎಚ್ಚರವುಳ್ಳವನಾಗಿದ್ದರೂ, ಆ ನಿಯಮವು ತಪ್ಪುಪ್ಪದರಿಂದ - ಎಂದರೆ ಒಂದು ದಿನ ಸಹಸ್ರಕಮಲಗಳಲ್ಲಿ ಒಂದು ಕಡಮೆಯಾದುದರಿಂದ - ಕುಗ್ಗದ ದೃಢಭಕ್ತಿಭಾವದ ಧೈರ್ಯದಿಂದ ತನ್ನ ಕಣ್ಣನ್ನೇ - (ಕಡಮೆಯಾದ ಕಮಲಕ್ಕೆ ಪ್ರತಿಯಾಗಿ) ಅರ್ಪಿಸಿದ ವಿಷ್ಣುವಿಗೆ ಚಕ್ರಾಯುಧವನ್ನು ದಾನ ಮಾಡಿದಾತನೆ ! ನಗುವ ಮೊಗದಾವರೆಯುಳ್ಳ ಸೋಮೇಶ್ವರನೆ ! ಸರ್ವೋತ್ಕೃಷ್ಟನಾಗು. ೫

**ಉತ್ಪಲಮಾಲಾವೃತ್ತ**

ಸರ್ವಗ ಸರ್ವತತ್ತ್ವವರ ಸರ್ವಗುಣಾಧಿಕ ಸರ್ವದೇವರಾ
ಟ್ಸರ್ವನಮಸ್ಯ ಸರ್ವಸುಖಭೋಗವಿಧಾಯಕ ಸರ್ವಭೂತಕೃ
ತ್ಸರ್ವವಿದಾದ್ಯ ಸರ್ವಜಗದಾತ್ಮಕ ಸರ್ವಕಳಾ ಪ್ರಪಂಚ ಭೃ
ತ್ಸರ್ವಪವಿತ್ರಗಾತ್ರ ಪರಮಪ್ರಭುವೇ ಮಹದೈಪುರೀಶ್ವರಾ ೬

**ಟೀಕೆ :** ಸರ್ವಗ - ಸಮಸ್ತರಲ್ಲಿಯೂ ಪರಿಪೂರ್ಣನಾದಾತನೆ, ಸರ್ವತತ್ತ್ವವರ - ಸಮಸ್ತತತ್ತ್ವಂಗಳಿಗೂ ಶ್ರೇಷ್ಠನಾದಾತನೆ, ಸರ್ವಗುಣಾಧಿಕ - ಸಮಸ್ತಗುಣಂಗಳಿಂದಧಿಕನಾದಾತನೆ, ಸರ್ವದೇವರಾಟ್ - ಸಮಸ್ತದೇವತೆಗಳಿಗೂ ರಾಜನಾದಾತನೆ, ಸರ್ವನಮಸ್ಯ - ಸರ್ವರಿಂದಲೂ ನಮಸ್ಕರಿಸಿಕೊಳ್ಳುವಾತನೆ, ಸರ್ವಸುಖಭೋಗವಿಧಾಯಕ - ಸರ್ವ - ಸಮಸ್ತವಾದ, ಸುಖಭೋಗ - ಸುಖಭೋಗಂಗಳನ್ನು, ವಿಧಾಯಕ - ಮಾಡುವಾತನೆ, ಸರ್ವಭೂತಕೃತ್ - ಸಮಸ್ತಭೂತಂಗಳ ಸೃಜಿಸುವಾತನೆ, ಸರ್ವವಿತ್ - ಸರ್ವವನ್ನೂ ಬಲ್ಲಾತನೆ, ಆದ್ಯ - ಎಲ್ಲರಿಗೂ ಮೊದಲಿಗನಾದಾತನೆ, ಸರ್ವಜಗದಾತ್ಮಕ - ಸರ್ವ - ಸಮಸ್ತವಾದ, ಜಗತ್ - ಜಗತ್ತಿಗೆ, ಆತ್ಮಕ - ಅಂತರ್ಯಾಮಿಯಾದಾತನೆ, ಸರ್ವಕಳಾ ಪ್ರಪಂಚಭೃತ್ -

ಸರ್ವ - ಸಮಸ್ತವಾದ, ಕಳಾ - ವಿದ್ಯೆಯು, ಪ್ರಪಂಚ - ಪ್ರಪಂಚವನ್ನು, ಭೃತ್ – ತಾಳ್ದಾತನೆ, ಸರ್ವಪವಿತ್ರಗಾತ್ರ - ಸರ್ವ – ಎಲ್ಲಾತಾಣದಲ್ಲಿಯೂ, ಪವಿತ್ರ - ಪಾವನವಾದ, ಗಾತ್ರ - ಶರೀರವನುಳ್ಳ ಎಲೆ ಮಹೇಶ್ವರನೆ, ಜಯ - ಸರ್ವೋತ್ಕೃಷ್ಟನಾಗು. ೬

**ಭಾವಾರ್ಥಬೋಧಿನಿ :** ಸರ್ವರಲ್ಲಿಯೂ ಪರಿಪೂರ್ಣನೆ, ಸರ್ವತತ್ವಂಗಳಲ್ಲಿಯೂ ಶ್ರೇಷ್ಠನೆ ! ಸಮಸ್ತಗುಣಗಳಿಂದಧಿಕನಾದಾತನೆ ! ಸರ್ವದೇವಾಧೀಶನೆ ! ಸರ್ವರಿಂದಲೂ ವಂದ್ಯನೆ ! ಸರ್ವಸುಖಭೋಗಂಗಳನ್ನುಂಟು ಮಾಡುವಾತನೆ ! ಸಮಸ್ತಭೂತಸೃಷ್ಟಿಕರ್ತನೆ ! ಸರ್ವಜ್ಞನೆ ! ಸರ್ವರಿಗೂ ಆದ್ಯನೆ ! ಸರ್ವಜಗದಂತರ್ಯಾಮಿಯೆ ! ಸರ್ವವಿದ್ಯಾಶ್ರಯನೆ ! ಸರ್ವಪ್ರಪಂಚವೇ ದೇಹವಾಗುಳ್ಳವನೆ ! ಮಹೇಶ್ವರನೆ ! ಸರ್ವೋತ್ಕೃಷ್ಟನಾಗು. ೬

## ಉತ್ಪಲಮಾಲಾವೃತ್ತಂ

ಬಿಂದುಮಯ ತ್ರಿಶಕ್ತಿಮಯ ನಾದಮಯಾ ಸದಸನ್ಮಯಾಕ್ಷರಾ
ಸ್ಪಂದಮಯ ಪ್ರಪಂಚಮಯ ಭೂತಮಯ ಪ್ರಣವಸ್ಫುರತ್ಪ್ರಭಾ
ವೃಂದಮಯಾತ್ಮತತ್ವಮಯ ಚಿನ್ಮಯ ಜೀವಕಳಾಸುಧಾಮಯಾ
ನಂದಮಯಾದಿದೇವ ಪರಮಪ್ರಭುವೇ ಮಹದೈಪುರೀಶ್ವರಾ ೭

**ಟೀಕೆ :** ಬಿಂದುಮಯ - ಚಿದ್ಬಿಂದುಸ್ವರೂಪನೆ, ತ್ರಿಶಕ್ತಿಮಯ - ಇಚ್ಛಾ ಜ್ಞಾನಕ್ರಿಯಾಶಕ್ತಿಸ್ವರೂಪನೆ, ನಾದಮಯಾ - ಚಿನ್ನಾದಸ್ವರೂಪನೆ, ಸದಸನ್ಮಯ- ಕಾರಣ ಕಾರ್ಯರೂಪನೆ, ಅಕ್ಷರಾಸ್ಪಂದಮಯ - ಅಕಾರಾದ್ಯಕ್ಷರಗಳಲ್ಲಿ ಪೊರ್ಮೆಗೆಯುಳ್ಳಾತನೆ, ಪ್ರಪಂಚಮಯ - ಜಗದ್ರೂಪನಾದಾತನೆ, ಭೂತಮಯ - ಪೃಥಿವ್ಯಾದಿ ಮಹಾಭೂತಸ್ವರೂಪವಾದಾತನೆ, ಪ್ರಣವಸ್ಫುರತ್ಪ್ರಭಾವೃಂದಮಯ - ಪ್ರಣವ - ಓಂಕಾರದಲ್ಲಿ, ಸ್ಫುರತ್ - ಪ್ರಕಾಶಿಸುತ್ತಿರ್ಪ, ಪ್ರಭಾ - ಕಾಂತಿಯು, ವೃಂದಮಯ - ಸಮೂಹವಾದಾತನೆ, ಆತ್ಮತತ್ವಮಯ - ಲಿಂಗಾಂಗಸ್ವರೂಪನೆ, (ಜೀವಾತ್ಮಸ್ವರೂಪನೆಂದಾದೊಡಂ ಆಗಲಿ) ಚಿನ್ಮಯ - ಜ್ಞಾನಸ್ವರೂಪನೆ, ಜೀವಕಳಾ ಸುಧಾಮಯ - ಪ್ರಾಣಕಳೆಯೆಂಬ ಅಮೃತಸ್ವರೂಪನೆ, ಆನಂದಮಯ - ಪರಮಾ

ನಂದಸ್ವರೂಪನೆ, ಆದಿದೇವ-ಎಲ್ಲವಕ್ಕೆಯೂ ಮೊದಲಿಗನಾದ ಎಲೆ ಮಹೇಶ್ವರನೇ, ಜಯ - ಸರ್ವೋತ್ಕೃಷ್ಟನಾಗು. ೭

**ಭಾವಾರ್ಥಬೋಧಿನಿ :** ಚಿದ್ಬಿಂದುಸ್ವರೂಪನೆ, ಇಚ್ಛಾಜ್ಞಾನಕ್ರಿಯಾಶಕ್ತಿಸ್ವರೂಪನೆ, ಚಿನ್ನಾದಸ್ವರೂಪನೆ, ಕಾರಣಕಾರ್ಯಸ್ವರೂಪನೆ, ಅಕಾರಾದ್ಯಕ್ಷರಸ್ವರೂಪನೆ, ಜಗತ್ಸ್ವರೂಪನೆ, ಪೃಥಿವ್ಯಾದಿಮಹಾಭೂತಸ್ವರೂಪನೆ, ಓಂಕಾರದಲ್ಲಿ ಪ್ರಕಾಶಿಸುವ ಕಾಂತಿಯರೂಪನಾದವನೆ, ಲಿಂಗಾಂಗಸ್ವರೂಪನೆ, ಜ್ಞಾನಸ್ವರೂಪನೆ, ಪ್ರಾಣಕಳಾಮೃತಸ್ವರೂಪನೆ, ಪರಮಾನಂದಸ್ವರೂಪನೆ, ಸರ್ವದೇವತೆಗಳಿಗೂ ಆದ್ಯನಾದ ಮಹೇಶ್ವರನೆ, ಸರ್ವೋತ್ಕೃಷ್ಟನಾಗಿ ವರ್ತಿಸು. ೭

**ಉತ್ಪಲಮಾಲಾವೃತ್ತ**

ನಿತ್ಯ ನಿರೀಹ ನಿರ್ಮಳ ನಿರಂಜನ ನಿಷ್ಕಳ ನಿಷ್ಪ್ರಪಂಚ ನಿ
ಷ್ಪ್ರತ್ಯಯ ನಿರ್ವಿಕಲ್ಪ ನಿರುಪಾಧಿಕ ನಿಶ್ಚಲ ನಿರ್ವಿಕಾರ ನಿ
ಷ್ಕೃತ್ಯ ನಿರೂಪ್ಯ ನಿರ್ಗುಣ ನಿರಾವರಣಾಭಿಧ ನಿರ್ವಿಶೇಷ ನಿ
ಸ್ಸ್ತುತ್ಯ ನಿರಸ್ತನಿಂದ್ಯ ಪರಮ ಪ್ರಭುವೇ ಮಹದ್ಕೈಪುರೀಶ್ವರಾ ೮

**ಟೀಕೆ :** ನಿತ್ಯ - ಕೇಡಿಲ್ಲದಾತನೆ, ನಿರೀಹ - ನಿಸ್ಪೃಹನಾದಾತನೆ, ನಿರ್ಮಳ-ಕಳಂಕಿಲ್ಲದಾತನೆ, ನಿರಂಜನ - ಪಾಪರಹಿತನೆ, ನಿಷ್ಕಳ - ಕಳಾರಹಿತನೆ, ನಿಷ್ಪ್ರಪಂಚ-ಪ್ರಪಂಚರಹಿತನೆ, ನಿಷ್ಪ್ರತ್ಯಯ - ಕಾರಣರಹಿತನೆ, ನಿರ್ವಿಕಲ್ಪ - ಸಂಕಲ್ಪರಹಿತನೆ, ನಿರುಪಾಧಿಕ - ಕಾರ್ಯೋಪಾಧಿಯಿಲ್ಲದಾತನೆ, ನಿಶ್ಚಲ - ಚಲನೆಯಿಲ್ಲದಾತನೆ, ನಿರ್ವಿಕಾರ - ಭೂತವಿಕಾರವಿಲ್ಲದಾತನೆ, ನಿಷ್ಕೃತ್ಯ - ಪ್ರಯೋಜನವಿಲ್ಲದಾತನೆ, ನಿರೂಪ್ಯ - ವೇದಾಂತಂಗಳಿಂ ಪ್ರತಿಪಾದಿಸಲ್ಪಡತಕ್ಕಾತನೆ, ನಿರ್ಗುಣ - ಗುಣತ್ರಯಾತೀತನೆ, ನಿರಾವರಣಾಭಿಧ - ಮಾಯಾವರಣವಿಲ್ಲದಾತನೆಂಬ ಪೆಸರನುಳ್ಳಾತನೆ, ನಿರ್ವಿಶೇಷ - ಬೇರೊಂದು ವಿಶೇಷವಿಲ್ಲದಾತನೆ, ನಿಸ್ಸ್ತುತ್ಯ - ಸ್ತುತಿಸಲಳವಲ್ಲದಾತನೆ, ನಿರಸ್ತನಿಂದ್ಯ - ತಿರಸ್ಕರಿಸಲ್ಪಟ್ಟ, ಮಲತ್ರಯವನುಳ್ಳಾತನಾದ ಎಲೆ ಪರಮೇಶ್ವರನೆ, ಜಯ - ಸರ್ವೋತ್ಕೃಷ್ಟನಾಗು.

**ಭಾವಾರ್ಥ ಬೋಧಿನಿ :** ಶಾಶ್ವತನೆ, ನಿಸ್ಪೃಹನೆ, ನಿರ್ಮಳನೆ, ಪಾಪರಹಿತನೆ, ಕಳಾತೀತನೆ ಪ್ರಪಂಚರಹಿತನೆ; ಕಾರಣರಹಿತನೆ, ಸಂಕಲ್ಪರಹಿತನೆ, ಕಾರ್ಯೋಪಾಧಿರಹಿತನೆ, ನಿಶ್ಚಲನೆ, ನಿರ್ವಿಕಾರನೆ, ಪ್ರಯೋಜನವಿಲ್ಲದಾತನೆ, ವೇದಾಂತಾದಿ ಪ್ರತಿಪಾದ್ಯನೆ, ಗುಣತ್ರಯಾತೀತನೆ, ಮಾಯಾವರಣರಹಿತನೆ, ತನ್ನಲ್ಲಿ ಬೇರೆಂದು ವಿಶೇಷವಿಲ್ಲದಾತನೆ, ಸ್ತುತಿಸಲಳವಲ್ಲದಾತನೆ, ಮಲತ್ರಯರಹಿತನೆ, ಮಹೇಶ್ವರನೆ, ಸರ್ವೋತ್ಕೃಷ್ಟನಾಗು. ೮

**ಉತ್ಪಲಮಾಲಾವೃತ್ತ**

ಅಕ್ಷರ ಸಾಕ್ಷರಾತ್ಮಕ ನಿರಕ್ಷರರೂಪ ಕಳಾಕ್ಷರಾಂಗ ಮೂ
ಲಾಕ್ಷರ ಜೀವಮಂತ್ರ ನಿಗಮಾಕ್ಷರ ಸಂಸ್ತವನೀಯ ಸರ್ವಮಂ
ತ್ರಾಕ್ಷರದಕ್ಷ ನಿಷ್ಕಳಶಿವಾಕ್ಷರಲಕ್ಷಣಲಕ್ಷಿತಾದಿ ಪಂ
ಚಾಕ್ಷರನಾಮಧಾಮ ಪರಮಪ್ರಭುವೇ ಮಹದೈಪುರೀಶ್ವರಾ ೯

**ಟೀಕೆ :** ಅಕ್ಷರ – ಕೇಡಿಲ್ಲದಾತನೆ, ಸಾಕ್ಷರಾತ್ಮಕ - ವರ್ಣ ಸ್ವರೂಪನಾದಾತನೆ, ನಿರಕ್ಷರರೂಪ-ನಿಶ್ಶಬ್ದ ಸ್ವರೂಪನೆ, ಕಳಾಕ್ಷರಾಂಗ - ಷೋಡಶಕಳಾಕ್ಷರಂಗಳೇ ದೇಹವಾಗುಳ್ಳಾತನೇ, ಮೂಲಾಕ್ಷರಜೀವಮಂತ್ರ - ಮೂಲಾಕ್ಷರ - ಓಂಕಾರಕ್ಕೆ, ಜೀವಮಂತ್ರ - ಜೀವಮಂತ್ರಸ್ವರೂಪನಾದ ಹಕಾರವಾದಾತನೆ, ನಿಗಮಾಕ್ಷರ - ವೇದಾಕ್ಷರಂಗಳಿಂದ, ಸಂಸ್ತವನೀಯ - ಸ್ತೋತ್ರವ ಮಾಡಲ್ಪಕ್ಕಾತನೆ, ಸರ್ವ... ಧಾಮ - ಸರ್ವ - ಸಮಸ್ತವಾದ, ಮಂತ್ರ-ಸಪ್ತಕೋಟಿ ಮಹಾಮಂತ್ರಂಗಳಲ್ಲಿಯ ಅಕ್ಷರ - ವರ್ಣಂಗಳೊಳು, ದಕ್ಷ - ಸಮರ್ಥವಾದ, ನಿಷ್ಕಳ - ಕಳಾತತ್ವಮಂಮೀರಿದ, ಶಿವಾಕ್ಷರ-ಶಿವ ಎಂಬ ಅಕ್ಷರಂಗಳೆರಡರ, ಲಕ್ಷಣ-ಅಸಾಧಾರಣಧರ್ಮದಿಂ ಲಕ್ಷಿತ - ಕಾಣಲ್ಪಡುವ, ಆದಿ - ಮುಖ್ಯವಾದ, ಪಂಚಾಕ್ಷರನಾಮ-ಪಂಚಾಕ್ಷರವೆಂಬ ಪೆಸರಿಗೆ, ಧಾಮ - ಸ್ಥಾನವಾದ ಎಲೆ ಸೋಮೇಶ್ವರನೆ, ಜಯ - ಸರ್ವೋತ್ಕೃಷ್ಟನಾಗು. ೯

**ಭಾವಾರ್ಥಬೋಧಿನಿ :** ಕೇಡಿಲ್ಲದಾತನೆ, ಸರ್ವವರ್ಣಸ್ವರೂಪನೆ, ನಿಶ್ಶಬ್ದ ಸ್ವರೂಪನೆ, ಷೋಡಶಕಳಾಕ್ಷರಂಗಳೇ ದೇಹವಾಗುಳ್ಳಾತನೆ, ಓಂಕಾರಕ್ಕೆ ಜೀವಾಕ್ಷರವಾದ ಹಕಾರದ ರೂಪನೆ, ವೇದಾಕ್ಷರಗಳಿಂದ ಹೊಗಳಲ್ಪಟ್ಟವನೆ, ಸಪ್ತಕೋಟಿ

ಮಹಾಮಂತ್ರಗಳ ಸರ್ವ ವರ್ಣಗಳೊಳು ಶ್ರೇಷ್ಠವಾದ 'ಶಿವ' ಎಂಬ ಎರಡಕ್ಷರಗಳ ಲಕ್ಷಣವುಳ್ಳ ಮುಖ್ಯ ಪಂಚಾಕ್ಷರೀ ಮಂತ್ರಕ್ಕೆ ಆಶ್ರಯನಾದ ಪರಮೇಶ್ವರನೆ, ಸರ್ವೋತ್ಕೃಷ್ಟನಾಗು. ೯

**ಉತ್ಪಲಮಾಲಾವೃತ್ತ**

ಲಿಂಗ ಚಿದಾತ್ಮ ಲಿಂಗ ಗುರುಲಿಂಗ ಶಿವಾಹ್ವಯಲಿಂಗ ವಿಶ್ವಕೃ
ಲ್ಲಿಂಗ ಸುಸೂಕ್ಷ್ಮಲಿಂಗ ಪರಲಿಂಗ ಪರಾಪರಲಿಂಗ ಸರ್ವವಿ
ಲ್ಲಿಂಗ ನಿಜಾಂಗಲಿಂಗ ಚರಲಿಂಗ ಚರಾಚರಲಿಂಗ ಭಕ್ತಹೃ
ಲ್ಲಿಂಗ ವಿಶುದ್ಧಲಿಂಗ ಪರಮಪ್ರಭುವೇ ಮಹದೈಪುರೀಶ್ವರಾ ೧೦

**ಟೀಕೆ :** ಲಿಂಗ - ಲಯಗಮನಂಗಳಿಗಾಶ್ರಯವಾದಲಿಂಗವೆ, ಚಿದಾತ್ಮಲಿಂಗ-ಜ್ಞಾನಸ್ವರೂಪವಾದ ಲಿಂಗವೆ, ಗುರುಲಿಂಗ - ಗುರುವೆಂಬ ಪೆಸರುಳ್ಳ ಲಿಂಗವೆ, ಶಿವಾಹ್ವಯಲಿಂಗ - ಶಿವವೆಂಬ ಪೆಸರನುಳ್ಳ ಲಿಂಗವೆ, ವಿಶ್ವಕೃಲ್ಲಿಂಗ-ಸರ್ವಪ್ರಪಂಚವನ್ನು ಸೃಜಿಸುವ ಲಿಂಗವೆ, ಸುಸೂಕ್ಷ್ಮಲಿಂಗ - ಇಂದ್ರಿಯಂಗಳಿಗೆ ಗೋಚರವಲ್ಲದ ಲಿಂಗವೆ, ಪರಲಿಂಗ - ಉತ್ಕೃಷ್ಟವಾದ ಲಿಂಗವೆ, ಪರಾಪರಲಿಂಗ - ಬ್ರಹ್ಮಾದಿಗಳಿಗಿಂಪತ್ತಲಾದ ಲಿಂಗವೇ, ಸರ್ವವಿಲ್ಲಿಂಗ - ಸರ್ವಜ್ಞಸ್ವರೂಪವಾದ ಲಿಂಗವೆ, ನಿಜಾಂಗಲಿಂಗ - ನಿಜ - ಸಹಜವಾದ, ಅಂಗಲಿಂಗ – ಇಷ್ಟಲಿಂಗ ಸ್ವರೂಪವೆ, ಚರಲಿಂಗ - ಜಂಗಮಸ್ವರೂಪವಾದ ಲಿಂಗವೆ, ಚರಾಚರಲಿಂಗ - ಜ್ಞಾನಕ್ರಿಯಾತ್ಮಕವಾದ ಲಿಂಗವೆ, ಭಕ್ತಹೃಲ್ಲಿಂಗ - ಭಕ್ತರಂತರಂಗವಾದ ಲಿಂಗವೆ, ವಿಶುದ್ಧಲಿಂಗ - ನಿರ್ಮಲಸ್ವರೂಪವಾದ ಲಿಂಗವೆ, ಭೋ ಪರಮಪ್ರಭುವೇ - ಎಲೆ ಸೋಮೇಶ್ವರಾ, ಜಯ - ಸರ್ವೋತ್ಕೃಷ್ಟನಾಗು.

**ಭಾವಾರ್ಥಬೋಧಿನಿ :** ಲಯಗಮನಂಗಳಿಗಾಶ್ರಯವಾದಲಿಂಗವೆ, ಜ್ಞಾನಮಯ-ಲಿಂಗವೆ. ಗುರುನಾಮಕಲಿಂಗವೆ, ಶಿವನಾಮಕಲಿಂಗವೆ, ಸರ್ವಪ್ರಪಂಚವನ್ನು ಸೃಜಿಸುವಲಿಂಗವೆ, ಇಂದ್ರಿಯಂಗಳಿಗೆ ಗೋಚರವಾಗದಲಿಂಗವೆ, ಶ್ರೇಷ್ಠಲಿಂಗವೆ, ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠವಾದಲಿಂಗವೆ, ಸರ್ವಜ್ಞರೂಪಲಿಂಗವೆ; ಅಂಗಲಿಂಗ-ಸ್ವರೂಪಗಳನ್ನು ಪಡೆದ ಲಿಂಗವೆ, ಜಂಗಮಲಿಂಗವೆ, ಜ್ಞಾನಕ್ರಿಯಾಮಯಲಿಂಗವೆ,

ಭಕ್ತಹೃದಯ ಶೋಭಿತ ಲಿಂಗವೆ, ನಿರ್ಮಲ ಲಿಂಗವೆ, ಮಹಾಪ್ರಭುವೆ, ಸರ್ವೋತ್ಕೃಷ್ಟನಾಗು. ೧೦

**ಅವತಾರಿಕೆ :** ಇಂತು ಆಚಾರ್ಯಂ ತನ್ನ ಸ್ವೇಷ್ಟದೇವತಾಸ್ತೋತ್ರಮಂ ಮಾಡಿ ಗುರುನಮಸ್ಕಾರಮಂ ಮಾಡುತ್ತಿರ್ದಪಂ.

**ಉತ್ಪಲಮಾಲಾವೃತ್ತ**

ಶ್ರೀಗುರುವೇನಮಶ್ಶರಣಲೋಕಸುಖೈಕಕರಾಯ ಶಿಷ್ಯ ಹೃ
ದ್ರೋಗಭಿಷಕ್ತಮಾಯ ಭವಕರ್ಮ ಸಮಿದ್ದಹನಾಗ್ನಯೇ ಶಿವೈ
ಕ್ಯಾಗಮಸಾರವೀರವಿಮಲಾಶ್ರಯಧರ್ಮ ಪದಪ್ರದಾಯತೇ
ರಾಗವಿರಾಗದೂರ ಪರಮಪ್ರಭುವೇ ಮಹದೈಪುರೀಶ್ವರಾ ೧೧

**ಟೀಕೆ :** ಭೋ ಮಹದೈಪುರೀಶ್ವರಾ - ಎಲೈ ಮಹದೈಪುರೀಶ್ವರನೇ, ಶ್ರೀಗುರವೇ - ಶ್ರೀ ಗುರುರೂಪನಾದ, ತೇ - ನಿನಗೋಸ್ಕರ, ನಮಃ - ನಮಸ್ಕಾರವು, ಶರಣಲೋಕಸುಖೈಕಕರಾಯ - ಶರಣಲೋಕ - ಶರಣಜನರ್ಗೆ, ಸುಖೈಕ-ಪರಿಣಾಮವನೊಂದನೇ, ಕರಾಯ - ಮಾಡುತ್ತಿರ್ಪ, ತೇ - ನಿನಗೋಸ್ಕರ, ನಮಃ - ನಮಸ್ಕಾರವು, ಶಿಷ್ಯಹೃದ್ರೋಗಭಿಷಕ್ತಮಾಯ - ಶಿಷ್ಯ - ಶಿಷ್ಯನ, ಹೃತ್ - ಹೃದಯದಲ್ಲಿಯ, ರೋಗ - ಸಂಸಾರವ್ಯಾಧಿಗೆ, ಭಿಷಕ್ತಮಾಯ - ಒಳ್ಳಿತ್ತಾದವೈದ್ಯನಾದ. ತೇ-ನಿನಗೆ, ನಮಃ-ನಮಸ್ಕಾರವು, ಈ ಅರ್ಥದಲ್ಲಿ "ಭಿಷಕ್ತಮಂ ತ್ವಾಂ ಭಿಷಜಾಂ ಶ್ರೃಣೋಮಿ" ಎಂದು ಋಗ್ವೇದವಮುಂಟು. ಭವಕರ್ಮಸಮಿದ್ದಹನಾಗ್ನಯೇ-ಭವ-ಕರ್ಮ-ಸಂಸಾರವ್ಯಾಪಾರವೆಂಬ, ಸಮಿತ್-ಕಟ್ಟಿಗೆಗಳ, ದಹನ-ಸುಡುವಲ್ಲಿ, ಅಗ್ನಯೇ-ವಹ್ನಿಸ್ವರೂಪನಾದ, ತೇ-ನಿನಗೋಸ್ಕರ, ನಮಃ-ನಮಸ್ಕಾರವು, ಶಿವೈಕ್ಯಾಗಮಸಾರವೀರವಿಮಲಾಶ್ರಯ ಧರ್ಮಪದಪ್ರದಾಯ - ಶಿವೈಕ್ಯ - ಶಿವಲಿಂಗೈಕ್ಯವನುಬೋಧಿಸುವ, ಆಗಮಸಾರ - ಆಗಮಂಗಳೊಳಗೆ ಶ್ರೇಷ್ಠವಾದ, ವೀರ-ವೀರಮಾಹೇಶ್ವರನ, ವಿಮಲ - ನಿರ್ಮಲವಾದ, ಆಶ್ರಯ - ನಿಲುಗಡೆಯಾದ, ಧರ್ಮ - ಆಚಾರದ, ಪದ-ಮಾರ್ಗವನು, ಪ್ರದಾಯ - ಕೊಡುವಂಥ, ತೇ - ನಿನಗೋಸ್ಕರ, ನಮಃ - ನಮ

ಸ್ಕಾರವು, ರಾಗವಿರಾಗಮೂರ ಪರಮಪ್ರಭುವೇ - ರಾಗವಿರಾಗದೂರ - ಕಾಮನಿಷ್ಕಾಮಂಗಳಿಗೆ ದೂರನಾದ, ಪರಮ - ಉತ್ಕೃಷ್ಟನಾದ, ಪ್ರಭುವೇ - ಎನ್ನೊಡೆಯನಾದ, ತೇ - ನಿನಗೋಸ್ಕರ, ನಮಃ - ನಮಸ್ಕಾರವು.

**ಭಾವಾರ್ಥಬೋಧಿನಿ :** ಶರಣಜನರಿಗೆ ಸುಖವೊಂದನ್ನೇ ಉಂಟುಮಾಡುವಾತನೂ, ಶಿಷ್ಯರ ಹೃದಯದಲ್ಲಿರುವ ಭವರೋಗಕ್ಕೆ ಉತ್ತಮ ವೈದ್ಯನೂ, ಸಂಸಾರ ವ್ಯಾಪಾರವೆಂಬ ಕಟ್ಟಿಗೆಯನ್ನು ಸುಡುವಲ್ಲಿ ಅಗ್ನಿಸ್ವರೂಪನೂ, ಲಿಂಗಾಂಗಸಾಮರಸ್ಯವನ್ನು ಬೋಧಿಸುವ ಆಗಮಗಳಲ್ಲಿ ಶ್ರೇಷ್ಠವಾದ ನಿರ್ಮಲ ವೀರಶೈವಧರ್ಮತತ್ವಮಾರ್ಗವನ್ನು ತೋರಿಸಿಕೊಡುವವನೂ, ರಾಗವಿರಾಗದೂರನೂ ಆದ ಶ್ರೀಗುರುವೆ, ಮಹಾಪ್ರಭುವೆ, ಮಹದ್ವೈಪುರೀಶ್ವರನೆ, ನಿನಗೆ ನಮಸ್ಕಾರ. (ಇಲ್ಲಿ ಗುರುವನ್ನು ಶಿವನೆಂದು ಭಾವಿಸಿ, ನಮಸ್ಕಾರ ರೂಪಮಂಗಲವನ್ನು ಮಾಡಲಾಗಿರುವುದು.) ೧೧

**ಚಂಪಕಮಾಲಾವೃತ್ತಂ**

ಗುರುಪದಸಿದ್ಧಮದ್ಗುರುವೆ ಸದ್ಗುರು ತತ್ವವೆ ತತ್ವಸಾರ ಚಿ
ದ್ಗುರುವೆ ಭವಪ್ರಪಂಚಗುಣದೋಷ ನಿವಾರಣವೈದ್ಯ ತಂತ್ರ ಕೃ
ದ್ಗುರುವೆ ಶರೀರದುಃಖ ಪುನರಾಗತದುರ್ಗತಿಕರ್ಮಕಾಂಡ ಭಿ
ದ್ಗುರುವೆ ಗುರುತ್ರಿಣೇತ್ರ ಪರಮ ಪ್ರಭುವೇ ಮಹದ್ವೈಪುರೀಶ್ವರಾ ೧೨

**ಟೀಕೆ :** ಗುರುಪದಸಿದ್ಧಮದ್ಗುರುವೆ - ಗುರುಪದ - ಆಚಾರ್ಯಪಟ್ಟದಲ್ಲಿ, ಸಿದ್ಧ - ಪ್ರಸಿದ್ಧವಾದ, ಮದ್ಗುರುವೆ - ಎನ್ನ ಗುರುವೆ, ಸದ್ಗುರು ತತ್ವವೆ - ಸದ್ರೂಪವಾದ ಗುರುತತ್ವವೆ, (ನಾಸ್ತಿ ತತ್ವಂಗುರೋಃ ಪರಮೆಂದುಂಟಾಗಿ) ತತ್ವಸಾರ ಚಿದ್ಗುರುವೆ - ತತ್ವ - ಮೂವತ್ತಾರು ತತ್ವಂಗಳೊಳಗೆ, ಸಾರ - ಶ್ರೇಷ್ಠವಾದ, ಚಿದ್ಗುರುವೆ - ಜ್ಞಾನಸ್ವರೂಪನಾದ ಗುರುವೆ, ಭವಪ್ರಪಂಚಗುಣದೋಷನಿವಾರಣ ವೈದ್ಯತಂತ್ರ ಕೃದ್ಗುರುವೆ - ಭವಪ್ರಪಂಚ - ಸಂಸಾರಪ್ರಪಂಚದ, ಗುಣದೋಷಂಗಳನ್ನು, ನಿವಾರಣ-ಓಡಿಸುವಲ್ಲಿ, ವೈದ್ಯತಂತ್ರಕೃತ್ - ವೈದ್ಯಸಿದ್ಧಾಂತ ಮಾಡುವಂಥ, ಗುರುವೆ-ಆಚಾರ್ಯನೆ, ಶರೀರದುಃಖ ಪುನರಾಗತದುರ್ಗತಿಕರ್ಮಕಾಂಡಭಿದ್ಗುರುವೆ-ಶರೀರದುಃಖ - ದೇಹದುಃಖಂಗಳ, ಪುನರಾಗತ – ತಿರುಗಿ ಬರ್ಪಲ್ಲಿಯು, ದುರ್ಗತಿ-ನರಕಸ್ವರೂಪವಾದ, ಕರ್ಮಕಾಂಡ - ಕರ್ಮಕಾಂಡವನು, ಭಿತ್ - ಮೆಟ್ಟಿ ಸೀಳು

ತ್ರಿಪುರ್ಣ, ಗುರುವೆ - ಆಚಾರ್ಯನೆ, ಗುರು - ಪೂಜ್ಯವಾದ, ತ್ರಿಣೇತ್ರ - ಸೂರ್ಯ ಚಂದ್ರಾಗ್ನಿಲೋಚನವುಳ್ಳ, ಪರಮಪ್ರಭುವೇ - ಎಲೈ ಸೋಮೇಶ್ವರನೆ, ಜಯ - ಸರ್ವೋತ್ಕೃಷ್ಟನಾಗು.

**ಭಾವಾರ್ಥಬೋಧಿನಿ :** ಆಚಾರ್ಯಪಟ್ಟದಲ್ಲಿದ್ದು ಪ್ರಸಿದ್ಧನಾದ ನನ್ನ ಗುರುವೆ, ಸದ್ರೂಪವಾದ ಗುರುತತ್ವವೆ, ತತ್ವಗಳಲ್ಲಿ ಶ್ರೇಷ್ಠನಾದ ಜ್ಞಾನಸ್ವರೂಪ ಗುರುವೆ, ಜನನಮರಣಮಯವಾದ ಪ್ರಪಂಚದ ಗುಣದೋಷಗಳನ್ನು ನಿವಾರಿಸುವ ವೈದ್ಯತಂತ್ರವನ್ನು ನಿರ್ಮಿಸಿದ ಗುರುವೆ, ಪುನಃ ಪುನಃ ಜನನಮರಣವನ್ನುಂಟು ಮಾಡುವ ಭವದುಃಖವೆಂಬ ದುರ್ಗತಿಯನ್ನುಂಟುಮಾಡುವ ಕರ್ಮಕಾಂಡವನ್ನು ಭೇದಿಸುವ ಗುರುವೆ, ತ್ರಿನೇತ್ರನಾದ ಪರಮೇಶ್ವರನ ರೂಪುಳ್ಳ ಗುರುವೆ ಸರ್ವೋತ್ಕೃಷ್ಟನಾಗು. ೧೨

**ಚಂಪಕಮಾಲಾವೃತ್ತಂ**

ಪರುಸಮುಮಂ ಲಸದ್ಗುರುಪದಾಂಬುಜಮಂ ಸಮಮೆಂದು ಕಲ್ಪಿಸ
ಲ್ನರಕಮದೆಂತೆನಲ್ ಪರುಸಮಂ ಪರುಸಂ ನೆರೆವಾಡವಾಗಿಮ
ದ್ಗುರುಪದಮಾಗುರುತ್ವಮನೆಮಾಡುವ ಕಾರಣಮಾಂ ನಿರಂತರಂ
ಗುರು ಶರಣೆಂಬೆನಯ್ಯ ಪರಮ ಪ್ರಭುವೇ ಮಹದೈಪುರೀಶ್ವರಾ ೧೩

**ಟೀಕೆ :** ಪರುಸಮುಮಂ - ಸಿದ್ಧರಸವನ್ನೂ, ಲಸದ್ಗುರುಪದಾಂಬುಜಮಂ- ಲಸತ್ - ಒಪ್ಪುತ್ತಿರುವ, ಗುರುಪದಾಂಬುಜಮಂ - ಗುರುಚರಣಾಂಬುಜವನ್ನೂ, ಸಮಮೆಂದು - ಸದೃಶವೆಂದು, ಕಲ್ಪಿಸಲು - ಸಂಕಲ್ಪಿಸಲಾಗಿ, ನರಕಂ - ದುರ್ಗತಿಯು, ಅದೆಂತೆನಲ್-ಅದು ಹೇಗೆನಲಾಗಿ, ಪರುಸಂ-ಸಿದ್ಧರಸವು, ಪರುಸಮಂ- ತನ್ನಂತಹ ಸಿದ್ಧರಸವನ್ನು, ನೆರೆ-ಚೆನ್ನಾಗಿ, ವಾಡವಾಗಿ-ವಾಡದಿರ್ಪ ಕಾರಣವಾಗಿ, ಮದ್ಗುರು ಪದಂ-ಎನ್ನ ಶ್ರೀ ಗುರುಪಾದವು, ಆ ಗುರುತ್ವಮನೆ-ಆ ಗುರುತನವನ್ನೇ, ಮಾಡುವ ಕಾರಣಂ - ಮಾಡುವ ನಿಮಿತ್ತವಾಗಿ, ಆಂ - ನಾನು, ನಿರಂತರಂ - ಯಾವಾಗಲೂ, ಗುರುಶರಣೆಂಬೆನಯ್ಯ - ಗುರುವನೇ ಮರೆಹುಗುವೆನು.

**ಭಾವಾರ್ಥಬೋಧಿನಿ :** ಮಹದೈಪುರೀಶ್ವರನೆ, ಸಿದ್ಧರಸವನ್ನೂ ಮನೋಹರವಾದ ಗುರುಪಾದಕಮಲವನ್ನೂ ಪರಸ್ಪರವಾಗಿ ಸಮಾನವೆಂದು ಹೇಳಿದರೆ ದುರ್ಗತಿಯಾಗುವುದು. ಏಕೆಂದರೆ ಸಿದ್ಧರಸವು ಕಬ್ಬಿಣವನ್ನು ಸುವರ್ಣವನ್ನಾಗಿ ಮಾಡುವುದಲ್ಲದೆ, ಆ ಲೋಹವನ್ನು ತನ್ನಂತೆ ಸಿದ್ಧರಸವನ್ನಾಗಿ ಮಾಡಲಾರದು. ನನ್ನ ಗುರುಪಾದಕಮಲವು ಮಾತ್ರ ಶಿಷ್ಯನಲ್ಲಿ ತನ್ನಲ್ಲಿರುವ ಗುರುತ್ವವನ್ನುಂಟುಮಾಡುವುದಲ್ಲವೆ ? ಆದಕಾರಣ ನಾನು ಯಾವಾಗಲೂ ಗುರುವನ್ನೇ ಮರೆಹುಗುವೆನು. ೧೩

**ಅವತಾರಿಕೆ :** ಇಂತು ಆಚಾರ್ಯನು ಸಂಸಾರ ನಿರಾಸಪೂರ್ವಕವಾಗಿ ಜ್ಞಾನಮಂ ಪ್ರಾರ್ಥಿಸುತ್ತಿರ್ದಪಂ.

### ಚಂಪಕಮಾಲಾವೃತ್ತಂ

ಅಭಿಮತಸಿದ್ಧಿದಾನಪರನೆಂದು ಕೃಪಾಮೃತಸಿಂಧುವೆಂದು ಗ
ರ್ಭಭವಜರಾಮೃತಿ ಪ್ರಭೃತಿದುರ್ಭಯ ಸಂಹರನೆಂದು ಚಿತ್ಕಳಾ
ವಿಭುಗುರುನಾಥ ನಿನ್ನನಿರದಿತ್ತನಿದೇಂ ದಯೆಗೆಯ್ಯಲೊಲ್ಲೆ ಪೇಳ್
ತ್ರಿಭುವನಮೂಲಲಿಂಗ ಪರಮಪ್ರಭುವೇ ಮಹದೈಪುರೀಶ್ವರಾ ೧೪

**ಟೀಕೆ :** ಭೋತ್ರಿಭುವನಮೂಲಲಿಂಗ - ಎಲೆ ತನುತ್ರಯಂಗಳಿಗೆ ಕಾರಣವಾದ ಪರಮಾತ್ಮಲಿಂಗವೆ, ನಿನ್ನಂ - ನಿನ್ನನು, ಅಭಿಮತಸಿದ್ಧಿದಾನಪರನೆಂದು - ಅಭಿಮತ - ಇಷ್ಟಾರ್ಥಂಗಳ, ಸಿದ್ಧಿ - ಸಿದ್ಧಿಯ, ದಾನ - ಕೊಡುವಲ್ಲಿ, ಪರನೆಂದು - ತಾತ್ಪರ್ಯವುಳ್ಳವನೆಂದು, ಕೃಪಾಮೃತಸಿಂಧುವೆಂದು - ಕೃಪಾ - ಕಾರುಣ್ಯವೆಂಬ, ಅಮೃತ - ಸುಧೆಗೆ, ಸಿಂಧುವೆಂದು - ಸಮುದ್ರನೆಂದು, ಗರ್ಭಭವಜರಾಮೃತಿ ಪ್ರಭೃತಿದುರ್ಭಯಸಂಹರನೆಂದು - ಗರ್ಭಭವ - ಜನ್ಮವು, ಜರಾ - ಮುಪ್ಪು, ಮೃತಿ - ಮರಣವು, ಪ್ರಭೃತಿ - ಇವು ಮೊದಲಾದವರಿಂದಾದ, ದುರ್ಭಯ - ಮಹಾಭಯದ, ಸಂಹರನೆಂದು - ಪರಿಹರಿಸುವಾತನೆಂದು, ಚಿತ್ಕಳಾವಿಭುಗುರುನಾಥ - ಜ್ಞಾನಕಳೆಗೆ ಕರ್ತೃವಾದ ಶ್ರೀ ಗುರುಸ್ವಾಮಿಯು, ಇರದೆ ಇತ್ತಂ - ಶೀಘ್ರವಾಗಿ ಕೊಟ್ಟನು, ಇದೇಂ ದಯೆಗೆಯ್ಯಲೊಲ್ಲೆ - ಇದೇನು ಕಾರಣ ದಯೆಗೆಯ್ಯಲೊಲ್ಲೆ ? ಪೇಳ್ - ನಿರೂಪಿಸು.

**ಭಾವಾರ್ಥಬೋಧಿನಿ :** ಸ್ಥೂಲ-ಸೂಕ್ಷ್ಮ-ಕಾರಣವೆಂಬ ತನುತ್ರಯಕ್ಕೆ ಕಾರಣವಾದ ಪರಮಾತ್ಮಲಿಂಗವೆ, ನೀನು ಇಷ್ಟಾರ್ಥಸಿದ್ಧಿಯನ್ನು ದಾನಮಾಡುವಾತನೂ, ಕರುಣಾಮೃತಸಾಗರನೂ, ಜನನ-ಜರೆ-ಮರಣ ಮೊದಲಾದವುಗಳಿಂದುಂಟಾಗುವ ಮಹಾಭಯವನ್ನು ಪರಿಹರಿಸುವಾತನೂ ಎಂದು, (ಉಪದೇಶಿಸಿ) ಜ್ಞಾನಕಳಾಕರ್ತೃವಾದ ಶ್ರೀಗುರುವು ನನಗೆ ನಿನ್ನನ್ನು ಬಿಡದೆ ಕೊಟ್ಟಿರುವನು. ಇದೇನು ಕಾರಣ ನೀನು ನನ್ನಲ್ಲಿ ದಯೆಗೈಯುವುದಿಲ್ಲ ? ಹೇಳು. ೧೪

**ಚಂಪಕಮಾಲಾವೃತ್ತ**

ವರಗುರುನಾಥನೆಂತಿರಿಸಿದಂತಿರದಿರ್ದೊಡೆ ನೀನುಮಾನುಮೀ
ರ್ವರು ಸಲೆಕೆಟ್ಟು ಪೋಪುದಿದು ನಿಶ್ಚಯಮೇತಕೆ ಸುಮ್ಮನಿರ್ಪೆ ಕೇ
ಳರಸ ವಿಚಾರಮಿಲ್ಲದಿರಲೇತಕೆ ನೀ ನಿರಹೇಳಿದಂತೆ ಯಾ
ನಿರದೊಡೆ ಭೀತಿಯ್ಯೈಸೆ ಪರಮಪ್ರಭುವೇ ಮಹದೈಪುರೀಶ್ವರಾ ೧೫

**ಟೀಕೆ :** ಅರಸ - ಎಲೆ ಒಡೆಯನೆ, ವರಗುರುನಾಥಂ - ಶ್ರೇಷ್ಠನಾದ ಶ್ರೀಗುರುಸ್ವಾಮಿಯು, ಎಂತಿರಿಸಿದ - ಹೇಂಗಿರಿಸಿದನು, ಅಂತು - ಹಾಂಗೆ, ಇರದಿರ್ದೊಡೆ - ಇರದಿರ್ದೊಡೆ, ನೀನುಮಾನುಮೀರ್ವರು - ನೀನುನಾನೆಂಬೀರ್ವರೂ, ಸಲೆ - ಚೆನ್ನಾಗಿ, ಕೆಟ್ಟುಪೋಪುದು - ಕೆಟ್ಟು ಹೋಗುವುದು, ಇದು ನಿಶ್ಚಯಂ - ದಿಟವಿದು, ಏತಕೆ ಸುಮ್ಮನಿರ್ಪೆ - ಏನುಕಾರಣ ನೀ ಸುಮ್ಮನಿರ್ದಪೆ ? ವಿಚಾರಮಿಲ್ಲದೆ - ವಿವೇಕವಿಲ್ಲದೆ, ಇರಲೇತಕೆ - ಇರ್ಪುದೇತಕೆ ? ಆಂ - ನಾನು, ನೀಂ ಇರಹೇಳಿದಂತೆ - ನೀನಿರಹೇಳಿವಹಾಂಗೆ, ಇರದೊಡೆ - ಇರದಿರ್ದೊಡೆ, ಭೀತಿಯ್ಯೈಸೆ - ಭಯವಷ್ಟೆ ? (ಇರ್ದೊಡೆ ಭಯವಿಲ್ಲವೆಂಬುದರ್ಥಂ) "ಯಥಾ ನಿಯುಕ್ತೋऽಸ್ಮಿ ತಥಾ ಕರೋಮಿ" ಎಂದು ಪುರಾಣವಾಕ್ಯವುಂಟು.

**ಭಾವಾರ್ಥಬೋಧಿನಿ :** ನನ್ನ ಪ್ರಭುವಾದ ಲಿಂಗವೆ! ಶ್ರೇಷ್ಠನಾದ ಶ್ರೀಗುರುಸ್ವಾಮಿಯು ಇರಿಸಿದಂತೆ ಇರದಿರ್ದ ಪಕ್ಷದಲ್ಲಿ ನಾನೂ ನೀನೂ ಈರ್ವರೂ ಕೆಟ್ಟುಹೋಗುವುದು ನಿಶ್ಚಯ. ನೀನು ಏತಕ್ಕಾಗಿ ಸುಮ್ಮನಿರ್ದಪೆ ? ವಿವೇಕವಿಲ್ಲದಿರುವುದೇತಕ್ಕೆ ? ನೀನು ಇರಹೇಳಿದಂತೆ ನಾನು ಇರದಿರ್ದರೆ ನನಗೆ ಭಯವಷ್ಟೆ. (ನೀನು ಹೇಳಿದಂತೆ ನಾನಿರ್ದರೆ ಭಯವಿಲ್ಲೆಂದರ್ಥವು) ಗುರು ನಿರೂಪಿಸಿದಂತೆ ನೀನು ನನ್ನಲ್ಲಿ ಕಾರುಣ್ಯವನ್ನು ತೋರಿಸಿ ಕಾಪಾಡೆಂದು ತಾತ್ಪರ್ಯ. ೧೫

**ಅವತಾರಿಕೆ :** ಗುರುಕಾರುಣ್ಯವುಳ್ಳವಂಗೆ ಸಂಚಿತಾದಿ ಕರ್ಮವಿಲ್ಲೆಂದು ಪೇಳುತ್ತಿರ್ದಪಂ.

**ಚಂಪಕಮಾಲಾವೃತ್ತ**

ಶಿವಶಿವ ಪೂರ್ವಜನ್ಮಕೃತಕರ್ಮಫಲಂ ಭವಿತವ್ಯಮೆಂಬ ವಾ
ಕ್ಯವೆ ದಿಟಮಪ್ಪೊಡಕ್ಕಟ ಪುನರ್ಜನನಂ ಗುರುಹಸ್ತದಿಂದೆ ಸಂ
ಭವಿಸಿ ಶಿವಾತ್ಮರಾಗಿ ಶಿವಮಂತ್ರಶರೀರಿಗಳಾಗಿ ಪೂರ್ವಜ
ನ್ಮವನಳಿವರ್ಗದುಂಟೆ ಪರಮ ಪ್ರಭುವೇ ಮಹದೈವುರೀಶ್ವರಾ ೧೬

**ಟೀಕೆ :** ಪೂರ್ವಜನ್ಮಕೃತಕರ್ಮಫಲಂ - ಪೂರ್ವಜನ್ಮ - ಮುನ್ನಿನಜನ್ಮದಲ್ಲಿ, ಕೃತ - ಮಾಡಲ್ಪಟ್ಟ, ಕರ್ಮಫಲಂ - ಸಂಚಿತಕರ್ಮಫಲವು, ಭವಿತವ್ಯಂ - ಅನುಭವಿಸಿದಲ್ಲದೆ ಬಿಡದು, ಎಂಬ - ಹೀಗೆಂಬ ವಾಕ್ಯವೆ "ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ" ಎಂಬ ವಚನವೇ, ದಿಟಮಪ್ಪೊಡೆ - ಸಹಜವಾಗುವೊಡೆ, ಪುನರ್ಜನನಂ - ಮರಳಿ ಜನನವು, ಗುರುಹಸ್ತದಿಂದೆ - ಗುರುವಿನ ಕರದಿಂದೆ, ಸಂಭವಿಸಿ - ಪುಟ್ಟಿ, ಶಿವಾತ್ಮರಾಗಿ - ಶಿವಸ್ವರೂಪರಾಗಿ, ಶಿವಮಂತ್ರಶರೀರಿಗಳಾಗಿ, ಶಿವಮಂತ್ರವೇ ದೇಹವಾಗುಳ್ಳವರಾಗಿ, ಪೂರ್ವಜನ್ಮಮಂ - ಮೊದಲ ಜನ್ಮವನ್ನು, ಅಳಿವರ್ಗೆ - ನಾಶಮಾಡಿದವರ್ಗೆ, ಅದು ಉಂಟೆ - ಆ ಸಂಚಿತ ಕರ್ಮಫಲಭೋಗವುಂಟೆ? ಅಕ್ಕಟಾ - ಅಯ್ಯೊ! ಶಿವಶಿವ ಅಚ್ಚರಿ! ಅಚ್ಚರಿ !! ಈ ಅರ್ಥದಲ್ಲಿ-

ಸದ್ಗುರೋಃಪಾಣಿಜಾತಸ್ಯ ಸ್ಥಿತಿಸ್ಸದ್ಭಕ್ತಿ ಸಂಗಿನಃ
ಲೀಯತೇ ಚ ಮಹಾಲಿಂಗೇಶ್ಶೈವಸ್ಸರ್ವೋತ್ತಮೋತ್ತಮಃ

ಎಂದಾಗಮವುಂಟಾಗಿ, ಸಂಚಿತಾದಿಗಳಿಲ್ಲವೆಂಬುದೇ ಪರಮಾರ್ಥಂ.

**ಭಾವಾರ್ಥಬೋಧಿನಿ :** ಪೂರ್ವಜನ್ಮದಲ್ಲಿ ಮಾಡಿದ ಸಂಚಿತಕರ್ಮದ ಫಲವು ಈ ಜನ್ಮದಲ್ಲಿ ಅನುಭವಿಸದಿರ್ದರೆ ಅದು ಬಿಡದು -ಎಂದರೆ-'ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ' ಎಂಬ ವಾಕ್ಯವೇ ನಿಜವಾದ ಪಕ್ಷದಲ್ಲಿ ಶ್ರೀಗುರುಕರಕಮಲದಲ್ಲಿ ಪುನರ್ಜನನವೊಂದಿ ಶಿವಸ್ವರೂಪಿಗಳೂ, ಮಂತ್ರದೇಹಿಗಳೂ ಆಗಿ, ಪೂರ್ವಜನ್ಮವನ್ನು ನಾಶಮಾಡಿಕೊಂಡವರಿಗೆ ಆ ಸಂಚಿತ ಕರ್ಮಫಲಭೋಗ

ವುಂಟೆ? ಅಯ್ಯೋ! ಶಿವಶಿವ-ಅಚ್ಚರಿ! ಗುರುಕರಕಮಲಜಾತರಾಗಿ ಲಿಂಗಧಾರಣವನ್ನು ಮಾಡಿಕೊಂಡವರಿಗೆ ಸಂಚಿತಾದಿಕರ್ಮಫಲ ಭೋಗವಿರುವುದಿಲ್ಲವೆಂದು ತಾತ್ಪರ್ಯ. ೧೬.

## ಉತ್ಪಲಮಾಲಾವೃತ್ತ

ಭವಮುಳಿದುಂ ಭವಪ್ರಭವಕರ್ಮಫಲಂ ಕಿಡದೆಂಬ ವಾದ ಮೀ
ಭುವನದೊಳುಳ್ಳೊಡುಂಟು ಮೊದಲಿಲ್ಲದ ಭೂಮಿರುಹಕ್ಕೆ ಶಾಖೆ ಬಂ
ಜೆವನಿತೆಗಾತ್ಮಜಂ ಮೃತಶರೀರಿಗೆ ಜೀವಕಳಾ ಪ್ರವೇಶಮೆಂ
ಬಿವು ಪೆರತೇನು ದೇವ ಪರಮಪ್ರಭುವೇ ಮಹದೈಪುರೀಶ್ವರಾ ೧೭

**ಟೀಕೆ :** ಭವಮುಳಿದುಂ - ಜನ್ಮನಾಶವಾಗಿಯೂ, ಭವಪ್ರಭವಕರ್ಮಫಲಂ - ಭವ -ಸಂಸಾರದಿಂದ, ಪ್ರಭವ - ಹುಟ್ಟಿದಂಥ, ಕರ್ಮಫಲಂ - ಸಂಚಿತಾದಿ ಕರ್ಮಫಲವು, ಕಿಡದು ಎಂಬ - ನಾಶವಾಗದೆಂಬ, ವಾದಂ - ವಾದವು, ಈ ಭುವನದೊಳ್ - ಈ ಲೋಕದಲ್ಲಿ, ಮೊದಲಿಲ್ಲದ - ಬೇರಿಲ್ಲದ, ಭೂಮಿರುಹಕ್ಕೆ - ವೃಕ್ಷಕ್ಕೆ, ಶಾಖೆ - ಶಾಖೆಯು, ಬಂಜೆವನಿತೆಗೆ - ಬಾಜೆಯಾದ ಸ್ತ್ರೀಗೆ, ಆತ್ಮಜಂ - ಮಗನು, ಮೃತಶರೀರಿಗೆ - ಮರಣವನ್ನೈದಿದ ಮನುಷ್ಯನಿಗೆ, ಜೀವಕಳಾ ಪ್ರವೇಶಂ - ಪ್ರಾಣಕಳಾ ಪ್ರವೇಶವು, ಎಂಬಿವು - ಹೀಗೆಂಬಿವು, ಉಳ್ಳೊಡೆ - ಉಂಟಾದೊಡೆ, ಉಂಟು- ಆವಾದವುಂಟು, ಪೆರತೇನುದೇವ - ಮಿಕ್ಕ ಮಾತೇನಯ್ಯ ?

**ಭಾವಾರ್ಥಬೋಧಿನಿ :** ಬೇರಿಲ್ಲದ ಮರಕ್ಕೆ ಶಾಖೆಯೂ, ಬಂಜೆಗೆ ಮಕ್ಕಳೂ, ಸತ್ತವನಿಗೆ ಮರಳಿ ಪ್ರಾಣವುಂಟಾಗುವುದೂ ನಿಜವಾದ ಪಕ್ಷದಲ್ಲಿ ಜನ್ಮನಾಶವಾದರೂ ಜನ್ಮಸಂಬಂಧದ ಕರ್ಮಫಲವು ನಾಶವಾಗದೆಂಬ ನುಡಿಯು ನಿಜವಾಗಬಹುದು. ಮಿಕ್ಕಮಾತುಗಳೇಕೆ ? ಎಂದರೆ ಗುರುಕರಕಮಲಜಾತರಾಗಿ ಪೂರ್ವಜನ್ಮವನ್ನು ಅಳಿದವರಿಗೆ ಪೂರ್ವಜನ್ಮಕೃತಕರ್ಮಫಲಭೋಗವೆಂದಿಗೂ ಇರದೆಂದು ತಾತ್ಪರ್ಯ. ೧೭

**ಚಂಪಕಮಾಲಾವೃತ್ತ**

ಇವಕೆ ಶಿವಾಂಗಲಿಂಗ ಕೃತಸಂಗಸಮರ್ಚನಮೇಕೆ ಕಾಲಕ
ರ್ಮದುರಿತದೋಷಪೀಡೆ ಯೆಡೆಗೊಂಡನುವಾಸರಮಾರ್ದು ನಿಸ್ತುಷಂ
ಸದೆವೊಡೆಭಕ್ತರೇಂ ಭವಿಗಳೇಂ ಶಿವಭಕ್ತಿಗುಣಪ್ರಭಾವ ಮಿ
ಲ್ಲದೊಡೆ ವಿಭೇದಮೇನು ಪರಮ ಪ್ರಭುವೇ ಮಹದ್ಯೈಪುರೀಶ್ವರಾ ೧೮

**ಟೀಕೆ :** ಅನುವಾಸರಂ - ಪ್ರತಿದಿವಸದಲ್ಲಿಯೂ, ಕಾಲಕರ್ಮದುರಿತದೋಷಪೀಡೆ, ಕಾಲ - ಭೂತಾದಿಕಾಲದಲ್ಲಿಯು, ಕರ್ಮ - ಸಂಚಿತಾದಿ ಕರ್ಮದ, ದುರಿತ - ಕಂಟಕಂಗಳ, ದೋಷ - ಪಾಪಂಗಳ, ಪೀಡೆ - ಬಾಧೆ, ಎಡೆಗೊಂಡು - ಸ್ಥಳವಮಾಡಿಕೊಂಡು, ಆರ್ದು - ಬೊಬ್ಬಿಟ್ಟು, ನಿಸ್ತುಷಂ - ಹೊಟ್ಟುಳಿಯದಂತೆ, ಸದೆವೊಡೆ - ಕೊಲ್ಲುವೊಡೆ, ಇವಕ್ಕೆ - ಈ ಕೊಲ್ಲಿಸಿಕೊಂಬುವಕ್ಕೆ, ಶಿವಾಂಗಲಿಂಗ ಕೃತಸಂಗಸಮರ್ಚನಂ - ಶಿವ - ಮಂಗಳಸ್ವರೂಪವಾದ, ಅಂಗಲಿಂಗ ಕೃತಸಂಗ - ಲಿಂಗಾಂಗಸಂಬಂಧವು, ಸಮರ್ಚನಂ - ಶಿವಲಿಂಗಪೂಜೆಯು, ಏಕೆ - ಏತಕ್ಕೆ ? ಶಿವಭಕ್ತಿಗುಣಪ್ರಭಾವಂ - ಶಿವಭಕ್ತಿ - ಶಿವಭಕ್ತಿಯು, ಗುಣಪ್ರಭಾವಂ - ಮಹಿಮಾತಿಶಯವು, ಇಲ್ಲದೊಡೆ - ಇಲ್ಲದಿರ್ದೊಡೆ, ಭಕ್ತರೇಂ - ಭಕ್ತರೇನು ? ಭವಿಗಳೇಂ - ಭವಿಗಳೇನು ? ವಿಭೇದಮೇನು - ಈ ಭೇದವೇನುಂಟು ? ಇಲ್ಲವೆಂಬುದರ್ಥ.

**ಭಾವಾರ್ಥಬೋಧಿನಿ :** ಪ್ರತಿದಿನದಲ್ಲಿಯೂ ಲಿಂಗವುಳ್ಳವನನ್ನು ಭೂತಾದಿಕಾಲತ್ರಯದ ಸಂಚಿತಾದಿಕರ್ಮದ ಫಲವಾದ ಪಾಪದುಃಖವು ಎಡೆಬಿಡದೆ ಹಿಡಿದುಕೊಂಡು ಕೂಗಿ ಕೊಲ್ಲುವುದಾದಪಕ್ಷದಲ್ಲಿ, ಹೀಗೆ ಕೊಲ್ಲಿಸಿಕೊಳ್ಳುವುದಕ್ಕಾಗಿ ಲಿಂಗಾಂಗಸಂಗವೇಕೆ ? ಲಿಂಗಪೂಜೆಯೇಕೆ ? ಲಿಂಗಭಕ್ತಿಯಲ್ಲಿ ಕರ್ಮದುಃಖವನ್ನು ಪರಿಹಾರಮಾಡುವ ಮಹಿಮಾತಿಶಯವಿಲ್ಲದಿದ್ದರೆ ಲಿಂಗಭಕ್ತರಿಗೂ ಭವಿಗಳಿಗೂ ಏನು ಭೇದವಿರುವುದು ? ಏನೂ ಇಲ್ಲ. ೧೮

**ಚಂಪಕಮಾಲಾವೃತ್ತ**

ಆಗಲದಕ್ಕೆ ತಪ್ಪಿದುಪದೇನು ವಿಶೇಷಿಸಿ ಕರ್ಮಪೀಡನಂ
ತಾಗುವ ವೇಳೆಯೊಳ್ತಿಗೆದು ತಪ್ಪಿಸಿ ತನ್ನಿಮಿಷಂ ಸಮುದ್ಧರಿ
ಪ್ಪಾಗುಣಮಿಲ್ಲದಿರ್ದೊಡೆ ಭವಿತ್ವಕೆ ಭಾಕ್ತಿಕಕೇನು ಭೇದಮು
ಯ್ಯೋ ಗುರುನಾಥನಾಥ ಪರಮಪ್ರಭುವೇ ಮಹದ್ಯೈಪುರೀಶ್ವರಾ ೧೯

**ಟೀಕೆ :** ನಾಥ-ಎನ್ನೊಡೆಯನಾದ, ಗುರುನಾಥ-ಎಲೆ ಗುರುಸ್ವಾಮಿ, ಅದಕ್ಕೆ ತಪ್ಪಿದುದು ಆದೇನು - ಅದಕ್ಕೆ ತಪ್ಪಿದುದಾವುದು? ಆಗಲಿ - ಅದಾಗಲಿ,ವಿಶೇಷಿಸಿ-ವೆಗ್ಗಳವಾಗಿ,ಕರ್ಮಪೀಡನಂ-ಕರ್ಮಬಂಧವು, ತಾಗುವ ವೇಳೆಯೊಳ್-ಸೋಂಕುವ ಸಮಯದಲ್ಲಿ, ತೆಗೆದು - ಕಡೆಗೆ ತೆಗೆದು, ತಪ್ಪಿಸಿ - ಆ ಕರ್ಮ ಬಂಧಮಂ ತೊಲಗಿಸಿ, ತನ್ನಿಮಿಷಂ - ಆಯಿವೆಹಳಚುವಷ್ಟು ವೇಳೆ, ಸಮುದ್ಧರಿಪ್ಪ - ಚೆನ್ನಾಗಿ ರಕ್ಷಿಸುವ, ಆ ಗುಣಂ - ಅಂತಪ್ಪ ಗುಣವು, ಇಲ್ಲದಿರ್ದೊಡೆ - ಉಂಟಾಗದಿರಲಾಗಿ, ಭವಿತ್ವಕೆ - ಭವಿತನಕ್ಕೆ, ಭಾಕ್ತಿಕಕೆ - ಶಿವಭಕ್ತನಾಗುವತನಕ್ಕೆ, ಏನು ಭೇದಂ - ಆವುದು ಭೇದವು ? ಅಯ್ಯೋ - ಅಕ್ಕಟಾ !

**ಭಾವಾರ್ಥಬೋಧಿನಿ :** ಎನ್ನೊಡೆಯನಾದ ಗುರುಸ್ವಾಮಿಯೆ, ಕರ್ಮ ಪೀಡನವು ಸಂಭವಿಸಿದರೆ ಸಂಭವಿಸಲಿ, ಅಷ್ಟು ಮಾತ್ರಕ್ಕೆ ತಪ್ಪಾಗುವುದೇನಿರುವುದು? ಆ ಕರ್ಮಪೀಡನವುಂಟಾಗುವುದರೊಳಗಾಗಿ ಆ ನಿಮಿಷದಲ್ಲಿಯೇ ಆ ಕರ್ಮಪೀಡನ ವನ್ನು ತಪ್ಪಿಸಿ, ರಕ್ಷಿಸುವ ಗುಣವು ಭಕ್ತಿಗೆ ಇಲ್ಲದಿದ್ದರೆ, ಭವಿತ್ವಕ್ಕೂ ಭಕ್ತನಾಗು ವಿಕೆಗೂ ಏನು ಭೇದವಿರುವುದು ? ೧೯

**ಚಂಪಕಮಾಲಾವೃತ್ತ**

ಧರೆಯೊಳೆದೇಹಧರ್ಮಗತಿಯೊಂದೆ ಸಮಸ್ತ ಶರೀರಿಗಳ್ಗೆ ಭ
ಕ್ತರಿಗೆ ಶುಭಾ ಶುಭದ್ವಿವಿಧಕರ್ಮಫಲಂ ಸಮವಾಗಲಾದೊಡೇ
ನಿರವಮು ಮುಟ್ಟಿ ಬಂದೆಡೆಯೊಳಾಂತು ಮರಾಗತ ದುಃಖಮಂ ಸಮು
ದ್ಧರಿಸದೊಡೇಕೆ ಭಕ್ತಿ ಪರಮ ಪ್ರಭುವೇ ಮಹದೈಪುರೀಶ್ವರಾ ೨೦

**ಟೀಕೆ :** ಭೋ ಪರಮ ಪ್ರಭುವೇ - ಎಲೆ ಮಹಾಲಿಂಗವೆ, ಧರೆಯೊಳೆ - ಜಗತ್ತಿನಲ್ಲಿ, ಸಮಸ್ತ ಶರೀರಿಗಳ್ಗೆ - ಸಮಸ್ತ ಪ್ರಾಕೃತಾತ್ಮರಿಗೆಯೂ, ಭಕ್ತರಿಗೆ - ಶಿವಭಕ್ತರಿಗೆಯೂ, ದೇಹಧರ್ಮಗತಿ - ದೇಹಗುಣಂಗಳ ನಡತೆಯು, ಒಂದೇ - ಒಂದೇ ತೆರನು, ಶುಭಾಶುಭದ್ವಿವಿಧಕರ್ಮಫಲಂ - ಪುಣ್ಯಪಾಪಂಗಳೆಂಬೆರಡು ಕರ್ಮಫಲಂಗಳು, ಸಮಂ - ಸರಿಯು, ಆಗಲಿ - ಉಂಟಾಗಲಿ, ಆದೊಡೇಂ - ಆದೊಡೇನು, ಇರವೆ - ನಿಲ್ಲದೆ, ಅವು - ಆ ಶುಭಾಶುಭಕರ್ಮಂಗಳು, ಮುಟ್ಟಿ

ಬಂದೆಡೆಯೊಳ್ - ಸೋಂಕಿಬಂದ ಬಳಿಯಲ್ಲಿ, ಆಂತು - ಇದಿರಾಗಿ ಬಂದು, ದುರಾಗತದುಃಖಮಂ - ಬರಬಾರದ ಕ್ಲೇಶಮಂ, ಸಮುದ್ಧರಿಸದೊಡೆ - ಕಡೆಗೆ ತೊಲಗಿಸಿ ಪಾಲಿಸದಿರ್ದೊಡೆ, ಭಕ್ತಿ - ಶಿವಭಕ್ತಿ ತಾನು, ಏಕೆ ಏತಕ್ಕೆ? ಅದರಿಂದೇನು ಪ್ರಯೋಜನವು?

**ಭಾವಾರ್ಥಬೋಧಿನಿ :** ಮಹಾಪ್ರಭುವೆ, ಜಗತ್ತಿನಲ್ಲಿ ಸಮಸ್ತ ಪ್ರಾಕೃತಾತ್ಮರಿಗೂ ಶಿವಭಕ್ತರಿಗೂ ದೇಹಧರ್ಮದ ವ್ಯವಹಾರವು ಒಂದೇ ಬಗೆಯಿಂದಿರುವುದು. ಮತ್ತು ಶುಭಾಶುಭ ಕರ್ಮಫಲವೂ ಒಂದೆಯಾಗಿರುವುದು. ಇರಲಿ, ಇದ್ದರೇನು? ಆ ಶುಭಾಶುಭಕರ್ಮಫಲವು ಭಕ್ತನನ್ನು ಸೋಂಕುವಷ್ಟರಲ್ಲಿ ಶಿವಭಕ್ತಿಯು ಬರಬಾರದ ಆ ಕರ್ಮಫಲದ ದುಃಖವನ್ನು ಪರಿಹರಿಸಿ ಕಾಪಾಡದಿರ್ದೊಡೆ ಅಂತಹ ಭಕ್ತಿಯಿಂದೇನು ಪ್ರಯೋಜನವು? ೨೦

## ಉತ್ಪಲಮಾಲಾವೃತ್ತಂ

ಶೀತಗೃಹೀತಭೀತ ನಮಳಾನಳ ತೇಜಮನಪ್ಪಿದಂತೆ ರೋ
ಗಾತಿ ವಿಶೇಷದೋಷಹರಕೌಷಧ ಸೇವನೆಯೆಯ್ದಿದಂತೆ ನಿ
ರ್ಧೂತ ಶರೀರದುಃಖಭಯ ಹೋಗದೊಡೇತರ ದೇವಪೂಜೆ ಸಾ
ಕೇತರಭಕ್ತಿಯಯ್ಯ ಪರಮ ಪ್ರಭುವೇ ಮಹದೈಪುರೀಶ್ವರಾ ೨೧

**ಟೀಕೆ :** ಶೀತಗೃಹೀತಭೀತಂ - ಶೀತ - ಚಳಿಯಿಂ, ಗೃಹೀತ - ಹಿಡಿಯಲ್ಪಟ್ಟವನಾಗಿ, ಭೀತಂ - ಅಂಜಿದವನು, ಅಮಳಾನಳತೇಜಮಂ - ಅಮಳ - ನಿರ್ಮಳವಾದ, ಅನಲ - ಅಗ್ನಿಯ, ತೇಜಮಂ - ಕಾಂತಿಯನ್ನು, ಅಪ್ಪಿದಂತೆ - ಆಲಿಂಗನವ ಮಾಡಿದಂತೆ, ರೋಗಾತಿವಿಶೇಷದೋಷಹರಕೆ - ರೋಗ - ವ್ಯಾಧಿಯ, ಅತಿವಿಶೇಷ - ಮಿಗೆವೆಗ್ಗಳವಾದ, ದೋಷ - ವಾತಾದಿದೋಷಂಗಳ, ಹರಕೆ - ಪರಿಹಾರಕ್ಕೆ, ಔಷಧಸೇವನೆ - ರಸಾಯನ ಸೇವನೆ, ಎಯ್ದಿದಂತೆ - ದೊರಕೊಂಡಂತೆ, ನಿರ್ಧೂತ ಶರೀರ ದುಃಖಭಯ - ನಿರ್ಧೂತ - ಕೊಡಲ್ಪಟ್ಟ, ಶರೀರ - ದೇಹದ, ದುಃಖ - ದುಃಖದತ್ತಣಿಂ, ಭಯ - ಅಂಜಿಕೆ, ("ಅವಿಭಕ್ತಿಕೋಯಂ ನಿರ್ದೇಶಃ" ಎಂದುಂಟು). ಹೋಗದೊಡೆ - ಪರಿಹರಿಸದಿರ್ದೊಡೆ, ಏತರ ದೇವಪೂಜೆ - ಶಿವ

ಪೂಜೆಯೇತರದು? ಏತರ ಭಕ್ತಿಯಯ್ಯ - ಶಿವಭಕ್ತಿಯಾವುದಯ್ಯ? ಸಾಕು - ಅದು ಸಾಕು.

**ಭಾವಾರ್ಥಬೋಧಿನಿ :** ಪರಮಾತ್ಮನೆ, ಶೀತದಿಂದ ಭೀತನಾದವನು ಬೆಂಕಿಯ ಬಿಸಿಗೆ ಮೈಯೊಡ್ಡಿದಂತೆಯೂ, ರೋಗಾಧಿಕ್ಯದ ವಾತಾದಿದೋಷದ ಪರಿಹಾರಕ್ಕೆ ಔಷಧ ಸೇವನೆಯನ್ನು ಮಾಡಿದಂತೆಯೂ ಭಕ್ತನು ಭಕ್ತಿಯನ್ನಂಗೀಕರಿಸುವನು. ಆ ಭಕ್ತಿಯಿಂದ ದೇಹದುಃಖದ ಭಯವು ಹೋಗದಿದ್ದರೆ, ಅಂತಹ ಭಕ್ತಿಯೇತಕ್ಕೆ? ಅಂತಹ ಶಿವಪೂಜೆಯೇತಕ್ಕೆ? ಅವುಗಳಿಂದ ಪ್ರಯೋಜನವೇನು? ಅಂತಹ ಭಕ್ತಿಯೂ ಪೂಜೆಯೂ ಸಾಕು. ೨೧

## ಚಂಪಕಮಾಲಾವೃತ್ತ

ದಿನದೆಡೆಯುಂಟೆ ಸೂರ್ಯನುದಯಕ್ಕೆ ತಮೋವಿಲಯಕ್ಕೆ ಹಚ್ಚಕ
ಬ್ಬುನದಳಿವಿಂಗೆ ಸಿದ್ಧರಸದಾಕ್ರಮಣಕ್ಕೆಲೆದೇವ ದೇವ ನೀ
ನನುಕರಿಸಿರ್ದ್ದುವುಂ ದುರಿತದುಃಖಭಯಕ್ಷಯಕಿಂದುನಾಳೆಯೆಂ
ಬಿನಿತು ವಿಳಂಬಮೇಕೆ ಪರಮಪ್ರಭುವೇ ಮಹದೈಪುರೀಶ್ವರಾ ೨೨

**ಟೀಕೆ :** ಎಲೆದೇವದೇವ - ದೇವತಾವಲ್ಲಭನೆ, ಸೂರ್ಯನುದಯಕ್ಕೆ - ಸೂರ್ಯೋದಯಕ್ಕೆಯೂ, ತಮೋವಿಲಯಕ್ಕೆ - ಕತ್ತಲೆ ಹರಿಯುವುದಕ್ಕೆಯೂ, ದಿನದ ಎಡೆವುಂಟೆ - ಕಾಲವಿಳಂಬವುಂಟೆ? ಇಲ್ಲ. ಹಚ್ಚಕಬ್ಬುನದ - ಅಚ್ಚಲೋಹದ ಸ್ವರೂಪದ, ಅಳಿವಿಂಗೆ - ನಾಶಕ್ಕೆಯೂ, ಸಿದ್ಧರಸದ ಆಕ್ರಮಣಕ್ಕೆ - ಸ್ಪರ್ಶವೇದಿಸುವುದಕ್ಕೆಯೂ, ದಿನದ ಎಡೆ ಉಂಟೆ - ಕಾಲಕ್ಷೇಪವುಂಟೆ? ಇಲ್ಲ. ನೀಂ ಅನುಕರಿಸಿರ್ದುವುಂ - ನೀನಂಗೀಕರಿಸಿರ್ದೂ, ದುರಿತದುಃಖ ಭಯಕ್ಷಯಕ್ಕೆ - ದುರಿತ - ಸೈರಿಸಲಳವಲ್ಲದ, ದುಃಖ - ಕ್ಲೇಶಂಗಳತ್ತಣಿಂದಾದ, ಭಯ - ಭೀತಿಯ, ಕ್ಷಯಕ್ಕೆ - ನಾಶಕ್ಕೆ, ಇಂದುನಾಳೆಯೆಂಬ - ಈಗಲಾಗಲೆಂಬ, ಇನಿತುವಿಳಂಬಂ - ಇಷ್ಟುತಡವು, ಏಕೆ - ಏತಕ್ಕೆ? ೨೨

**ಭಾವಾರ್ಥಬೋಧಿನಿ :** ದೇವತಾವಲ್ಲಭನಾದ ಶಿವನೆ, ಸೂರ್ಯೋದಯವಾದ ಮೇಲೆ ಅದಕ್ಕೂ ಕತ್ತಲು ಪರಿಹಾರವಾಗುವುದಕ್ಕೂ ನಡುವೆ ಕಾಲಾವಕಾಶ

ವಿರುವುದೇ ? ಇಲ್ಲ. ಸಿದ್ಧರಸವು ಸೋಂಕಿದ ಮೇಲೆ ಕಬ್ಬಿಣದ ಸ್ವರೂಪವು ಪರಿಹಾರವಾಗುವುದಕ್ಕೆ ಕಾಲವಿಳಂಬವಿರುವುದೇನು ? ಇಲ್ಲ. ಎಂದಮೇಲೆ ನೀನು ನನ್ನನ್ನು ಅಂಗೀಕರಿಸಿದ (ಕೃಪೆಮಾಡಿದ) ಮೇಲೆ ನನ್ನ ದುರಿತದುಃಖಭಯವು ಅಳಿವುದಕ್ಕೆ ಈಗಳಾಗಳೆಂಬಿಷ್ಟು ತಡವಾಗುವುದೇಕೆ ? ೨೨

**ಉತ್ಪಲಮಾಲಾವೃತ್ತಂ**

ಆರಿಗೆ ಪೇಳ್ವೆನಾರಿಗೆ ಪಲುಂಬುವೆನಾರಿಗೆ ತೋರ್ಪೆನೆನ್ನಸಂ
ಸಾರದುರಾಪ್ತದುಃಖಭಯಮಂ ನಿನಗಲ್ಲದೆ ಭಕ್ತಲೋಕಮಂ
ದಾರ ವರಾಭಯಪ್ರದ ಭವಚ್ಚರಣಾಂಬುಜ ಭಕ್ತಿಯೆತ್ತಸಂ
ಸಾರದ ಭೀತಿಯೆತ್ತ ಪರಮ ಪ್ರಭುವೇ ಮಹದೈಪುರೀಶ್ವರಾ ೨೩

**ಟೀಕೆ :** ಭಕ್ತಲೋಕಮಂದಾರ - ಭಕ್ತಜನಂಗಳ್ಗೆ ಕಲ್ಪವೃಕ್ಷವಾದಾತನೆ, ವರಾಭಯಪ್ರದ - ಅಭಯ ವರಂಗಳ ಕೊಡುವಾತನೆ, ಎನ್ನ-ಎನ್ನ ಸಂಬಂಧವಾದ, ಸಂಸಾರದುರಾಪ್ತದುಃಖ ಭಯಮಂ - ಸಂಸಾರ - ಜನ್ಮಮರಣಂಗಳಲ್ಲಿಯ, ದುರಾಪ್ತ - ಐವಲಳವಲ್ಲದ, ದುಃಖ – ಕ್ಲೇಶದಿಂದಾದ, ಭಯಮಂ-ಭೀತಿಯನ್ನು, ಆರಿಗೆ ಪೇಳ್ವೆಂ - ಆರಿಗೆ ಹೇಳುವೆನು, ಆರಿಗೆ ಪಲುಂಬುವೆಂ - ಆರಿಗೆ ಬಾಯಿಬಿಡುವೆನು ? ಆರಿಗೆ ತೋರ್ಪೆಂ - ಆರಿಗೆ ತೋರಿಸುವೆನು ? ನಿನಗಲ್ಲದೆ - ನಿನಗೋರ್ವಂಗಲ್ಲದೆ, ಭವಚ್ಚರಣಾಂಬುಜಭಕ್ತಿ - ನಿನ್ನ ಪಾದಾರವಿಂದದ ಭಕ್ತಿಯು, ಎತ್ತ-ಎಲ್ಲಿ? ಸಂಸಾರದ ಭೀತಿಯೆತ್ತ - ಸಂಸಾರದ ಭಯವೆಲ್ಲಿ !

**ಭಾವಾರ್ಥಬೋಧಿನಿ :** ಭಕ್ತಜನರಿಗೆ ಕಲ್ಪವೃಕ್ಷದಂತಿರ್ದು, ಅವರಿಗೆ ಬೇಡಿದ ವರವನ್ನೂ ಅಭಯವನ್ನೂ ಪ್ರದಾನಮಾಡುವ ಶಿವನೆ, ನನ್ನ ಜನನಮರಣಂಗಳ ತಾಳಲಳವಲ್ಲದ ದುಃಖದ ಭೀತಿಯನ್ನು ನಿನಗಲ್ಲದೆ ಮತ್ತಾರ ಮುಂದೆ ಹೇಳಲಿ ? ಆರಮುಂದೆ ಬಾಯ್ಬಿಟ್ಟು ಪ್ರಲಾಪಿಸಲಿ ? (ನನ್ನ ದುಸ್ಥಿತಿಯನ್ನು) ಆರ ಮುಂದೆ ತೋರಿಸಲಿ ? ನಿನ್ನ ಪಾದಾರವಿಂದದ ಭಕ್ತಿಯು ಎಲ್ಲಿ ? ಸಂಸಾರ ಭಯವು ಎಲ್ಲಿ ? (ನಿನ್ನ ಪಾದದಲ್ಲಿ ಭಕ್ತಿಯಿಟ್ಟವನಿಗೆ ಸಂಸಾರಭಯವಿರಬಾರದೆಂದು ತಾತ್ಪರ್ಯ. ೨೩

## ಚಂಪಕಮಾಲಾವೃತ್ತ

ಪರಮಪತಿವ್ರತಾಸತಿ ನಿಜಪ್ರಿಯವಲ್ಲಭನೊಲ್ಲದಿರ್ದೊಡ
ತ್ಯುರುತರದುಃಖಭಾವದಿ ನಳಲ್ವ ಬಳಲ್ವ ಕೆರಳ್ವ ಬೈವವೊ
ಲ್ಯರಣರು ವೀರಶೈವರತಿನಿಷ್ಠರು ಕೋಪಿಸರೇನದಿನ್ನುಪಾ
ಮರರ್ಗೆನಲುಂಟೆ ಶಕ್ತಿ ಪರಮ ಪ್ರಭುವೇ ಮಹದೈಪುರೀಶ್ವರಾ ೨೪

**ಟೀಕೆ :** ಪರಮಪತಿವ್ರತಾಸತಿ - ಪರಮ - ಉತ್ಕೃಷ್ಟವಾದ, ಪತಿವ್ರತಾಸತಿ - ಪತಿವ್ರತಾಂಗನೆಯು, ನಿಜಪ್ರಿಯವಲ್ಲಭಂ - ತನ್ನ ಪ್ರಾಣವಲ್ಲಭನು, ಒಲ್ಲದಿರ್ದೊಡೆ- ಉದಾಸೀನದಿಂದಿರ್ದೊಡೆ, ಅತ್ಯುರುತರ - ಮಿಗೆ ದೊಡ್ಡಿತ್ತಾದ, ದುಃಖಭಾವದಿಂ- ಕ್ಲೇಶಭಾವದಿಂದ, ಅಳಲ್ವ - ಆಯಾಸಗೊಂಬ, ಬಳಲ್ವ - ನೋವ, ಕೆರಳ್ವ - ಕೋಪಿಸುವ, ಬೈವ - ದೂಷಿಸುವ, ವೋಲ್ - ಹಾಂಗೆ, ಶರಣರು - ಶಿವಶರಣರಾದ, ವೀರಶೈವರ್ - ವೀರಶೈವರಾದ, ಅತಿನಿಷ್ಠರು - ಅತ್ಯಂತ ದೃಢವಂತರು, ಕೋಪಿಸ ರೇಂ - ಕೋಪಿಸರೇನು ? ಇನ್ನು, ಪಾಮರರ್ಗೆ - ಪ್ರಾಕೃತ ಮನುಷ್ಯರ್ಗೆ, ಆದು ಶಕ್ತಿ - ಆ ಸಾಮರ್ಥ್ಯವು, ಎನಲುಂಟೆ - ಇರುವುದೆಂಮ ಹೇಳಲುಂಟೆ ? ಇಲ್ಲ.

**ಭಾವಾರ್ಥಬೋಧಿನಿ :** ಪರಶಿವನೆ, ಪರಮಪತಿವ್ರತೆಯಾದ ಸತಿಯು ತನ್ನ ಪ್ರಾಣವಲ್ಲಭನು ಉದಾಸೀನನಾದ ಸಮಯದಲ್ಲಿ ಅತ್ಯಂತ ದುಃಖಭಾವದಿಂದ ಅಳಲು ವಂತೆಯೂ, ನೋಯುವಂತೆಯೂ, ಕೋಪಿಸುವಂತೆಯೂ, ದೂಷಿಸುವಂತೆಯೂ ದೃಢಚಿತ್ತರಾದ ವೀರಶೈವಶರಣರು (ಲಿಂಗವೇಪತಿಯಾಗುಳ್ಳವರು) ನೀನು ಉದಾಸೀನ ನಾದರೆ ನಿನ್ನನ್ನು ಕೋಪಿಸರೇನು ? ಕೋಪಿಸುವರು. ಹೀಗೆ ಕೋಪಿಸುವ ಸಾಮರ್ಥ್ಯವು ಶರಣರಲ್ಲದ ಪ್ರಾಕೃತ ಜನರಿಗಿರುವುದೇನು ? ಇಲ್ಲ. ೨೪

## ಉತ್ಪಲಮಾಲಾವೃತ್ತ

ಆಮಯಘಾತಿಯಿಂ ವಿಷಯದಂಡಲೆಯಿಂ ಬಹುದುಃಖದೊಗ್ಗಿನಿಂ
ತಾಮಸದಿರ್ಕೆಯಿಂ ನೆರೆ ಮುದಂಗೆಡುತ್ತಿರ್ದೆನೆ ದೇವ ಭಕ್ತಕಾ
ಯೋಮಮ ಕಾಯಮೆಂಬವಚನಂ ದಿಟಮಾದೊಡೆ ರಕ್ಷಿಸೆನ್ನುಮಂ
ಕಾಮಪುರಾಂತಕಾರಿ ಪರಮಪ್ರಭುವೇ ಮಹದೈಪುರೀಶ್ವರಾ ೨೫

**ಟೀಕೆ :** ಕಾಮಪುರಾಂತಕಾರಿದೇವ - ಕಾಮ - ಮನ್ಮಥಂಗೆಯೂ, ಪುರ - ತ್ರಿಪುರಕ್ಕೆಯೂ, ಅಂತಕ - ಕಾಲಂಗೆಯೂ, ಅರಿದೇವ - ಹಗೆಯಾದ ದೇವನೆ, ಆಮಯಘಾತಿಯಿಂ - ಭವರೋಗದ ಪೆಟ್ಟಿನಿಂ, ವಿಷಯದ - ಶಬ್ದಾದಿವಿಷಯಂಗಳ ಅಂಡಲೆಯಿಂ - ಕಾಟದಿಂದೆಯೂ, ಬಹುದುಃಖದ - ಹಲವುತೆರನಾದ ಕ್ಲೇಶಗಳ, ಒಗ್ಗಿನಿಂ – ಸಮೂಹದಿಂದೆಯೂ, ತಾಮಸದ ಇಕ್ಕೆಯಿಂ - ಅಜ್ಞಾನಕ್ಕೆ ನೆಲೆಯಾಗಿಪ್ಪುದರಿಂದೆಯೂ, ನೆರೆ - ಚೆನ್ನಾಗಿ, ಮುದಂಗೆಡುತೆ - ಸಂತಸಕೆಡುತ್ತೆ, ಐದೆನೆ-ಇದ್ದೇನೆ, ಭಕ್ತಕಾಯೋಮಮಕಾಯಮೆಂಬ - ಭಕ್ತನದೇಹವೇ ಎನ್ನದೇಹವೆಂಬ, ವಚನಂ - ನಿನ್ನವಾಕ್ಯವು, ದಿಟಮಾದೊಡೆ - ಯಥಾರ್ಥವಾದೊಡೆ, ಎನ್ನುವಂ - ನನ್ನನು, ಸಲಹು - ರಕ್ಷಿಸು. ೨೫

**ಭಾವಾರ್ಥಬೋಧಿನಿ :** ಮನ್ಮಥನನ್ನೂ, ತ್ರಿಪುರಗಳನ್ನೂ, ಯಮನನ್ನೂ ಜಯಿಸಿದ ಪ್ರಭುವೆ, ಭವರೋಗದ ಪೆಟ್ಟಿನಿಂದಲೂ, ಶಬ್ದಾದಿ ವಿಷಯಗಳ ಕಾಟ-ದಿಂದಲೂ, ಬಹುವಿಧವಾದ ಕ್ಲೇಶಗಳ ಸಮೂಹದಿಂದಲೂ, ಅಜ್ಞಾನಕ್ಕೆ ಆಶ್ರಯವಾಗಿರುವುದರಿಂದಲೂ ನಾನು ಸಂತಸಗೆಟ್ಟಿರುವೆನು. ಭಕ್ತನ ದೇಹವೇ ನನ್ನ ದೇಹವೆಂದಿರುವ ನಿನ್ನ ವಾಕ್ಯವು ದಿಟವಾಗಿದ್ದ ಪಕ್ಷದಲ್ಲಿ ದುಃಖಿತನಾದ ನನ್ನನ್ನು ರಕ್ಷಿಸು. (ರಕ್ಷಿಸದಿದ್ದರೆ ನಿನ್ನ ವಾಕ್ಯಕ್ಕೆ ಭಂಗಬರುವುದೆಂದು ತಾತ್ಪರ್ಯ) ೨೫

**ಅವತಾರಿಕೆ** . ಶರಣನು ಆಶಾರಹಿತನಾಗಿರಬೇಕೆಂದು ಪೇಳುತ್ತಿರ್ದಪಂ.

**ಚಂಪಕಮಾಲಾವೃತ್ತಂ**

ಭುವನಚತುರ್ದಶೈಕ ವಿಭುವಾಗಿ ವಿರಾಜಿಸುತ್ತಿರ್ಪ ನಿನ್ನ ವೈ
ಭವದೊಳಗಾಂ ದರಿದ್ರನೆನಿಸಿರ್ಪುದಿದೇಂ ಕೆಲವೂರನಾಳ್ವ ವಾ
ನವನೊಳಗಾಗಿ ತನ್ನನಿರದಾಶ್ರಯಿಸಿರ್ದರನೊಲ್ದು ರಕ್ಷಿಪಂ
ಶಿವನಿನಗೇನಪೂರ್ವ ಪರಮಪ್ರಭುವೇ ಮಹದೈಪುರೀಶ್ವರಾ ೨೬

**ಟೀಕೆ :** ಭುವನಚತುರ್ದಶೈಕವಿಭುವಾಗಿ - ಭುವನಚತುರ್ದಶ - ಹದಿನಾಲ್ಕು ಲೋಕಂಗಳಿಗೆಯೂ, ಏಕವಿಭುವಾಗಿ - ಓರ್ವನೇ ಕರ್ತೃವಾಗಿ, ವಿರಾಜಿಸುತ್ತಿರ್ಪ-ಒಪ್ಪುತ್ತಿರ್ಪ, ನಿನ್ನ ವೈಭವದೊಳಗೆ - ನಿನ್ನೈಶ್ವರ್ಯದಲ್ಲಿ, ಆಂ - ನಾನು,

ದರಿದ್ರನೆನಿಸಿರ್ಪುದು - ಬಡವನೆನಿಸಿರ್ಪುದು, ಇದೇಂ - ಇದೇನು? ಕೆಲವೂರನಾಳ್ವ - ಕೆಲವು ಹಳ್ಳಿಗಳನಾಳುತ್ತಿರ್ಪ, ಮಾನವನೊಳಗಾಗಿ-ಅಲ್ಪಮನುಷ್ಯನು ಸಹವಾಗಿ, ತನ್ನಂ - ತನ್ನನು, ಇರದೆ-ಬಿಡದೆ, ಆಶ್ರಯಿಸಿರ್ದರಂ-ಪೊರ್ದುಕೊಂಡಿರ್ದವರನು, ಒಲ್ದು - ಪ್ರಿತಿಯಿಂದೆ, ರಕ್ಷಿಪಂ - ಸಲಹುವನು, ಶಿವ - ಎಲೈ ಪರಮಮಂಗಳ ಸ್ವರೂಪನಾದ ದೇವನೆ, ನಿನಗೆ ಏನಪೂರ್ವಂ - ನನ್ನಂ ರಕ್ಷಿಸುವುದಕ್ಕೆ ನಿನಗೇನಿಲ್ಲ? ರಕ್ಷಿಸು.

**ಭಾವಾರ್ಥಬೋಧಿನಿ :** ಪರಮಾತ್ಮನೆ, ಹದಿನಾಲ್ಕು ಲೋಕಂಗಳಿಗೆ ಮುಖ್ಯ ಕರ್ತೃವಾಗಿ ಶೋಭಿಸುತ್ತಿರುವ ನಿನ್ನ ಭಾಗ್ಯದಲ್ಲಿ ನಾನು ಬಡವನಾಗಿರುವುದೆಂದ ರೇನು ? ಕೆಲವು ಹಳ್ಳಿಗಳನಾಳುತ್ತಿರ್ಪ ಸಾಮಾನ್ಯ ಮನುಷ್ಯನಾದರೂ ತನ್ನನ್ನು ಆಶ್ರಯಿಸಿದವರನ್ನು ಕೈಬಿಡದೆ ಪ್ರೀತಿಯಿಂದ ಸಲಹುತ್ತಿರುವನಲ್ಲವೆ ? ಮಂಗಳ ಮೂರ್ತಿಯೆ, ನಿನಗೆ ನನ್ನನ್ನು ರಕ್ಷಿಸುವುದೇನು ಅಪೂರ್ವವು. ರಕ್ಷಿಸು. ೨೬

**ಚಂಪಕಮಾಲಾವೃತ್ತಂ**

ಸಕಲಸುಖೈಕಕರ್ತೃವಹ ನಿನ್ನೊಡಗೂಡಿ ವಿರಾಜಿಸುತ್ತ ಮಿ
ವಿಕಳಮನುಷ್ಯರಂ ಬರಿದೆ ಬೇಡಿ ಲಘುತ್ವಮನೆಯ್ದಿ ದೈನ್ಯದಿಂ
ದಕಟಕಟಾ ಮುದಂಗೆಡಲು ನೋಳ್ಪರೆ ಪೇಳ್ನಿಜಭಕ್ತವತ್ಸಲಾ
ಪ್ರಕಟಕೃಪಾಸಮುದ್ರ ಪರಮಪ್ರಭುವೇ ಮಹದೈಪುರೀಶ್ವರಾ ೨೭

**ಟೀಕೆ :** ನಿಜಭಕ್ತವತ್ಸಲಾ - ತನ್ನ ನಂಬಿದಭಕ್ತರಲ್ಲಿ ಸ್ನೇಹವನುಳ್ಳ, ಪ್ರಕಟಕೃಪಾಸಮುದ್ರ - ಪ್ರಖ್ಯಾತನಾದ ಕರುಣಾಸಮುದ್ರನೆ, ಸಕಲಸುಖೈಕ ಕರ್ತೃವಹ - ಸಕಲ - ಸಮಸ್ತವಾದ, ಸುಖ - ಸುಖಂಗಳಿಗೆ, ಏಕ-ಮುಖ್ಯವಾದ, ಕರ್ತೃವಹ - ಅಧಿಪತಿಯಾದ, ನಿನ್ನ, ಒಡಗೂಡಿ - ಸಂಗಡವಿರ್ದು, ವಿರಾಜಿಸುತ್ತಂ- ಒಪ್ಪುತ್ತ, ಆಂ - ನಾನು, ದೈನ್ಯದಿಂದೆ - ದೀನತ್ವದಿಂದ, ಈ ವಿಕಳಮನುಷ್ಯರಂ - ಈ ಮರುಳುಮನುಜರನ್ನು, ಬರಿದೆ - ವ್ಯರ್ಥವಾಗಿ, ಬೇಡಿ - ಯಾಚಿಸಿ,ಲಘುತ್ವಮಂ ಎಯ್ದಿ - ಹಗುರವಾಗಿ, ಮುದಂಗೆಡಲು - ಸಂತಸಂಗೆಡಲು, ನೋಳ್ಪರೆಪೇಳ್ - ನೋಡುವರೆ ಹೇಳು ? ಅಕಟಕಟಾ - ಅಯ್ಯಯ್ಯೋ ! ೨೭

**ಭಾವಾರ್ಥಬೋಧಿನಿ :** ತನ್ನ ನಂಬಿದ ಭಕ್ತರಲ್ಲಿ ವಾತ್ಸಲ್ಯವುಳ್ಳವನೂ, ಪ್ರಖ್ಯಾತಕೃಪಾಸಮುದ್ರನೂ ಆದ ಪರಶಿವನೆ, ಸಕಲ ಸುಖಗಳಿಗೆ ಮುಖ್ಯಕರ್ತೃವಾದ ನಿನ್ನೊಡನಿರ್ದು ನಿನ್ನನ್ನು ಸೇವಿಸುವ ನಾನು ದೈನ್ಯದಿಂದ ಮರುಳು ಜನರನ್ನು ವ್ಯರ್ಥವಾಗಿ ಬೇಡಿ, ಲಘುತ್ವವನ್ನು ಹೊಂದಿ, ಸಂತಸಗೆಟ್ಟಿರಲು ಈ ಸ್ಥಿತಿಯನ್ನು ನೀನು ನೋಡುತ್ತಿರಬಹುದೇ ? ಅಯ್ಯೋ ! ಸ್ವಾಮಿಯೆ, ಹೇಳು. ೨೭

## ಉತ್ಪಲಮಾಲಾವೃತ್ತಂ

ಕ್ಷೀರಸಮುದ್ರ ಸನ್ನಿಧಿಯೊಳಿರ್ದು ಪಿಪಾಂಸಿತನಾಗಿ ಬಾವಿಯಂ
ಹಾರೆಯನಾಂತಗುಳ್ವವನೊಲಾಯ್ತು ಸಮಸ್ತಸುಖೈಕಸಿದ್ಧಿವಿ
ಸ್ತಾರಕನಪ್ಪ ನಿನ್ನನುಪಧಾವಿಸದನ್ಯ ಮನುಷ್ಯಮಾತ್ರಮಂ
ಹಾರುವ ಬುದ್ಧಿಯೆನ್ನ ಪರಮಪ್ರಭುವೇ ಮಹದ್ವೈಪುರೀಶ್ವರಾ ೨೮

**ಟೀಕೆ :** ಪರಮಪ್ರಭುವೇ - ಎಲೆಸಮಸ್ತಜಗದ್ವಲ್ಲಭನೆ, ಸಮಸ್ತಸುಖೈಕಸಿದ್ಧಿ ವಿಸ್ತಾರಕನಪ್ಪ - ಸಮಸ್ತ - ಸಕಲವಾದ, ಸುಖೈಕ - ಸುಖವೊಂದರ, ಸಿದ್ಧಿ - ಸಿದ್ಧಿಯನು, ವಿಸ್ತಾರಕನಪ್ಪ - ವಿಸ್ತರಿಸುವನಾದಂಥ, ನಿನ್ನ - ನಿನ್ನನು, ಉಪಧಾವಿಸದೆ - ಬೇಡದೆ, ಅನ್ಯಮನುಷ್ಯಮಾತ್ರಮಂ - ಬೇರಾದ ಮನುಷ್ಯಮಾತ್ರವನು, ಹಾರುವ – ಆಸೆಮಾಡುವ, ಎನ್ನಬುದ್ಧಿ - ಎನ್ನವಿವೇಕವು, ಕ್ಷೀರಸಮುದ್ರಸನ್ನಿಧಿಯೊಳ್ - ಪಾಲ್ಗಡಲತಡಿಯಲ್ಲಿ, ಇರ್ದು, ಪಿಪಾಂಸಿತನಾಗಿ - ನೀರಡಿಸಿದವನಾಗಿ, ಬಾವಿಯಂ - ಕೂಪವನು, ಹಾರೆಯನಾಂತು - ಹಾರೆಯ ಪಿಡಿದು, ಅಗುಳ್ವವನೊಲಾಯ್ತು - ಅಗೆವಗಾಂಪನಬುದ್ಧಿಯಂತಾಯ್ತು.

**ಭಾವಾರ್ಥಬೋಧಿನಿ:** ಜಗದಧೀಶ್ವರನೆ, ಸಕಲವಿಧ ಸುಖಗಳ ಸಿದ್ಧಿಯನ್ನು ವಿಸ್ತರಿಸುವ ನಿನ್ನನ್ನು ಬೇಡದೆ, ಮನುಷ್ಯಮಾತ್ರರಾದ ಅನ್ಯರನ್ನು ಬೇಡಲು ಆಶೆ ಮಾಡುವ ನನ್ನ ತಿಳುವಳಿಕೆಯು, ಕ್ಷೀರಸಮುದ್ರದ ತೀರದಲ್ಲಿ ನೆಲಸಿರ್ದು, ನೀರಡಿಸಿದವನಾಗಿ ಹಾರೆಯನ್ನು ಹಿಡಿದುಕೊಂಡು ಬೇರೆ ಬಾವಿಯನ್ನು ತೋಡುವ ಗಾಂಪನ ಬುದ್ಧಿಯಂತೆ ಆದುದಲ್ಲವೆ ? ೨೮

**ಉತ್ಪಲಮಾಲಾವೃತ್ತಂ**

ಬೇಡಿದವರ್ಗೆ ಬೇಡಿದ ಪದಾರ್ಥಮನೀವುತೆನೀನದಾರುವುಂ
ಬೇಡದ ಭಕ್ತಿಸೌಖ್ಯಪರಿಣಾಮ ಪದಸ್ಥಿತಿಯ ಪ್ರಭಾವದಿಂ
ದಾಡುತೆ ಪಾಡುತಿರ್ಪತುಳ ಭಕ್ತಿಯನೆನ್ನೊಳಯತ್ನದಿಂದೆ ಕೈ
ಗೂಡಿಸಿ ರಕ್ಷಿಸಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೨೯

**ಟೀಕೆ :** ಭೋಃ ಪರಮಪ್ರಭುವೇ - ಎಲೈ ಜಗದ್ವಲ್ಲಭನೆ, ನೀಂ - ನೀನು, ಬೇಡಿದವರ್ಗೆ - ಯಾಚಿಸುವರ್ಗೆ, ಬೇಡಿದ ಪದಾರ್ಥಮಂ - ಇಷ್ಟವಾದ ಪದಾರ್ಥವನು, ಈವುತೆ - ಕೊಡುತ್ತೆ, ಅದಾರುವುಂ - ಆರಾದೊಡೆಯೂ, ಬೇಡದ - ಯಾಚಿಸದ, ಭಕ್ತಿಸೌಖ್ಯಪರಿಣಾಮಪದಸ್ಥಿತಿಯ - ಭಕ್ತಿ - ಶಿವಭಕ್ತಿಯಲ್ಲಿಯ, ಸೌಖ್ಯ - ಆನಂದದ, ಪರಿಣಾಮ - ಅನುಭವದ, ಪದ - ಮಾರ್ಗದ, ಸ್ಥಿತಿಯ-ನಿಲುಕಡೆಯ, ಪ್ರಭಾವದಿಂದೆ - ಸಾಮರ್ಥ್ಯದಿಂದ, ಆಡುತೆ - ಕ್ರೀಡಿಸುತ್ತೆ, ಪಾಡುತೆ - ಗಾನವಂ ಮಾಡುತೆ, ಇರ್ಪ – ಇರುವಂಥ, ಅತುಳಭಕ್ತಿಯಂ - ಸರಿಯಿಲ್ಲದ ಶಿವಭಕ್ತಿಯನ್ನು, ಎನ್ನೊಳ್ - ಎನ್ನಲ್ಲಿ, ಅಯತ್ನದಿಂದೆ - ಅಪ್ರಯಾಸದಿಂದೆ, ಕೈಗೂಡಿಸಿ - ಹಸ್ತಗತವಂ ಮಾಡಿ, ರಕ್ಷಿಸಯ್ಯ - ಪಾಲಿಸಯ್ಯ.

**ಭಾವಾರ್ಥಬೋಧಿನಿ :** ಮಹದೈಪುರೀಶ್ವರನೆ, ಯಾಚಿಸಿದವರಿಗೆ ಯಾಚಿಸಿದ ವಸ್ತುಗಳನ್ನು ಕೊಡುತ್ತಿರ್ದು, ಮತ್ತಾರೂ ಯಾಚಿಸದಿರುವ ಶಿವಭಕ್ತಿಯ ಸುಖಾನುಭವದ ಮಾರ್ಗದಲ್ಲಿರುವ ಸಾಮರ್ಥ್ಯದಿಂದ ಆಡುತ್ತೆ ಮತ್ತು ಗಾನಮಾಡುತ್ತೆ ಸುಖಿಸುವ ಅತುಳ ಭಕ್ತಿಯನ್ನು ನೀನು ಎನಗೆ ಅಪ್ರಯತ್ನದಿಂದೆ ಕೈಗೂಡುವಂತೆ ಮಾಡಿ, ನನ್ನನ್ನು ಕಾಪಾಡು. ೨೯

**ಚಂಪಕಮಾಲಾವೃತ್ತಂ**

ಕನಸಿನೊಳಾದೊಡಂ ಮಗನೆ ಬಾ ನಿನಗೀಗತಿ ಯೀ ಪ್ರಯತ್ನ ಮೀ
ಯನುವಿದರಿಂದನೂನಘನಸಂಪದಸಿದ್ಧಿಯಿದಕ್ಕೆ ಚಿಂತೆ ಬೇ
ಡೆನುತೆ ಕರಾಬ್ಜಮಂ ಶಿರದೊಳಿಟ್ಟು ಕೃಪಾಮೃತಸಾರಪೂರಲೋ
ಚನದೆ ನಿರೀಕ್ಷಿಸಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೩೦

**ಟೀಕೆ :** ಭೋ ಪರಮಪ್ರಭುವೇ-ಎಲೆ ಜಗದ್ವಲ್ಲಭನೆ, ಕನಸಿನೊಳಾದೊಡಂ-ಸ್ವಪ್ನಾವಸ್ಥೆಯಲ್ಲಿಯಾದೊಡೆಯೂ, ಮಗನೆ - ಎಲೆ ಪುತ್ರನೆ, ಬಾ - ಇತ್ತ ಬಾ, ನಿನಗೆ - ನಿನಗೋಸುಗ, ಈ ಗತಿ - ಈ ಮಾರ್ಗವು, ಈ ಪ್ರಯತ್ನಂ - ಈ ಉಪಾಯವು, ಈ ಅನು - ಈ ಕಾರ್ಯ, ಇದರಿಂದೆ - ಇದರ ದೆಸಿಯಿಂದ, ಅನೂನಘನ ಸಂಪದಸಿದ್ಧಿ - ಅನೂನ - ಪೂರ್ಣವಾದ, ಘನ - ದೊಡ್ಡಿತ್ತಾದ, ಸಂಪದಸಿದ್ಧಿ - ಒಳ್ಳಿತ್ತಾದ ಸ್ಥಾನವ ಸಿದ್ಧಿಯು, ಇದಕ್ಕೆ - ಈಯರ್ಥಕ್ಕೆ, ಚಿಂತೆಬೇಡ - ವ್ಯಾಕುಲ ಬೇಡ, ಎನುತೆ - ಹೀಗೆ ಹೇಳುತ್ತ, ಕರಾಬ್ಜಮಂ - ಹಸ್ತಪದ್ಮಮಂ, ಶಿರದೊಳ್ - ಮಸ್ತಕದಲ್ಲಿ, ಇಟ್ಟು-ಇರಿಸಿ, ಕೃಪಾಮೃತಸಾರಪೂರಲೋಚನದ - ಕೃಪಾ - ಕರುಣವೆಂಬ, ಅಮೃತಸಾರ - ಅಮೃತರಸದ, ಪೂರ - ಪ್ರವಾಹವನುಳ್ಳ, ಲೋಚನದೆ - ನೋಟದಿಂದ, ನಿರೀಕ್ಷಿಸಯ್ಯ - ನಿಟ್ಟಿಸಯ್ಯ.

**ಭಾವಾರ್ಥಬೋಧಿನಿ :** ಎಲೈ ಜಗದ್ವಲ್ಲಭನೆ, ನೀನು ನನ್ನ ಸ್ವಪ್ನಾವಸ್ಥೆಯಲ್ಲಿಯಾದರೂ (ವೈದೋರಿ) "ಮಗನೇ ! ಬಾ, ನಿನಗೆ ಈ ಮಾರ್ಗವಿರುವುದು, ಇದಕ್ಕೆ ಇದು ಉಪಾಯವು, ಈ ಕಾರ್ಯ ಮಾಡು, ಹೀಗೆ ಮಾಡುವುದರಿಂದ ನಿನಗೆ ಪರಿಪೂರ್ಣವಾದ ಶ್ರೇಷ್ಠ ಪದವಿಯು ಸಿದ್ಧಿಸುವುದು, ಈ ವಿಚಾರದಲ್ಲಿ ವ್ಯಾಕುಲಪಡಬೇಡ" ಎಂದು ಬೋಧಿಸಿ, ನಿನ್ನ ಕರಕಮಲವನ್ನು ನನ್ನ ಶಿರದಲ್ಲಿರಿಸಿ, ನಿನ್ನ ಕರುಣಾಮೃತರಸಪ್ರವಾಹವುಳ್ಳ ದೃಷ್ಟಿಯಿಂದ ನಿರೀಕ್ಷಿಸಯ್ಯಾ. ೩೦

**ಚಂಪಕಮಾಲಾವೃತ್ತಂ**

ಅಳದಿರು ಕಂದ ನಿನ್ನಭಿಮತೈಕಫಲೋದಯಸೌಖ್ಯ ಸಿದ್ಧಿಯಂ
ಸಲೆ ನಿನಗಿತ್ತೆನಂಜದಿರು ಚಿಂತಿಸದಿರ್ಮನಗುಂದದಿ ವೃಥಾ
ಕಳವಳವೇತಕಾನಿರಲು ಬೇಡ ಮನೋವ್ಯಥೆಯೆಂದು ನೇಹದಿಂ
ತಲೆದಡವುತ್ತೆ ನೋಡು ಪರಮಪ್ರಭುವೇ ಮಹದೈಪುರೀಶ್ವರಾ ೩೧

**ಟೀಕೆ :** ಭೋ ಪರಮಪ್ರಭುವೇ - ಎಲೆ ಜಗತ್ಕರ್ತನೆ, ಕಂದ - ಎಲೆಮಗನೆ, ಅಳದಿರು - ರೋದನಮಂ ಮಾಡದಿರು, ನಿನ್ನ - ನಿನ್ನ ಸಂಬಂಧವಾದ, ಅಭಿಮತೈಕ ಫಲೋದಯಸೌಖ್ಯಸಿದ್ಧಿಯಂ - ಅಭಿಮತ - ಇಷ್ಟವಾದ, ಏಕ - ಮುಖ್ಯವಾದ,

ಫಲ - ಫಲಂಗಳ, ಉದಯ - ಅಭ್ಯುದಯದಿಂದಾದ, ಸೌಖ್ಯ - ಪರಿಣಾಮದ, ಸಿದ್ಧಿಯುಂ - ಸಿದ್ಧಿಯನು, ಸಲೆ - ಚೆನ್ನಾಗಿ, ನಿನಗೆ ಇತ್ತೆಂ - ಕೊಟ್ಟೆನು, ಅಂಜದಿರು - ಭಯಗೊಳ್ಳದಿರು, ಚಿಂತಿಸದಿರು - ವ್ಯಾಕುಲಿಸದಿರು, ಮನಗುಂದದಿರು - ಅಳಿಮನಬೇಡ, ಆಂ ಇರಲು - ನಾನಿದ್ದರೂ, ವೃಥಾ - ವ್ಯರ್ಥವಾಗಿ, ಕಳವಳವು ಏತಕೆ - ಹಂಬಲಿಸುವುದೇತಕೆ, ಮನೋವ್ಯಥೆ - ಮನದ ನೋವು, ಬೇಡ, ಎಂದು - ಹೀಗೆಂದು, ನೇಹದಿಂ - ಸ್ನೇಹದಿಂದ, ತಲೆವಡವುತ್ತೆ - ಶಿರವ ನೇವರಿಸುತ್ತ, ನೋಡು - ಈಕ್ಷಿಸು.

**ಭಾವಾರ್ಥಬೋಧಿನಿ :** **ಜಗತ್ಪ್ರಭುವೆ, ಎಲೆ ಕಂದ ! ದುಃಖಿಸದಿರು. ನಿನಗೆ ಇಷ್ಟವಾದ ಮುಖ್ಯ ಫಲಾಭ್ಯುದಯದ ಸುಖದ ಸಿದ್ಧಿಯನ್ನು ಕೊಟ್ಟಿರುವೆನು. ಅಂಜಬೇಡ, ಕಳವಳಿಸಬೇಡ, ಬಗೆಗುಂದಬೇಡ, ನಿನಗೆ ಸಹಾಯಕನಾಗಿ, ನಾನಿರುವಾಗ ವ್ಯರ್ಥವಾಗಿ ಹಂಬಲಿಸುವುದೇಕೆ ? ನಿನ್ನ ಮನಸ್ಸು ನೊಂದುಕೊಳ್ಳುವುದು ಬೇಡವೆಂದು ಸ್ನೇಹದಿಂದ ತಲೆಯನ್ನು ನೇವರಿಸುತ್ತೆ ನಿರೀಕ್ಷಿಸು.** ೩೧

**ಚಂಪಕಮಾಲಾವೃತ್ತಂ**

ಸಲುಗೆಯೊಳೆಂದೆನೈಸೆ ಬರಿದಿಲ್ಲದುದೆಲ್ಲಮನುಂಟುಮಾಡಿ ನೀಂ
ಸುಲಭತೆಯಿಂ ತೊದಲ್ನುಡಿಯನಾಲಿಸುವಲ್ಲಿ ವಿನೋದಶೀಲನೆಂ
ದಲಸದೆ ಸಾಕದಂತಿರಲಿ ನಿನ್ನ ಪದಾಂಬುಜ ಭಕ್ತಿ ಭಾಗ್ಯ ನಿ
ಶ್ಚಲ ಸುಖಮಂ ಕುಡಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೩೨

**ಟೀಕೆ :** ಭೋ ಪರಮಪ್ರಭುವೇ - ಎಲೆ ವಿಶ್ವವಲ್ಲಭನೆ, ನೀಂ - ನೀನು, ಸುಲಭತೆಯಿಂ - ಸುಲಭತ್ವದಿಂದೆ, ತೊದಲ್ನುಡಿಯುಂ - ತೊದಲು ನುಡಿಯನ್ನು, ಆಲಿಸುವಲ್ಲಿ - ಕೇಳುವಲ್ಲಿ, ವಿನೋದಶೀಲನೆಂದು - ಪ್ರೀತಿಯುಳ್ಳವನೆಂದು, ಅಲಸದೆ - ಬೇಸರದೆ, ಬರಿದೆ - ಸುಮ್ಮನೆ, ಇಲ್ಲದುದೆಲ್ಲಮಂ - ಇಲ್ಲದ ಗುಣವನೆಲ್ಲವನೂ, ಉಂಟುಮಾಡಿ - ನಿನ್ನೊಳುಳ್ಳವನ್ನಾಗಿ ಮಾಡಿ, ಸಲುಗೆಯೊಳ್ - ಸಲುಗೆಯಲ್ಲಿ, ಎಂದೆನೈಸೆ - ಎಂದೆನಷ್ಟೇ, ಅದು ಸಾಕು - ಆ ಮಾತನ್ನು ಬಿಡು, ಅಂತಿರಲಿ - ಹಾಂಗಿರಲಿ, ನಿನ್ನ - ನಿನ್ನ ಸಂಬಂಧವಾದ, ಪದಾಂಬುಜ ಭಕ್ತಿ ಭಾಗ್ಯ

ನಿಶ್ಚಲ ಸುಖಮಂ - ಪದಾಂಬುಜ ಪಾದಪದ್ಮಂಗಳಲ್ಲಿಯ, ಭಕ್ತಿಭಾಗ್ಯ - ಭಕ್ತಿ ಸಂಪತ್ತಿನಿಂದಾದ, ನಿಶ್ಚಲ - ಚಲನೆಯಿಲ್ಲದ, ಸುಖಮಂ - ಪರಿಣಾಮವನು, ಕುಡಯ್ಯ - ಪಾಲಿಸಯ್ಯ.

**ಭಾವಾರ್ಥಬೋಧಿನಿ :** ವಿಶ್ವವಲ್ಲಭನೆ, ನೀನು ಸುಲಭವಾಗಿ ತೊದಲ್ನುಡಿಗಳನ್ನು ಆಲಿಸಿಸುವಲ್ಲಿ ವಿನೋದವುಳ್ಳವನೆಂದು ಭಾವಿಸಿ, ನಾನು ಬೇಸರಪಡದೆ, ಸುಮ್ಮಸುಮ್ಮನೆ ನಿನ್ನಲ್ಲಿ ಇಲ್ಲದ ಗುಣಗಳನ್ನುಂಟುಮಾಡಿ ಸಲುಗೆಯಿಂದ ನುಡಿದೆನಷ್ಟೆ ಆ ನುಡಿ ಸಾಕು. ಅದು ಹಾಗಿರಲಿ. ನಿನ್ನ ಪಾದಾಬ್ಜದಲ್ಲಿಯ ಭಕ್ತಿ ಸಂಪತ್ತಿನ ಸ್ಥಿರಸುಖವನ್ನು ನನಗೆ ಕರುಣಿಸು. ೩೨

## ಉತ್ಪಲಮಾಲಾವೃತ್ತಂ

ಪುಟ್ಟಿದುದಂಜದಲ್ಲದೊಡೆ ಮುಟ್ಟಿದುದಂಜದೆನಿಪ್ಪ ದೊಂದುನಾ
ಣ್ಬಟ್ಟೆಯ ಗಾದೆ ಗೊಂದೊರೆ ವಿಶೇಷ ಮದೆಂತೆನೆ ನಿನ್ನ ತೇಜದಿಂ
ಪುಟ್ಟಿ ಮಗುಳ್ದು ನಿನ್ನುವನೆ ಮುಟ್ಟಿದಕಾರಣ ಮಂಜೆ ನಂಜೆನಾಂ
ನೆಟ್ಟನೆ ಧೀರನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೩೩

**ಟೀಕೆ :** ಭೋ ಪರಮಪ್ರಭುವೇ - ಎಲೆ ವಿಶ್ವಾಧಿನಾಥನೆ, ಪುಟ್ಟಿದುದು-ಹುಟ್ಟಿದಂತಹುದು, ಅಂಜದು - ಬೆದರದು, ಅಲ್ಲದೊಡೆ - ಅಲ್ಲದಿರ್ದೊಡೆ, ಮುಟ್ಟಿದುದು-ಸೋಂಕಿದುದು, ಅಂಜದು - ಹೆದರದು, ಎನಿಪ್ಪ - ಹೀಗೆಂಬ, ಒಂದುನಾಣ್ಬಟ್ಟೆಯ ಗಾದೆಗೆ - ಒಂದುನಾಡಾಡಿಯಮಾತಿಗೆ, ಒಂದೊರೆ - ಒಂದುಬಣ್ಣವು, ವಿಶೇಷಂ-ಘನವು, ಅದು ಎಂತೆನೆ - ಅದೆಂತೆಂದೊಡೆ, ಆಂ - ಆನು, ನಿನ್ನತೇಜದಿಂ - ನಿನ್ನ ಪ್ರಭಾವದಿಂದ, ಪುಟ್ಟಿ - ಉದಯವಾಗಿ, ಮಗುಳ್ದು - ಮರಳಿ, ನಿನ್ನುವನೆ-ನಿನ್ನನೇ, ಮುಟ್ಟಿದಕಾರಣಂ - ಸೋಂಕಿದನಿಮಿತ್ತವಾಗಿ, ಅಂಜೆನಂಜೆಂ – ಹೆದರೆ ಹೆದರೆನು, ನೆಟ್ಟನೆ - ಚೆನ್ನಾಗಿ, ಧೀರನಯ್ಯ - ಪರಾಕ್ರಮಿಯಯ್ಯ.

**ಭಾವಾರ್ಥಬೋಧಿನಿ :** ಜಗತ್ಪತಿಯೇ, "ಲೋಕದಲ್ಲಿ" ತನ್ನಲ್ಲಿ ಹುಟ್ಟಿದಂದು ತನಗಂಜುವುದಿಲ್ಲ; ಮತ್ತು ತನಗೆ ಸೋಂಕಿದುದೂ ತನಗೆ ಭಯಪಡುವುದಿಲ್ಲ" ವೆಂಬ ನಾಣ್ನುಡಿಯುಂಟು. ಈ ನಾಣ್ನುಡಿಗಿಂತಲೂ ನನ್ನ ಮಾತು ಒಂದು ಬಣ್ಣ ಅಧಿಕ

ವಾಗಿರುವುದು. ಅದು ಹೇಗೆಂದರೆ - ನಾನು ನಿನ್ನ ಪ್ರಭಾವದಿಂದ ಹುಟ್ಟಿದವನು (ನಿನ್ನ ಅಂಶವೇ ನಾನು) ಮತ್ತು ನಿನ್ನನ್ನೇ ಮುಟ್ಟಿದವನಿರುವೆನು (ಸದಾ ಲಿಂಗಸಂಗಿಯಾಗಿರುವೆನು) ಈ ಕಾರಣದಿಂದ ನಿನಗೆ ಹೆದರದಿರುವ ಒಳ್ಳೆಯ ಪರಾಕ್ರಮಿಯಾಗಿರುವೆನು - ಎಂದರೆ - ವೀರಭಕ್ತನಾಗಿರುವೆನೆಂದು ತಾತ್ಪರ್ಯ. ೩೩

**ಚಂಪಕಮಾಲಾವೃತ್ತಂ**

ಸಲೆ ಮಮಕೃತ್ಯಹಂಕೃತಿ ವಿಕೃತ್ಯವಗಾಢವಿಮೂಢಲೌಕಿಕ
ಸ್ಥಳದೊಳಮರ್ದ್ದು ಸರ್ವವಿಷಯಂಗಳೊಳಾನೆನಗೆಂಬ ಮೋಹದಿಂ
ಚಲಿಸಿ ವೃಥಾಭಿಮಾನ ಭರಭಾರಕೆ ಬಿರ್ರನೆ ಬೀಗಿಸಾಯುವಂ
ತೆಲೆಪರಿ ರಕ್ಷಿಸಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೩೪

**ಟೀಕೆ :** ಎಲೆ ಪರಮ ಪ್ರಭುವೇ - ಎಲೆ ಜಗದೀಶ್ವರನೆ, ಸಲೆ - ಚೆನ್ನಾಗಿ, ಮಮಕೃತ್ಯಹಂಕೃತಿ ವಿಕೃತ್ಯವಗಾಢವಿಮೂಢಲೌಕಿಕಸ್ಥಳದೊಳ್ - ಮಮಕೃತಿ - ಮಮಕಾರವು, ಅಹಂ ಕೃತಿ - ಅಹಂಕಾರವು, ವಿಕೃತಿ - ವಿಕಾರವು, ಇವುಗಳಿಂದ ಅವಗಾಢ - ದೃಢವಾದ, ವಿಮೂಢ - ಅಜ್ಞಾನಸ್ವರೂಪವಾದ, ಲೌಕಿಕಸ್ಥಳದೊಳ್ - ಮಾಯಾಪ್ರಪಂಚದಲ್ಲಿ, ಅಮರ್ದ್ದು - ಪೊರ್ದುಗೆಯಾಗಿ, ಸರ್ವವಿಷಯಂಗಳೊಳ್ - ಎಲ್ಲಾ ವಿಷಯಂಗಳಲ್ಲಿ, ಆಂ - ಆನು, ಎನಗೆ - ಅವು ನನಗೆ, ಎಂಬ - ಹೀಗೆಂಬ, ಮೋಹದಿಂ - ಅಜ್ಞಾನದಿಂದ, ಚಲಿಸಿ - ವ್ಯಾಕುಲಿತನಾಗಿ, ವೃಥಾ - ವ್ಯರ್ಥವಾಗಿ, ಅಭಿಮಾನಭರಭಾರಕೆ - ಅಹಂಕಾರದ ಮಹಾಭಾರಕ್ಕೆ, ಬಿರ್ರನೆ - ಬಿಮ್ಮನೆ, ಬೀಗಿ - ಬೆರತು, ಸಾಯುವಂತೆ - ಸಾಯುವ ಹಾಂಗೆ, ಪರಿರಕ್ಷಿಸಯ್ಯ - ಚೆನ್ನಾಗಿ ರಕ್ಷಿಸಯ್ಯ.

**ಭಾವಾರ್ಥಬೋಧಿನಿ : ಪರಮಪ್ರಭುವೆ, ಮಮಕಾರ – ಅಹಂಕಾರ - ವಿಕಾರ - ಇವುಗಳಿಂದ ಗಟ್ಟಿಗೊಂಡ ಅಜ್ಞಾನದಿಂದ ಕೂಡಿದ ಲೋಕವ್ಯವಹಾರದಲ್ಲಿ ಸೇರಿಕೊಂಡು, ನಾನು ಸರ್ವವಿಷಯಗಳಲ್ಲಿಯೂ 'ನಾನು' 'ನನ್ನದೆ'ಂಬ ಮೋಹದಿಂದ ವ್ಯಾಕುಲವುಳ್ಳವನಾಗಿ, ವ್ಯರ್ಥವಾದ ಅಭಿಮಾನದ ಮಹಾಭಾರದಲ್ಲಿ ಸಿಕ್ಕಿಕೊಂಡು ಬಿರ್ರನೆ ಬೀಗಿ ಸಾಯದಂತೆ ರಕ್ಷಿಸು. ೩೪**

## ಚಂಪಕಮಾಲಾವೃತ್ತಂ

ಇವರ ವಿಶೇಷಮೇನಿದರ ದೊಡ್ಡಿತದೇನೊಳಬೊಳ್ಳೆಯಾದ ವೇ
ದ ಬಲುಹೇನಿದಕ್ಕೆ ಹೊರಹಂತೆಯಲೇನಹುದೇನು ಮಾಗವಾ
ಗದುಬಲುಕಾಡಬೇಡ ನಿಜಭಕ್ತಿಯನಿತ್ತು ಭವತ್ಪ್ರಸನ್ನತಾ
ಸದನದೊಳಿಂಬಿಡಯ್ಯ ಪರಮ ಪ್ರಭುವೇ ಹುಹದ್ದೈಪುರೀಶ್ವರಾ ೭೫

**ಟೀಕೆ :** ಭೋ ಪರಮಪ್ರಭುವೇ - ಎಲೆ ಜಗತ್ಕರ್ತನೆ, ಇದರ ಈ ಬಾಹ್ಯ ಪ್ರಪಂಚದಲ್ಲಿ, ವಿಶೇಷಮೇಂ - ಹೆಚ್ಚಿಗೆ ಏನು? ಇವರ, ದೊಡ್ಡಿತು ಅದೇಂ - ಪೆರ್ಚುಗೆ ತಾನೇನು? ಒಳಬೊಳ್ಳೆಯಾದ - ಒಳ ಪೊಳ್ಳಾದ, ವೇಷದ - ಲಾಂಛನದ, ಬಲುಹೇಂ - ಬಲ್ಮೆ ತಾನೇನು? ಇವಕ್ಕೆ ಹೊರಹಂಚೆಯುಲಿ - ಬಾಹ್ಯವೇಷದ ಬಣ್ಣದಲ್ಲಿ, ಏನಹುದು - ಏನಾಗುವುದು? ಏನುಂ - ಆವುದೂ, ಆಗದು ಆಗದು - ದೊರೆಯದು ದೊರೆಯದು, ಬಿಡು - ವಿಸರ್ಜಿಸು, ಕಾಡಬೇಡ - ಆಯಾಸಗೊಳಿಸ ಬೇಡ, ನಿಜಭಕ್ತಿಯುಂ - ಸಹಜಭಕ್ತಿಯನ್ನು, ಇತ್ತು - ಕೊಟ್ಟು, ಭವತ್ಪ್ರಸನ್ನತಾ ಸನದೊಳ್ - ಭವತ್ - ನಿನ್ನ, ಪ್ರಸನ್ನತಾ - ಅನುಗ್ರಹವೆಂಬ, ಸದನದೊಳ್ - ಮಂಟಪದಲ್ಲಿ, ಇಂಬಿಡಯ್ಯ - ಇಂಬುಗೊಳಿಸಯ್ಯ.

**ಭಾವಾರ್ಥಬೋಧಿನಿ :** ಪರಮಪ್ರಭುವೆ, ಈ ಬಾಹ್ಯಪ್ರಪಂಚದಲ್ಲಿ ಹೆಚ್ಚಾದುದೇನಿರುವುದು? ಅಪೂರ್ವವಾದುದೇನಿರುವುದು? ಇದರ ಒಳಗೆ ಪೊಳ್ಳಾಗಿರುವ ಮೇಲಿನ ವೇಷದಲ್ಲಿ ಶಕ್ತಿಯೇನಿರುವುದು? ಇದರ ಬಾಹ್ಯವೇಷದ ಬಣ್ಣದಿಂದೇನಾಗುವುದು? ಇದರಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ಇದರ ವಿಷಯವನ್ನು ಬಿಡು. ಇದರಲ್ಲಿ ನನ್ನನ್ನು ಆಯಾಸಗೊಳಿಸಬೇಡ. ಮತ್ತೇನೆಂದರೆ, ನಿನ್ನ ಸಹಜಭಕ್ತಿಯನ್ನು ಕರುಣಿಸಿ, ನಿನ್ನನುಗ್ರಹದ ಮಂಟಪದಲ್ಲಿ ನನಗೆ ಇಂಬು ಮಾಡಿ ಕೊಡು. ೭೫.

**ಚಂಪಕಮಾಲಾವೃತ್ತಂ**

ಬಹುವಿಧದೋಷ ದುಷ್ಟತಮಮಾದೊಡಮಾತ್ಮಶರೀರಮಾತ್ಮ ನಿ
ಗ್ರಹಕರಮಾಗಿ ತೋರದೆ ಗುಣಾಧಿಕಮಾಗಿಯೆ ತೋರುವಂದದಿಂ
ಸಹಜಶರೀರಮಾಗೆ ನಿನಗಕ್ಕಟ ನಿನ್ನಶರೀರ ಭಕ್ತಸಂ
ಸ್ಪೃಹ ನಿಜಭಕ್ತಕಾಯ ಪರಮಪ್ರಭುವೇ ಮಹದೈಪುರೀಶ್ವರಾ ೭೬

**ಟೀಕೆ :** ನಿಜಭಕ್ತಕಾಯ - ಭಕ್ತರ ದೇಹವೇ ತನ್ನ ದೇಹವಾಗುಳ್ಳಾತನೆ, ಆತ್ಮಶರೀರಂ - ಎನ್ನ ಶರೀರವು, ಬಹುವಿಧದೋಷದುಷ್ಟತಮಮಾದೊಡಂ - ಬಹುವಿಧ-ಹಲವು ತೆರನಾದ, ದೋಷ - ದೋಷಂಗಳಿಂದ, ದುಷ್ಟತಮಮಾದೊಡಂ- ಅತ್ಯಂತದುಷ್ಟವಾದೊಡೆಯೂ,ಆತ್ಮನಿಗ್ರಹಕರಮಾಗಿ-ತನಗೆ ನಿಗ್ರಹ ಮಾಡುವುವಾಗಿ, ತೋರದೆ - ಕಾಣಿಸದೆ, ಗುಣಾಧಿಕಮಾಗಿಯೆ - ಸದ್ಗುಣಗಳಿಂದಧಿಕವಾಗಿಯೇ. ತೋರುವಂದದೆ - ಕಾಣಿಸುವ ಹಾಂಗೆ, ಅಕ್ಕಟಾ - ಅಯ್ಯೋ, ನಿನಗೆ – ಎಲೆ ಶಿವನೆ ನಿನಗೆ, ಸಹಜಶರೀರಮಾಗೆ - ಸಹಜವಾದ ಶರೀರವಾಗಲಾಗಿ, ನಿನ್ನ ಶರೀರ - ನಿನ್ನ ದೇಹವು, ಭಕ್ತಸಂಸ್ಪೃಹ - ಭಕ್ತರಿಚ್ಛೆಯನುಳ್ಳುದು, (ನಿನ್ನ ದೇಹವೇ ಭಕ್ತರ ದೇಹವೆಂಬುದರ್ಥಂ).

**ಭಾವಾರ್ಥಬೋಧಿನಿ :** ಭಕ್ತದೇಹವೇ ನಿಜದೇಹವಾಗುಳ್ಳ ಪರಮಾತ್ಮನೆ, ಲೋಕದವರಲ್ಲಿ ತನ್ನ ಶರೀರವು ಬಹುದೋಷಗಳಿಂದ ದುಷ್ಟತಮವಾಗಿದ್ದರೂ ತನಗೆ ಆ ಶರೀರವು ನಿಗ್ರಹಯೋಗ್ಯವೆಂದು ತೋರದೆ, ಸದ್ಗುಣಗಳಿಂದಧಿಕವಾಗಿರುವಂತೆ ತೋರುವುದಲ್ಲವೆ ? ಅದರಂತೆ ಭಕ್ತದೇಹವೇ ನಿನ್ನ ದೇಹವಾಗಿರುವುದರಿಂದ ಆ ನಿನ್ನ ದೇಹವು ಹೇಗಿದ್ದರೂ ಭಕ್ತನಿಚ್ಛೆಯುಳ್ಳುದಾಗಿರುವುದು. ಎಂದರೆ ಭಕ್ತರಿಚ್ಛೆಯಂತೆ ನೀನಿರ್ದು ಅವರನ್ನನುಗ್ರಹಿಸಬೇಕೆಂದು ತಾತ್ಪರ್ಯ. ೭೬

**ಚಂಪಕಮಾಲಾವೃತ್ತಂ**

ಹೊರಗೊಳಗೆನ್ನದೆನ್ನ ಕರಣಂಗಳೊಳೆಲ್ಲಿಯುಮಿರ್ಪನಿನ್ನನಾ
ನರಿವೊಡುಪಾಯಮಾವುದು ಮನಂ ಮನನಂ ಮನನೀಯಮೆಂಬ ಮೂ
ರರಮಯ ಮೈದೆ ನಿನ್ನಮಯಮಾಮಯಮೆನ್ನಮಯಂ ಪರಸ್ಪರಂ
ತೆರಪಿನಿತಿಲ್ಲ ದೇವ ಪರಮಪ್ರಭುವೇ ಮಹದೈಪುರೀಶ್ವರಾ ೭೭

**ಟೀಕೆ :** ದೇವ- ಎಲೆ ಸ್ವಯಂಪ್ರಕಾಶರೂಪನೆ, ಹೊರಗು ಒಳಗು ಎನ್ನದೆ- ಬಾಹ್ಯಾಂತರವೆನ್ನದೆ, ಎನ್ನ ಕರಣಂಗಳೊಳ್ ಎಲ್ಲಿಯುಂ – ಎನ್ನ ಬುದ್ಧ್ಯಾದಿ ಕರಣಂಗಳೊಳೆಲ್ಲಿಯೂ, ಇರ್ಪ - ಪರಿಪೂರ್ಣವಾಗಿರ್ಪ, ನಿನ್ನಂ - ನಿನ್ನನು, ಅಂ - ಅರಿವೊಡೆ - ನಾನು ತಿಳಿವೊಡೆ, ಉಪಾಯವಾವುದು - ಸಾಧನವಾವುದು, ಮನಂ - ಮನವು, ಮನನಂ - ನೆನೆವುದು, ಮನನೀಯಂ - ನೆನೆಯಲ್ಪಕ್ಕ ವಸ್ತುವು, ಎಂಬ - ಹೀಗೆಂಬ, ಮೂರರಮಯಂ - ತ್ರಿಪುಟಸ್ವರೂಪವು, ಐದೆ - ಚೆನ್ನಾಗಿ, ನಿನ್ನ ಮಯಂ - ನಿನ್ನ ಸ್ವರೂಪವು, ಆ ಮಯಂ-ಆ ಸ್ವರೂಪವೇ, ಎನ್ನಮಯಂ- ಎನ್ನ ಸ್ವರೂಪವು, ಪರಸ್ಪರಂ - ಅನ್ಯೋನ್ಯವಾಗಿ, ತೆರಹು - ಅವಕಾಶವು, ಇನಿತಿಲ್ಲ- ಕಿಂಚಿತ್ತೂ ಇಲ್ಲ.

**ಭಾವಾರ್ಥಬೋಧಿನಿ :** ಸ್ವಯಂಪ್ರಕಾಶರೂಪನಾದ ಶಿವನೆ, ನನ್ನ ಬುದ್ಧ್ಯಾದಿಕರಣಂಗಳೆಲ್ಲವುಗಳಲ್ಲಿಯೂ ಹೊರಗೂ ಒಳಗೂ ವ್ಯಾಪಿಸಿ, ಪರಿಪೂರ್ಣ ನಾಗಿರುವ ನಿನ್ನನ್ನು ಅರಿವುದಕ್ಕೆ ಸಾಧನವಾವುದಿರುವುದು. (ಆವುದೂ ಇಲ್ಲ) ಏಕೆಂದರೆ ಮನವೂ ಮನದಿಂದ ನೆನೆವುದೂ ನೆನೆಯಲ್ಪಕ್ಕ ವಸ್ತುವು ಎಂಬ ತ್ರಿಪುಟ ರೂಪವಾದ ಈ ಮೂರ ಸ್ವರೂಪವೂ ಸರಿಯಾಗಿ ನಿನ್ನ ಸ್ವರೂಪವಾಗಿರುವುದು. ಆ ನಿನ್ನ ಸ್ವರೂಪವೇ ನನ್ನ ಸ್ವರೂಪವಾಗಿರುವುದು. ಹೀಗೆ ಪರಸ್ಪರವಾಗಿ ಕಿಂಚಿ ತ್ತಾದರೂ ಬಿಡುವು ಇಲ್ಲದಂತಿರುವುದು. (ಶಿವಭಕ್ತನೂ ಶಿವಸ್ವರೂಪನಾಗಿರುವ ನೆಂದು ತಾತ್ಪರ್ಯ.) ೩೭

**ಅವತಾರಿಕೆ :** ಇನ್ನು ಶಿವಾನುಗ್ರಹವೇ ಭಕ್ತಿಗೆ ಕಾರಣವೆಂದು ಪೇಳು ತ್ತಿರ್ದಪಂ.

**ಚಂಪಕಮಾಲಾವೃತ್ತಂ**

ಅರಿದಪೆನೆಂಬವಂಗರಿಯಬಾರದು ನಿನ್ನ ನಿಜಪ್ರಯತ್ನದಿಂ
ದರಿದಪೆನೆನ್ನದಂ ಗರಿಯಬರ್ಪುದು ನೀಂ ಕೃಪೆ ಮಾಡೆ ಚೋದ್ಯಮೆ
ನರಸುಪಪಂಗೆ ಸಿಲ್ಕದ ನಿಧಾನಮಯತ್ನಪರಂಗೆ ಭಾಗ್ಯದಿಂ
ದರಸದೆ ಸಿಲ್ಕುವಂತೆ ಪರಮಪ್ರಭುವೇ ಮಹದೈವುರೀಶ್ವರಾ ೩೮

**ಟೀಕೆ :** ನಿನ್ನನಿಜ - ನಿನ್ನಸ್ವರೂಪವು, ಅರಿದಪೆನೆಂಬವಂಗೆ - ತಿಳಿದಪೆನೆಂಬಾತಂಗೆ, ಅರಿಯಬಾರದು - ತಿಳಿಯಬಾರದು, ಪ್ರಯತ್ನದಿಂದೆ - ಉಪಾಯದಿಂದ, ಅರಿದಪೆಂಎನ್ನದಂಗೆ - ತಿಳಿದಪೆನು ಎನ್ನದಾತಂಗೆ, ನೀಂ ಕೃಪೆಮಾಡಿ - ನೀನು ಕರುಣಿಸಲಾಗಿ, ಅರಿಯಬರ್ಪುದು - ತಿಳಿಯಬರುವುದು, ಚೋದ್ಯಮೆ - ಅಚ್ಚರಿಯೆ? ಅಲ್ಲ. ಅದೆಂತೆಂದೊಡೆ - ಅರಸುವವಂಗೆ - ಬೆದಕುತ್ತಿರ್ದಾತಂಗೆ, ಸಿಲ್ಕದ - ಕಾಣಿಸದ, ನಿಧಾನಂ - ದ್ರವ್ಯವು, ಅಯತ್ನಪರಂಗೆ - ಯತ್ನಮಂ ಮಾಡದಾತಂಗೆ, ಭಾಗ್ಯದಿಂದೆ - ಆತನ ಅದೃಷ್ಟದಿಂದ, ಅರಸದೆ - ಬೆದಕದೆ, ಸಿಲ್ಕುವಂತೆ - ನಿಧಾನಂ ಕೈಸೇರುವಹಾಂಗೆ.

**ಭಾವಾರ್ಥಬೋಧಿನಿ :** ಪರಮಶಿವನೆ, ಬಹುಯತ್ನದಿಂದ ನಿಧಿಯನ್ನು ಹುಡುಕುವವನಿಗೆ ಅದು ದೊರಕದಿರ್ದು, ಯತ್ನಮಾಡಿ ಹುಡುಕದಿರುವವಂಗೆ ಅವನ ಅದೃಷ್ಟವಿಶೇಷದಿಂದ ಆ ನಿಧಿಯು ದೊರಕುವದು. ಇದರಂತೆ ನಿನ್ನ ಸ್ವರೂಪವನ್ನು ತಿಳಿದುಕೊಳ್ಳಬೇಕೆಂಬುವವನಿಗೆ ತಿಳಿಯಬಾರದು. ಇನ್ನು ತಿಳಿದುಕೊಳ್ಳುವ ಪ್ರಯತ್ನವಿಲ್ಲದವನಿಗಾದರೂ ನೀನು ಕೃಪೆಮಾಡಿದರೆ ನಿನ್ನ ಸ್ವರೂಪವು ತಿಳಿಯಲಾಗುವುದು. (ಶಿವಸಾಕ್ಷಾತ್ಕಾರಕ್ಕೆ ಶಿವಾನುಗ್ರಹವೇ ಮುಖ್ಯವೆಂದು ಭಾವವು) ೩೮

**ಚಂಪಕಮಾಲಾವೃತ್ತಂ**

ಬಳಸಿಯು ಮುಂದು ಮುಟ್ಟು ಮಭಿಮಾನಿಸಿಯುಂ ವಿಷಯಂಗಳೊಳ್ಸಮು
ಜ್ಜ್ವಳಿತಭವತ್ಪ್ರಸಾದ ಪರಿಪೂರ್ಣನಿರರ್ಗಳಭಕ್ತಿಯೋಗಸಂ
ಮಿಳಿತಶುಭಾಶುಭದ್ವಿವಿಧಕರ್ಮಸುನಿರ್ಮಳಚೇಷ್ಟನೊಪ್ಪುವಂ
ಪ್ರಳಯವಿದೂರನಾಗಿ ಪರಮಪ್ರಭುವೇ ಮಹದೈಪುರೀಶ್ವರಾ ೩೯

**ಟೀಕೆ :** ಸಮುಜ್ಜ್ವಳಿತ......ಚೇಷ್ಟಂ – ಸಮುಜ್ಜ್ವಳಿತ - ಬೆಳಗುತ್ತಿರ್ಪ, ಭವತ್ಪ್ರಸಾದ - ನಿನ್ನನುಗ್ರಹದಿಂ, ಪರಿಪೂರ್ಣ - ತುಂಬಲ್ಪಡೆದ, ನಿರರ್ಗಳ - ಎಡೆತಡೆಯಿಲ್ಲದ, ಭಕ್ತಿಯೋಗ - ಭಕ್ತಿಯೋಗದೊಡನೆ, ಸಂಮಿಳಿತ - ಕೂಡಿದಂಥ, ಶುಭಾಶುಭ - ಪುಣ್ಯಪಾಪವೆಂಬ, ದ್ವಿವಿಧ - ಎರಡುತೆರನಾದ, ಕರ್ಮ - ಕರ್ಮದಲ್ಲಿ,

ಸುನಿರ್ಮಳ - ಅತ್ಯಂತ ಶುದ್ಧವಾದ, ಚೇಷ್ಟಂ - ವ್ಯಾಪಾರವುಳ್ಳಾತನು, ವಿಷಯಂಗಳೊಳ್ - ಶಬ್ದಾದಿ ವಿಷಯಂಗಳಲ್ಲಿ, ಬಳಸಿಯುಂ - ಸಂಚರಿಸಿಯೂ, ಉಂಡು - ಭೋಗಿಸಿ, ಉಟ್ಟು-ಹೊದೆದು, ಅಭಿಮಾನಿಸಿಯುಂ-ಎನ್ನದೆಂದುಮಮಕರಿಸಿಯೂ, ಪ್ರಳಯವಿದೂರನಾಗಿ - ಕೇಡಿಲ್ಲದವನಾಗಿ, ಒಪ್ಪುವಂ - ವಿರಾಜಿಸುವನು.

**ಭಾವಾರ್ಥಬೋಧಿನಿ :** ಪರಶಿವನೆ, ನಿನ್ನ ಸಮುಜ್ಜ್ವಲಿತಾನುಗ್ರಹದಿಂದ ತುಂಬಿರುವುದರಿಂದ ಯಾವುದೊಂದು ತಡೆಯಿಲ್ಲದ ಶಿವಭಕ್ತಿಯೋಗದಲ್ಲಿರುವವನಾಗಿ ಶುಭಾಶುಭಕರ್ಮಲೇಪವಾಗದ ಅತ್ಯಂತ ಪವಿತ್ರ ವ್ಯವಹಾರವುಳ್ಳವನಾದ ಶರಣನು ವಿಷಯಗಳಲ್ಲಿ ಸುಳಿದಾಡಿ, ಉಂಡು, ಉಟ್ಟು ಇದೆಲ್ಲವೂ ನನ್ನದೆಂಬ ಮಮಕಾರವುಳ್ಳವನಾದರೂ ಅದರಿಂದ ಕೇಡಿಲ್ಲದವನಾಗಿ ವಿರಾಜಿಸುವನು. ಎಂದರೆ-ಶಿವಾನುಗ್ರಹವನ್ನು ಪಡೆದ ಶರಣನ ಭೋಗವು ಲಿಂಗಭೋಗೋಪಭೋಗವಾಗಿರುವದರಿಂದ ಅಂತಹ ಭೋಗವು ನನ್ನದೆಂದು ಅಭಿಮಾನಿಸಿದರೂ ಅದರಿಂದ ಹಾನಿಯಿಲ್ಲವೆಂದು ತಾತ್ಪರ್ಯ. ೩೯

## ಉತ್ಪಲಮಾಲಾವೃತ್ತಂ

ತುಂಬಿಯ ಶಕ್ತಿಪಾತಗುಣದಿಂ ಪುಳು ತುಂಬಿಯದಾಯ್ತೊ ತನ್ನ ಭಾ
ವಂಬಲಿದಾಯ್ತೊ ತುಂಬಿ ಪುಳುವಂ ಪಿಡಿದೊಯ್ದುದೋ ತಾನೆಪೋದುದೋ
ಬೆಂಬಳಗೊಂಡು ಪೇಳ್ವೊಡೆಯನುಗ್ರಹ ಶಕ್ತಿಯೆ ಮುಕ್ತಿಕಾರಣಂ
ನಂಬುಗೆಯೆಂಬುದೇನು ಪರಮಪ್ರಭುವೇ ಮಹದೈಪುರೀಶ್ವರಾ ೪೦

**ಟೀಕೆ :** ಪುಳು - ಕೀಟವು, ತುಂಬಿಯ - ಭ್ರಮರದ, ಶಕ್ತಿಪಾತಗುಣದಿಂ - ಸಾಮರ್ಥ್ಯವನಿಲಿಸುವ ಗುಣದಿಂದ, ತುಂಬಿ ಅದಾಯ್ತೊ - ತುಂಬಿಯೇ - ತಾನಾದುದೋ ? ತನ್ನ ಭಾವಂ - ಆ ಪುಳುವು ತನ್ನ ಭಾವವೇ, ಬಲಿದು ಆಯ್ತೊ-ಬಲಿದು ಭ್ರಮರವಾದುದೋ? ತುಂಬಿ - ಭ್ರಮರವು, ಪುಳುವಂ - ಹುಳುವನ್ನು, ಪಿಡಿದು ಒಯ್ದುದೋ - ಪಿಡಿದುಕೊಂಡು ಹೋದುದೋ ? ತಾನೆ ಪೋದುದೋ - ಪುಳು ತಾನೇ ಪೋಯಿತೋ, ಬೆಂಬಳಗೊಂಡು - ತರಂಗೊಂಡು, ಪೇಳ್ವೊಡೆ - ಹೇಳುವೊಡೆ, ಅನುಗ್ರಹಶಕ್ತಿಯೆ - ಎಲೆ ಶಿವನೆ ನಿನ್ನನುಗ್ರಹ ಸಾಮರ್ಥ್ಯವೇ, ಮುಕ್ತಿ

ಕಾರಣಂ - ಮೋಕ್ಷಕ್ಕೆ ಕಾರಣವು, ನಂಬುಗೆಯೆಂಬುದು - ಎನ್ನ ವಿಶ್ವಾಸವೆಂಬುದು ಏನು - ಆವುದು ?

**ಭಾವಾರ್ಥಬೋಧಿನಿ :** ಹುಳುವಿನಲ್ಲಿ ತುಂಬಿಯು ತನ್ನ ಶಕ್ತಿಯನ್ನು ನಿಲ್ಲಿಸುವ ಗುಣದಿಂದ ಆ ಹುಳು ತುಂಬಿಯಾದುದೋ ? ಇಲ್ಲವೆ ಹುಳು ತನ್ನಲ್ಲಿ ತುಂಬಿಯಾಗಬೇಕೆಂಬ ಭಾವವನ್ನು ಬಲಿಸಿಕೊಂಡು ತುಂಬಿಯಾದುದೊ ? ತುಂಬಿಯು ತಾನಾಗಿ ಬಂದು, ಹುಳುವನ್ನು ಹಿಡಿದೊಯ್ದುದೋ ? ಅಥವಾ ಹುಳುವೇ ಬೆಂಗೊಂಡು, ತುಂಬಿಯಿದ್ದಲ್ಲಿಗೆ ಪೋದುದೋ ? (ಈ ವಿಚಾರವನ್ನು ಹೇಳಬೇಕೆಂದರೆ ತುಂಬಿಯು ಶಕ್ತಿಪಾತಗುಣವೇ ಹುಳುವು ಭ್ರಮರವಾಗಲಿಕ್ಕೆ ಕಾರಣವೆಂದು ಪ್ರಕೃತದಲ್ಲಿ ಮಾಯಿದೇವರ ಅಭಿಪ್ರಾಯ) ಇದರಂತೆ ಪರಶಿವನೇ ನಿನ್ನ ಅನುಗ್ರಹಶಕ್ತಿಯೇ ಮುಕ್ತಿಪ್ರದವಾಗಬೇಕಲ್ಲದೆ ನನ್ನ ನಂಬುಗೆಯಿಂದ ಏನೂ ಆಗುವಂತಿಲ್ಲ. (ನಂಬುಗೆ ಬೇಕು; ಆದರೆ ನಂಬುಗೆಯೊಂದರಿಂದಲೇ ಮುಕ್ತಿ ಸಿದ್ಧಿಸುವುದಿಲ್ಲ. ನಂಬಿದವನಿಗೆ ಶಿವಾನುಗ್ರಹವಾಗಲಾಗಿ ಅದರಿಂದ ಮುಕ್ತಿಯು ಸುಲಭಸಾಧ್ಯವೆಂದು ತಾತ್ಪರ್ಯ.) ೪೦

**ಚಂಪಕಮಾಲಾವೃತ್ತಂ**

ಪರುಸದ ಸಂಗಮಂ ಪಸಿಯ ಕಬ್ಬುನಮೇಂ ನೆರೆನಂಬಿ ಕೂಡೆಸಂ
ಸ್ಮರಣೆಯ ನೆಯ್ದಿತೇ ಬಯಲಬೋಧೆಯ ಬಾಧೆಯದೇಕೆ ದೇವನೀಂ
ಕರುಣಿಸಿ ನೋಡದಿರ್ದೊಡೊಣನಂಬುಗೆಗಿಂಬುಗೆಯೆಂಬುವಾವುದು
ತ್ತರಪದಸಿದ್ಧಿಗಯ್ಯ ಪರಮಪ್ರಭುವೇ ಮಹದೈವುರೀಶ್ವರಾ ೪೧

**ಟೀಕೆ :** ಭೋದೇವ - ಎಲೆಸ್ವಯಂ ಪ್ರಕಾಶನೆ. ಪರುಸದ - ಸಿದ್ಧರಸದ, ಸಂಗಮಂ - ಸಂಪರ್ಕವನ್ನು, ಪಸಿಯುಕಬ್ಬುನಂ - ಅಚ್ಚಲೋಹವು, ನೆರೆನಂಬಿ-ಚೆನ್ನಾಗಿನಂಬಿ, ಕೂಡೆ - ಕೂಡಬೇಕೆಂದು, ಸಂಸ್ಮರಣೆಯುಂ - ನೆನಹನ್ನು, ಎಯ್ದಿತೇ - ಹೊಂದಿತೇನು ? ನೀಂ ಕರುಣಿಸಿ - ದಯೆಗೈದು, ನೋಡದಿರ್ದೊಡೆ-ನಿರೀಕ್ಷಿಸದಿರ್ದೊಡೆ, ಬಯಲಬೋಧೆಯ - ವ್ಯರ್ಥವಾದ ಜ್ಞಾನದ, ಬಾಧೆಯುದು-ಆ ಆಯಾಸವು, ಏಕೆ - ಏತಕ್ಕೆ ? ಉತ್ತರಪದಸಿದ್ಧಿಗೆ - ಮೋಕ್ಷಪದಸಿದ್ಧಿಗೆ,

ಒಣನಂಬುಗೆಗಿಂಬುಗೆಯೆಂಬುದು - ಬರಿಯ ವಿಶ್ವಾಸವೆಂಬುದು, ಆವುದು - ಅದರಿಂದೇನು ಪ್ರಯೋಜನವು.

**ಭಾವಾರ್ಥಬೋಧಿನಿ :** ಸ್ವಯಂಪ್ರಕಾಶಸ್ವರೂಪನಾದ ಶಿವನೆ, ಅಚ್ಚ-ಲೋಹವು ತಾನು ಸುವರ್ಣವಾಗಬೇಕೆಂದು ಸಿದ್ಧರಸದ ಸಂಗವನ್ನು ಚೆನ್ನಾಗಿನಂಬಿ, ಆ ಲೋಹದೊಡನೆ ಕೂಡಬೇಕೆಂದು ಅದರ ಸ್ಮರಣೆಮಾಡುತ್ತಿದ್ದಿತೇನು ? ಇಲ್ಲ. ಸ್ವಾಮಿ, ನೀನು ಕೃಪೆಮಾಡಿ ನೋಡದಿದ್ದರೆ ಬರಿಯ ಬೋಧೆಯ ಆಯಾಸವೇನು ಪ್ರಯೋಜನವಾಗುವುದು ? ನೀನು ಕೃಪೆಮಾಡದಿದ್ದರೆ ಮೋಕ್ಷಸಿದ್ಧಿಗೆ ಬರಿಯ ನಂಬುಗೆಗಿಂಬುಗೆಗಳಿಂದ ಏನಾಗುವುದು ? ( ಶಿವಾನುಗ್ರಹವಿಲ್ಲದೆ ಜ್ಞಾನಬೋಧೆಯೂ, ವಿಸ್ವಾಸವೂ ಫಲಕಾರಿಗಳಾಗಲಾರವೆಂದು ತಾತ್ಪರ್ಯ.) ೪೧

**ಚಂಪಕಮಾಲಾವೃತ್ತಂ**

ಕರುಣಮೆ ಕಾರಣಂ ಬಯಲಮಾತಿನ ಮಾಲೆಯ ಗೋಳುಮಂಡೆಯಂ
ತಿರಲರಿವೇತ ಕಾಚರಣೆಯೇತಕೆ ನಂಬುಗೆಯೇತಕಯ್ಯನಿ
ನ್ನುರುತರಮಪ್ಪ ಸತ್ಕೃಪೆಯೆ ಸತ್ಯಮಭೀಷ್ಟಪದಾರ್ಥಸಿದ್ಧಿಯಂ
ಪರಿಪರಿದೆಯ್ದುವಂಗೆ ಪರಮಪ್ರಭುವೇ ಮಹದೈಪುರೀಶ್ವರಾ ೪೨

**ಟೀಕೆ :** ಅಭೀಷ್ಟಪದಾರ್ಥಸಿದ್ಧಿಯಂ - ಅಭೀಷ್ಟ - ಇಷ್ಟವಾದ, ಪದಾರ್ಥ-ಮೋಕ್ಷದ, ಸಿದ್ಧಿಯಂ - ಸಿದ್ಧಿಯನ್ನು, ಪರಿಪರಿದುಎಯ್ದುವಂಗೆ - ಶೀಘ್ರದಲ್ಲಿ ಎಯ್ದುವಾತಂಗೆ, ಅರಿವು - ಜ್ಞಾನವು, ಏತಕೆ - ಏನು ಪ್ರಯೋಜನವು ? ಆಚರಣೆ-ಸನ್ಮಾರ್ಗವು, ಏತಕೆ - ಏನು ಪ್ರಯೋಜನವು ? ನಂಬುಗೆ - ವಿಶ್ವಾಸವು, ಏಕೆ - ಏನು ಪ್ರಯೋಜನವು ? ಬಯಲಮಾತಿನಮಾಲೆಯ - ವ್ಯರ್ಥವಾದ ವಾಗ್ಜಾಲದ, ಗೋಳುಮಂಡೆ - ತಲೆಯ ಬಡಿದುಕೊಂಬುದು, ಅಂತಿರಲಿ - ಹಾಂಗಿರಲಿ, ನಿನ್ನ-ಎಲೆ ಶಿವನೆ ನಿನ್ನ ಸಂಬಂಧವಾದ, ಉರುತರಮಪ್ಪ - ಶ್ರೇಷ್ಠವಾದ, ಸತ್ಕೃಪೆ - ಒಳ್ಳೆಯ ದಯೆಯೇ, ಸತ್ಯಂ - ಯಥಾರ್ಥವು, ಕರುಣಮೆ - ನಿನ್ನ ಕೃಪೆಯೇ, ಕಾರಣಂ - ನಿಮಿತ್ತವು.

**ಭಾವಾರ್ಥಬೋಧಿನಿ :** ದೇವನೆ, ತನಗಭಿಮತವಾದ ಮೋಕ್ಷದ ಸಿದ್ಧಿಯನ್ನು ಬೇಗನೆ ಪಡೆಯಬೇಕಾಗಿದ್ದರೆ, ಬರಿಯ ಜ್ಞಾನಕ್ರಿಯಾವಿಶ್ವಾಸಗಳಿಂದ ಪ್ರಯೋಜನವೇನು ? ಇವುಗಳಿಂದ ಪ್ರಯೋಜನವಿರುವುದೆಂದು ವ್ಯರ್ಥವಾದ ಮಾತಿನ ಮಾಲೆಯಿಂದ ತಲೆಬಡಿದುಕೊಳ್ಳುವುದು ಹಾಗಿರಲಿ. ಶಿವನೆ, ನಿನ್ನ ಶ್ರೇಷ್ಠವಾದ ಕೃಪೆಯೇ ಯಥಾರ್ಥವಾದುದು. ಮತ್ತು ನಿನ್ನ ಆ ಕೃಪೆಯೇ ಮೋಕ್ಷಕ್ಕೆ ಮುಖ್ಯ ಕಾರಣವಾಗಿರುವುದು. (ಜ್ಞಾನಾದಿಸಾಧನಗಳಿಗಿಂತಲೂ ಶಿವಾನುಗ್ರಹವೇ ಮೋಕ್ಷಕ್ಕೆ ಮುಖ್ಯ ಸಾಧನವೆಂದು ತಾತ್ಪರ್ಯ.)

**ಅವತಾರಿಕೆ :** ಜನನಮರಣಂಗಳನ್ನೂ ತನುತ್ರಯವಾಸನೆಯನ್ನೂ ನಾಶಮಾಡೆಂದು ಪ್ರಾರ್ಥಿಸುತ್ತಿರ್ದಪಂ.

**ಚಂಪಕಮಾಲಾವೃತ್ತಂ**

ಪುರಮೆ ತನುತ್ರಯಸ್ಥಿತಿ ಮನೋಭವನೇ ಜನನಂ ಕೃತಾಂತನೇ
ಮರಣಮಿದೇಂ ಸ್ಮರತ್ರಿಪುರಕಾಲವಿನಾಶಕನೆಂದು ನಿನ್ನನೆಂ
ಬರು ಜನನಸ್ಥಿತಿ ಪ್ರಳಯರೂಪಿನೊಳಿರ್ಪರನೇಕೆ ನೋಡದಾ
ರ್ಯರು ಮತಿವಂತರಾಗಿ ಪರಮಪ್ರಭುವೇ ಮಹದ್ವೈಪುರೀಶ್ವರಾ ೪೨

**ಟೀಕೆ :** ಆರ್ಯರು - ಹಿರಿಯರುಗಳು, ಮತಿವಂತರಾಗಿ - ಬುದ್ಧಿವಂತರಾಗಿ, ಜನನಸ್ಥಿತಿಪ್ರಳಯರೂಪಿನೊಳ್ - ಉತ್ಪತ್ತಿಸ್ಥಿತಿಲಯರೂಪಿನಲ್ಲಿ, ಇರ್ಪರಂ- ಇರ್ಪವರನ್ನು, ನೋಡದೆ - ವಿಚಾರಿಸದೆ, ನಿನ್ನಂ - ನಿನ್ನನ್ನು, ಸ್ಮರತ್ರಿಪುರಕಾಲವಿನಾಶಕನೆಂದು - ಸ್ಮರ - ಮನ್ಮಥನನ್ನು, ತ್ರಿಪುರ - ಮುಪ್ಪುರವನ್ನು, ಕಾಲ - ಯಮನನ್ನು, ವಿನಾಶಕನೆಂದು - ಸಂಹರಿಸಿದವನೆಂದು, ಏಕೆಯೆಂಬರು - ಏಕೆ ಪೇಳ್ವರು ? ಇದೇಂ - ಇದೇನು ? ಪುರಮೆ - ಮುಪ್ಪುರವೇ, ತನುತ್ರಯಸ್ಥಿತಿ - ತನುಮೂರರ ಸ್ಥಿತಿಯು, ಮನೋಭವನೇ - ಮನ್ಮಥನೇ, ಜನನಂ-ಉತ್ಪತ್ತಿಯು, ಕೃತಾಂತನೇ - ಯಮನೇ, ಮರಣಂ - ಮೃತಿಯು, ಇವಂ ಸಂಹರಿಸಿದುದೇ ಕಾಲಕಾಮಪುರಂಗಳಂ ಸಂಹರಿಸಿದುದೆಂಬುದರ್ಥವು.

**ಭಾವಾರ್ಥಬೋಧಿನಿ :** ಹಿರಿಯರು ಬುದ್ಧಿವಂತರಾಗಿ, ಜೀವಿಗಳ ಉತ್ಪತ್ತಿ-ಸ್ಥಿತಿ-ಲಯ-ಇವುಗಳ ವಿಚಾರ ಮಾಡದೆ, ಶಿವನೆ, ಸ್ಮರನನ್ನೂ, ತ್ರಿಪುರಗಳನ್ನೂ,

ಯಮನನ್ನೂ ಸಂಹರಿಸಿದವನೆಂದು ನಿನಗೆ ಏಕೆ ಹೇಳುವರು ? ಸ್ಥೂಲಾದಿತನುತ್ರಯದ ಇರುವಿಕೆಯೇ ತ್ರಿಪುರಗಳು. ಉತ್ಪತ್ತಿಯೇ ಕಾಮನು. ಮರಣವೇ ಯಮನು. ಈ ರೀತಿಯಾದ ಉತ್ಪತ್ತಿ-ಸ್ಥಿತಿ-ಲಯ-ಇವುಗಳನ್ನು ಸಂಹರಿಸುವುದೇ ಕಾಮನನ್ನೂ, ತ್ರಿಪುರಗಳನ್ನೂ, ಯಮನನ್ನೂ, ಸಂಹರಿಸುವುದಾಗಿರುವುದು. ( ಜನನಾದಿಗಳಿರುವವರೆಗೂ ಶಿವನು ಕಾಮಾದಿಸಂಹರನಾಗುವುದಿಲ್ಲವೆಂದು ತಾತ್ಪರ್ಯ ) ೮೩

**ಚಂಪಕಮಾಲಾವೃತ್ತಂ**

ಜನನಮೆ ತಾಂ ಸ್ಮರಂ ಸ್ಥಿತಿಯೆ ತಾಂ ತ್ರಿಪುರಂ ಮೃತಿತಾನೆ ಕಾಲನೀ
ಜನನ ಮೃತಿಸ್ಥಿತಿತ್ರಯವಿನಾಶನಮೇ ಪುರಕಾಲಕಾಮ ಸಂ
ಹನನಮಿದೇದಿಟಂ ಪುಸಿ ಬಳಿಕ್ಕಿನ ಕಾಮಪುರಾಂತಕಾರಿಯೆಂ
ದೆನಿಸುವ ನಿನ್ನ ಮಾಯೆ ಪರಮಪ್ರಭುವೇ ಮಹದ್ವೈಪುರೀಶ್ವರಾ ೮೪

**ಟೀಕೆ** : ಜನನಮೆ ತಾಂ - ಉತ್ಪತ್ತಿಯೆಂಬುದು ತಾನೇ, ಸ್ಮರಂ - ಮನ್ಮಥನು, ಸ್ಥಿತಿಯೆ ತಾಂ – ಸ್ಥಿತಿತಾನೇ, ತ್ರಿಪುರಂ ಮುಪ್ಪುರವು, ಮೃತಿತಾನೆ–ಮರಣ ತಾನೆ, ಕಾಲಂ - ಯಮನು, ಈ ಜನನಮೃತಿ ಸ್ಥಿತಿತ್ರಯ ವಿನಾಶಮೇ-ಈ ಉತ್ಪತ್ತಿ ಸ್ಥಿತಿಲಯ ಮೂರನ್ನು ಸಂಹರಿಸಿದುದೇ, ಪುರಕಾಲಕಾಮ ಸಂಹನನಂ-ತ್ರಿಪುರಕಾಲ ಕಾಮ ಸಂಹಾರವು, ಇದೇ ನಿಶ್ಚಯ. ಬಳಿಕ್ಕಿನ - ಬೇರೆಯಾದ, ಕಾಮಪುರಾಂತಕಾರಿ ಯೆಂದೆನಿಸುವ - ಸ್ಮರ ತ್ರಿಪುರ ಕಾಲಾರಿಯೆಂದೆನಿಸುವ, ನಿನ್ನಮಾಯೆ - ಬಾಹ್ಯದಲ್ಲಿ ತೋರುವ ನಿನ್ನ ಕಪಟವು, ಪುಸಿ - ನಿಶ್ಚಯವಲ್ಲ.

**ಭಾವಾರ್ಥಬೋಧಿನಿ** : ಸ್ವಾಮಿ, ಜನನವೇ ಕಾಮನು, ಶರೀರತ್ರಯದ ಇರುವಿಕೆಯೇ ತ್ರಿಪುರಗಳು, ಮರಣವೇ ಯಮನು. ಈ ಮೂರರ ನಾಶವೇ ಕಾಮ ತ್ರಿಪುರ ಕಾಲರ ನಾಶವು; ಇದೇ ನಿಜವು. ಇದನ್ನು ಬಿಟ್ಟು ಬೇರೆಯಾದ ತ್ರಿಪುರ ಕಾಮಕಾಲರನ್ನು ಸಂಹರಿಸಿರುವೆನೆಂದು ಕರೆಯಿಸಿಕೊಳ್ಳುವುದು ನಿನ್ನ ಬಾಹ್ಯಕಪಟ ವಾಗಿರುವುದು; ಇದು ಸುಳ್ಳು. ೮೪

**ಚಂಪಕಮಾಲಾವೃತ್ತಂ**

ಮನದೊಳೆ ಕಾಮನಂ ತನುವಿನೊಳ್ತ್ರಿಪುರಂಗಳನಕ್ಷಿಪಕ್ಷ್ಮವ
ರ್ತನದೊಳೆ ಕಾಲನಂ ಮರಳಿ ಪುಟ್ಟಿಸಿದಂದಮನಾರುಬಲ್ಲರಂ
ದಿನ ಪುಸಿಮಾತುಗೀತುಗಳನಾಡುವರಲ್ಲದೆ ನಿನ್ನ ಠಕ್ಕನಿಂ
ದಿನೊಳರಿದಿರ್ಪೆನಾನೆ ಪರಮಪ್ರಭುವೇ ಮಹದೈಪುರೀಶ್ವರಾ ೪೫

**ಟೀಕೆ :** ಅಂದಿನ-ಮುನ್ನಾದ, ಪುಸಿಮಾತುಗೀತುಗಳಂ - ತ್ರಿಪುರಸ್ಮರಕಾಲಾರಿಯೆಂಬ ಸಟೆಯ ಮಾತುಗಳನ್ನು, ಆಡುವರಲ್ಲದೆ – ಹೇಳುವರಲ್ಲದೆ, ಮನದೊಳೆ-ಮನದಲ್ಲಿಯೇ, ಕಾಮನಂ - ಮನ್ಮಥನನ್ನು, ತನುವಿನೊಳ್ – ದೇಹದಲ್ಲಿ, ತ್ರಿಪುರಂಗಳಂ - ಮುಪ್ಪುರವನು, ಅಕ್ಷಿಪಕ್ಷ್ಮವರ್ತನದೊಳೆ - ಕಣ್ಣೆವೆಯ ಹಳಚುವುದರಲ್ಲಿಯೇ, ಕಾಲನಂ - ಯಮನನ್ನು, ಮರಳಿ - ಬಳಿಕ, ಪುಟ್ಟಿಸಿದಂದಮಂ - ಉಂಟುಮಾಡಿದ ಮಾರ್ಗವನ್ನು, ಆರುಬಲ್ಲರ್ - ತಿಳಿವರಾರು ? ನಿನ್ನ ಠಕ್ಕಂ - ನಿನ್ನ ಕಪಟವನ್ನು, ಆನೆ - ನಾನೋರ್ವನೇ, ಇಂದಿನೊಳ್ - ಈಗ, ಅರಿದಿರ್ಪೆಂ - ತಿಳಿದುಕೊಂಡಿರ್ಪೆನು.

**ಭಾವಾರ್ಥಬೋಧಿನಿ :** ಹಿಂದೆ ಪರಶಿವನು ತ್ರಿಪುರ-ಕಾಮ-ಕಾಲ-ಇವರನು ಸಂಹರಿಸಿದನೆಂಬ ಸುಳ್ಳುಮಾತುಗಳನ್ನು ಸರ್ವರೂ ಹೇಳುತ್ತಿರುವರಷ್ಟೆ. ಮನಸ್ಸಿನಲ್ಲಿಯೇ ಕಾಮನನ್ನೂ, ಮೂರು ಶರೀರಗಳಲ್ಲಿ ತ್ರಿಪುರಗಳನ್ನೂ, ಕಣ್ಣರೆಪ್ಪೆ ಮುಚ್ಚಿಕೊಳ್ಳುವುದರಲ್ಲಿ ಯಮನನ್ನೂ ಪುನಃ ನೀನು ಹುಟ್ಟಿಸುತ್ತಿರುವುದನ್ನು ಆರು ತಿಳಿದವರು ? ಸ್ವಾಮಿಯೆ, ಪುನಃ ಕಾಮಾದಿಗಳನ್ನು ಹುಟ್ಟಿಸುತ್ತಿರುವ ನಿನ್ನೀ ಕಪಟವನ್ನು ನಾನೋರ್ವನೇ ತಿಳಿದಿರುವೆನು. ೪೫.

**ಚಂಪಕಮಾಲಾವೃತ್ತಂ**

ಮನವ ಮನೋರಥಂಲಯಮ ನೆಯ್ದಲು ಕಾಮಜಯಂ ತ್ರಿದೇಹವಾ
ಸನೆಯಳಿಯ ಲ್ಪುರತ್ರಯಜಯಂ ಶಿವಲಿಂಗದೊಳಿಟ್ಟು ನಟ್ಟ ಕ
ಣ್ಣಿನ ಯೆವೆಯಾಟವಿಲ್ಲದಿರ ಲಂತದು ಕಾಲಜಯಂ ತ್ವದೀಯಶ
ಕ್ತಿನಿಜಪದೈಕ್ಯಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ೪೬

**ಟೀಕೆ :** ಮನದ – ಮನಸ್ಸಿನ, ಮನೋರಥಂ - ಬಯಕೆಯು, ಲಯಮನೈದಲು - ನಾಶವನ್ನೈದಲಾಗಿ, ಕಾಮಜಯಂ - ಕಾಮಸಂಹಾರವು, ತ್ರಿದೇಹವಾಸನೆ-ತನುತ್ರಯವಾಸನೆಯು, ಅಳಿಯಲ್ - ನಷ್ಟವಾಗಲಾಗಿ, ಪುರತ್ರಯಜಯಂ-ತ್ರಿಪುರಸಂಹಾರವು, ಶಿವಲಿಂಗದೊಳ್ - ಶಿವಲಿಂಗದಲ್ಲಿ, ಇಟ್ಟು - ಮಡಗಿ, ನಟ್ಟ - ದೃಢವಾದ, ಕಣ್ಣಿನ - ನಯನದ, ಎವೆಯಾಟಂ - ಎವೆಹಳಚುವುದು, ಇಲ್ಲದಿರೆ - ಇಲ್ಲದಿರಲಾಗಿ, ಅಂತದು - ಅದುತಾನು, ಕಾಲಜಯಂ - ಯಮನಜಯಿಸಿದುದು, ತ್ವದೀಯಶಕ್ತಿ - ನಿನ್ನ ಸಂಬಂಧವಾದ ಸಾಮರ್ಥ್ಯವು, ನಿಜಪದೈಕ್ಯಭಕ್ತಿ - ನಿಜ - ಸಹಜವಾದ, ಪದ - ಮೋಕ್ಷದಲ್ಲಿ, ಐಕ್ಯ - ಸಾಮರಸ್ಯದಲ್ಲಿ, ಭಕ್ತಿ - ಭಕ್ತಿಯು.

**ಭಾವಾರ್ಥಬೋಧಿನಿ :** ಮನದಲ್ಲಿ ಹುಟ್ಟುವ ಕಾಮವು (ಬಯಕೆಯು) ನಾಶವಾದರೆ ಅದು ಕಾಮಜಯವೆನಿಸುವುದು. ಸ್ಥೂಲಾದಿ ಶರೀರತ್ರಯಕ್ಕೆ ಸಂಬಂಧಿಸಿದ ವಾಸನೆ (ದೇಹತ್ರಯಗಳಿಗೆ ಸಂಬಂಧಿಸಿದ 'ನಾನು, 'ನನ್ನದು, ಎಂಬ ಮೋಹ) ನಾಶವಾದರೆ ಅದು ತ್ರಿಪುರಜಯವೆನಿಸುವುದು. ಶಿವಲಿಂಗದಲ್ಲಿ ಇಟ್ಟಿರುವ ದೃಢತರವಾದ ದಿಟ್ಟಿಯ ರೆಪ್ಪೆಯ ಬಡಿದಾಟವು ಇಲ್ಲದಂತಾಗಲು ಅದೇ ಕಾಲಜಯವೆನಿಸುವುದು. ಶಿವನೇ ನಿನ್ನಲ್ಲಿರುವ ಕಲಾಶಕ್ತಿಯೇ ಭಕ್ತನಲ್ಲಿ ಲಿಂಗಾಂಗಸಾಮರಸ್ಯವನ್ನುಂಟುಮಾಡುವ ಭಕ್ತಿಯಾಗಿ ಪರಿಣಮಿಸುವುದು. (ಆ ಭಕ್ತಿಯೇ ಕಾಮ-ತ್ರಿಪುರ-ಕಾಲ ಇವರನ್ನು ಜಯಿಸುವುದೆಂದು ೪೭ ನೆಯ ಪದ್ಯದಲ್ಲಿ ಉಕ್ತವಾಗಿರುವುದು ) ೪೬

**ಚಂಪಕಮಾಲಾವೃತ್ತಂ**

ಭವಭಯಮಾತ್ಮ ವಿದ್ಯೆಗೆ ತನುತ್ರಯವಾಸನೆಯಡ್ಡಬೀಳೆ ಕ
ಣ್ಣೆವೆ ಮರೆಯಾಗೆ ಲಿಂಗದ ನಿರೀಕ್ಷೆಗೆ ಕಾಲಭಯಂ ಮನೋರಥಂ
ಕವಿಯೆ ಮನಕ್ಕೆ ಕಾಮಭಯಮೊಘಮಮಂ ನಿಜಭಕ್ತಿಯೋಗದಿಂ
ದವೆ ಕಿಡಿಸಯ್ಯ ದೇವ ಪರಮಪ್ರಭುವೇ ಮಹದೈಪುರೀಶ್ವರಾ ೪೭

**ಟೀಕೆ :** ದೇವ - ಎಲೆಶಿವನೆ, ಆತ್ಮವಿದ್ಯೆಗೆ - ಆತ್ಮಜ್ಞಾನಕ್ಕೆ, ತನುತ್ರಯವಾಸನೆ - ತನುಮೂರರವಾಸನೆಯು, ಅಡ್ಡಬೀಳೆ - ಅಡ್ಡಬೀಳಲಾಗಿ, ಭವಭಯಂ-ಸಂಸಾರಭಯವು, ಲಿಂಗನಿರೀಕ್ಷೆಗೆ - ಲಿಂಗವಂನೋಡುವುದಕ್ಕೆ, ಕಣ್ಣೆವೆ-ಕಣ್ಣ

ರೆಪ್ಪೆ, ಮರೆಯಾಗೆ – ಮರೆಯಾಗಲಾಗಿ, ಕಾಲಭಯಂ - ಯಮನಭಯವು, ಮನಸ್ಸಿಗೆ, ಮನೋರಥಂ - ಕಾಂಕ್ಷೆಯು, ಕವೆಯೆ - ಆವರಿಸಲಾಗಿ, ಕಾಮ ಭಯಂ - ಮನ್ಮಥನಭಯವು, ಈ ಭಯಮಂ - ಈ ಭೀತಿಯನ್ನು, ನಿಜಭಕ್ತಿ ಯೋಗದಿಂದವೆ - ನಿನ್ನಭಕ್ತಿ ಸಂಬಂದದಿಂದಲೇನೇ, ಕಿಡಿಸಯ್ಯ - ಸಂಹಾರವನ್ನು ಮಾಡಯ್ಯ.

**ಭಾವಾರ್ಥಬೋಧಿನಿ :** ಪರಶಿವನೆ, ಪರಮಾತ್ಮಜ್ಞಾನಕ್ಕೆ ದೇಹತ್ರಯದ ವಾಸನೆ ಅಡ್ಡಗಟ್ಟಿದರೆ ಜನನಮರಣರೂಪ ಸಂಸಾರಭಯವುಂಟಾಗುವುದು. ಲಿಂಗದಲ್ಲಿಟ್ಟ ಸ್ಥಿರನಿರೀಕ್ಷಣಕ್ಕೆ ರೆಪ್ಪೆ ಮುಚ್ಚುವುದು ಮರೆಯಾಗುತ್ತಿದ್ದರೆ ಕಾಲ ಭಯವುಂಟಾಗುವುದು. ಮನದಲ್ಲಿ ಕಾಮವು (ಬಯಕೆ) ಆವರಿಸುತ್ತಿದ್ದರೆ ಕಾಮ ಭಯವುಂಟಾಗುವುದು ಈ ತ್ರಿವಿಧ ಭಯವನ್ನು ನಿನ್ನ ಭಕ್ತಿಯೋಗದಿಂದ ಪರಿಹರಿಸು. (ಭಕ್ತಿಶಕ್ತಿಯಿಂದಲೇ ಕಾಮಾದಿಗಳ ಸಂಹಾರವಾಗುವುದೆಂದು ತಾತ್ಪರ್ಯ.)

**ಅವತಾರಿಕೆ :** ಇನ್ನು ಭಕ್ತಿಪ್ರಭಾವಮಂ ಪೇಳುತ್ತಿರ್ದಪಂ–

**ಚಂಪಕಮಾಲಾವೃತ್ತಂ**

ಕ್ಷುಧೆ ತೃಷೆನಿದ್ರೆಯೆಂಬಿವರ ಭಂಗಮಡಂಗಲು ಲಿಂಗದೊಳ್ ಸದಾ
ನಿಧನದ ಬಾಧೆ ಹಿಂಗಿ ತನುಜೀವದ ಸಂದಳಿದಪ್ರಯಾಸದಿಂ
ವಿಧಿವಿಹಿತ ಪ್ರಯತ್ನಗತಿ ಹೊದ್ದದೆ ರಾಜಿಪುದಯ್ಯ ಚಿತ್ಪ್ರಭಾ
ನಿಧಿ ಭವದೀಯಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ೪೮

**ಟೀಕೆ :** ಲಿಂಗದೊಳ್ - ಮಹಾಲಿಂಗದಲ್ಲಿ, ಸದಾ - ಆವಾಗಲೂ, ಕ್ಷುಧೆ - ಹಸಿವು, ತೃಷೆ - ನೀರಡಿಕೆ, ನಿದ್ರೆ - ನಿದ್ರೆಯು, ಎಂಬ - ಹೀಗೆಂಬ, ಇವರಭಂಗಂ- ಈ ಅಧಿಕವಾದ ಕೊರತೆಯು, ಅಡಂಗಲು - ಅಡಗಲಾಗಿ, ನಿಧನದ - ಮರಣದ, ಬಾಧೆ - ಹಿಂಸೆಯು, ಹಿಂಗಿ - ನಾಶವಾಗಿ, ತನುಜೀವದಸಂದು - ಈ ದೇಹವೆನ್ನ ದೆಂಬಭಿಮಾನವು, ಅಳಿದು - ನಾಶವಾಗಿ, ಅಪ್ರಯಾಸದಿಂ - ಕೋಟಲೆಯಿಲ್ಲದೆ, ವಿಧಿವಿಹಿತಪ್ರಯತ್ನಗತಿ - ವಿಧಿ - ಪ್ರಾರಬ್ಧಕರ್ಮದಿಂದ, ವಿಹಿತ - ಮಾಡಲ್ಪಟ್ಟ, ಪ್ರಯತ್ನಗತಿ - ಉದ್ಯೋಗದ ನಡತೆಯು, ಹೊದ್ದದೆ - ಸೋಂಕದೆ, ಚಿತ್ಪ್ರಭಾ ನಿಧಿ - ಎಲೆ ಜ್ಞಾನ ಪ್ರಕಾಶಕ್ಕೆ ಸ್ಥಾನವಾದಾತನೆ, ಭವದೀಯಭಕ್ತಿ - ನಿನ್ನ ಸಂಬಂಧವಾದ ಭಕ್ತಿಯು, ರಾಜಿಪುದಯ್ಯ - ಒಪ್ಪುವುದಯ್ಯ.

**ಭಾವಾರ್ಥಬೋಧಿನಿ :** ಜ್ಞಾನಪ್ರಭಾನಿಧಿಯಾದ ಶಿವನೆ, ಮಹಾಲಿಂಗದ ಸಂಬಂಧದಿಂದ - ಸಾಮರಸ್ಯದಿಂದ - ಹಸಿವು, ನೀರಡಿಕೆ, ನಿದ್ರೆಯೆಂಬಿವುಗಳ ಕಾಟವು ತಪ್ಪಿ, ಮರಣಬಾಧೆಯಿಲ್ಲದಂತಾಗಿ, ನನ್ನ ದೇಹವೆಂಬಭಿಮಾನವು ನಷ್ಟವಾಗಿ ಕರ್ಮಫಲಭೋಗವಿಲ್ಲದಂತಾಗಲು ಭಕ್ತನಲ್ಲಿ ಭವದೀಯ ಸಹಜಭಕ್ತಿಯೊಂದೇ ಒಪ್ಪುತ್ತಿರುವುದು. (ಭಕ್ತಿಶಕ್ತಿಯು ಭಕ್ತನ ದೇಹಸಂಬಂಧದಿಂದ ಉಂಟಾಗುವ ಸರ್ವದೋಷಗಳನ್ನು ಪರಿಹರಿಸಿ, ಅವನನ್ನು ಲಿಂಗಭೋಗೋಪಭೋಗಿಯನ್ನಾಗಿ ಮಾಡುವುದೆಂದು ತಾತ್ಪರ್ಯ.)

**ಚಂಪಕಮಾಲಾವೃತ್ತಂ**

ಭ್ರಮೆಯಳಿವಾತ್ಮಸಂಗ ಬಹಿರಂಗ ಸಮುಲ್ಲಸದಂತರಂಗವಿ
ಶ್ರಮಣ ವಿವೇಕದಿಂ ಸಕಲ ಸಂಶಯಸೂತಕ ಜಾಡ್ಯಜಾಲಮ
ಸ್ತಮಿಸಿ ಶಿವಾತ್ಮಕಂ ನಿರವಸಾನನಿರರ್ಗಳ ಭಕ್ತಿಯೋಳ್ಗತಾ
ಗಮನೆನಿಸಿರ್ಪನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೮೯

**ಟೀಕೆ :** ಶಿವಾತ್ಮಕಂ - ಶಿವಸ್ವರೂಪನಾದ ಶರಣನು, ಭ್ರಮೆಯಳಿದು - ಸಂಸಾರಭ್ರಾಂತಿನಷ್ಟವಾಗಿ, ಆತ್ಮ...... ವಿವೇಕದಿಂ-ಆತ್ಮಸಂಗ-ಜೀವಸಂಪರ್ಕದ, ಬಹಿರಂಗ - ಬಾಹ್ಯ ವ್ಯಾಪಾರದ, ಸಮುಲ್ಲಸತ್ - ಒಪ್ಪುತ್ತಿರ್ದ, ಅಂತರಂಗ - ಮನೋವ್ಯಾಪಾರದ, ವಿಶ್ರಮಣ - ಅತ್ಯಂತ ಶಮನದ, ವಿವೇಕದಿಂ - ವಿಚಾರದಿಂದ, ಸಕಲಸಂಶಯಸೂತಕ ಜಾಡ್ಯಜಾಲಂ - ಸಕಲ - ಸಮಸ್ತವಾದ, ಸಂಶಯ - ಸಂಕಲ್ಪದ, ಸೂತಕ – ಮಲಿನ ಭಾವದ, ಜಾಡ್ಯ - ಜಡಭಾವದ, ಜಾಲಂ – ಸಮೂಹವು, ಅಸ್ತಮಿಸಿ - ನಷ್ಟವಾಗಿ, ನಿರವಸಾನನಿರರ್ಗಳಭಕ್ತಿಯೋಳ್ - ನಿರವಸಾನ- ಅವಧಿಯಿಲ್ಲದ, ನಿರರ್ಗಳ - ತಡೆಯಿಲ್ಲದ, ಭಕ್ತಿಯೋಳ್- ಶಿವಭಕ್ತಿಯಲ್ಲಿ, ಗತಾಗಮಂ– ಎಡೆಯಾಡುತ್ತಿರ್ಪನು, ಎನಿಸಿರ್ಪನಯ್ಯ - ಎನಿಸಿಕೊಳ್ಳುವನಯ್ಯ.

**ಭಾವಾರ್ಥಬೋಧಿನಿ :** ಶಿವಸ್ವರೂಪಿಯಾದ ಶರಣನು ಸಂಸಾರಭ್ರಾಂತಿಯನ್ನು ತ್ಯಜಿಸಿ, ತನ್ನ ಅಂತರಂಗಬಹಿರಂಗ ಕ್ರಿಯೆಗಳ ವಿಶ್ರಾಂತಿಯ - ಎಂದರೆ - ಸರ್ವಕ್ರಿಯೆಗಳನ್ನು ಲಿಂಗಾರ್ಪಣಮಾಡುವುದರಿಂದುಂಟಾಗುವ ವಿಶ್ರಾಂತಿಯ ವಿವೇಕದಿಂದ ಸಕಲಸಂಶಯಸೂತಕ ಜಾಡ್ಯನಿವಹದಿಂದ ದೂರನಾಗಿ, ಕೊನೆಯಿಲ್ಲದ ಮತ್ತು ತಡೆಯಿಲ್ಲದ ಶಿವಭಕ್ತಿಯಲ್ಲಿ ಸಂಚರಿಸುತ್ತಿರುವನು. ೮೯.

**ಅವತಾರಿಕೆ .** ತನುಕರಣವ್ಯಾಪಾರಂಗಳೆಲ್ಲವೂ ಲಿಂಗಸಂಬಂಧದಿಂದ ಲಿಂಗ ಪೂಜೆಗಳಾಗಿರ್ಪುವೆಂದು ಪೇಳುತ್ತಿರ್ದಪಂ-

**ಉತ್ಪಲಮಾಲಾವೃತ್ತಂ**

ಮಾನಸಮರ್ಚನಂ ವಿಮಳವಾಚಕ ಮರ್ಚನ ಮರ್ಚನಂ ಸಮಾ
ಧಾನ ಸಮೇತ ಕಾಯಕಮೆನಲ್ಶಿವ ನೀನೆ ಮನೋವಚೋವಪು
ಸ್ಥಾನವಿಶಿಷ್ಟನಾಗಿ ಕರಣತ್ರಯಪೂಜಿತನಾಗಿ ತೋರಲಿ
ನ್ನೇನೆರಡುಂಟೆ ದೇವ ಪರಮಪ್ರಭುವೇ ಮಹದೈಪುರೀಶ್ವರಾ ೫೦

**ಟೀಕೆ :** ಮಾನಸಂ - ಮನೋವ್ಯಾಪಾರವೆಲ್ಲವೂ, ಅರ್ಚನಂ - ಪೂಜೆಯು, ವಿಮಳವಾಚಕಂ - ನಿರ್ಮಳವಾದ ವಾಗ್ವ್ಯಾಪಾರವೆಲ್ಲವೂ, ಅರ್ಚನಂ - ಪೂಜೆಯು, ಸಮಾಧಾನಸಮೇತಕಾಯಕಂ - ಮನಸ್ಸಮಾಧಾನದೊಡನೆ ಕೂಡಿದ ಶರೀರ ವ್ಯಾಪಾರವೆಲ್ಲವೂ, ಅರ್ಚನಮೆನಲ್ - ಪೂಜೆಯೆನಲಾಗಿ, ಮನೋವಚೋವಪುಸ್ಥಾನ ವಿಶಿಷ್ಟನಾಗಿ, ಮನಃ - ಮನಸ್ಸು, ವಚಃ - ವಾಕ್ಕು, ವಪುಃ - ಶರೀರವೆಂಬ, ಸ್ಥಾನ - ಸ್ಥಾನಂಗಳಲ್ಲಿ, ವಿಶಿಷ್ಟನಾಗಿ - ಕೂಡಿವಾತನಾಗಿ, ಶಿವ - ಎಲೈ ಶಿವನೆ, ನೀನೆ - ನೀನು ತಾನೆ, ಕರಣತ್ರಯಪೂಜಿತನಾಗಿ - ತ್ರಿಕರಣವಲ್ಲಿಯೂ, ಪೂಜಿಸಲ್ಪ ಟ್ಟಾತನಾಗಿ, ತೋರಲ್ - ಕಾಣಿಸಲು, ಭೋದೇವ - ಎಲೈ ಮಹಾದೇವನೆ, ಇನ್ನೇಂ- ಇನ್ನಾವುದು ? ಎರಡುಂಟೆ - ಭೇದವುಂಟೆ ? ಇಲ್ಲ.

**ಭಾವಾರ್ಥಬೋಧಿನಿ :** ಪರಶಿವನೇ, ಶರಣ ಮನೋವ್ಯಾಪಾರವೂ, ವಾಗ್ವ್ಯಾ ಪಾರವೂ, ಮನಸ್ಸಮಾಧಾನದೊಡನೆ ಕೂಡಿದ ದೇಹವ್ಯಾಪಾರವೂ ಶಿವಾರ್ಚನೆಯಾಗಿ ರುವುದು. ಏಕೆಂದರೆ - ಶಿವನೆ, ನೀನೇ ಆ ಶರಣನ ಮನೋವಚನಕಾಯಗಳಲ್ಲಿದ್ದು ಆತನ ತ್ರಿಕರಣದಿಂದ ಪೂಜಿತನಾಗಿರುವೆಯಲ್ಲವೆ ? ಇನ್ನು ಆ ಶರಣನ ವ್ಯವಹಾರಕ್ಕೂ ಪೂಜೆಗೂ ಭೇದವಿರುವುದೇನು ? ಇಲ್ಲ. (ಶಿವಾತ್ಮನಾದ ಶರಣನ ವರ್ತನವೆಲ್ಲವೂ ಶಿವಪೂಜೆಯಾಗಿ ಪರಿಣಮಿಸುವುದೆಂದು ತಾತ್ಪರ್ಯ.)

## ಉತ್ಪಲಮಾಲಾವೃತ್ತಂ

ಸ್ಥೂಲಶರೀರ ಸೂಕ್ಷ್ಮತನು ಕಾರಣದೇಹಮೆನಿಪ್ಪ ಮೂರರೊಳ್
ಮೇಲೆ ಗುರೂಪದಿಷ್ಟ ಶಿವಲಿಂಗ ಮಖಂಡಿತನಿತ್ಯ ಚಿತ್ಪ್ರಕಾ
ಶಾಲಯಮಾಗಿ ತೋರಲು ತನುತ್ರಯದೊಳ್ ತೆರಹಿಲ್ಲದಿರ್ಪ್ಪತ
ಲ್ಲೀಲೆಯೆ ಶುದ್ಧ ಪೂಜೆ ಪರಮಪ್ರಭುವೇ ಮಹದೈಪುರೀಶ್ವರಾ ೫೧

**ಟೀಕೆ :** ಗುರೂಪದಿಷ್ಟ ಶಿವಲಿಂಗಂ - ಗುರು - ಶ್ರೀಗುರುವಿನಿಂದ, ಉಪದಿಷ್ಟ - ಉಪದೇಶಿಸಲ್ಪಟ್ಟ, ಶಿವಲಿಂಗಂ - ಶಿವಲಿಂಗವು, ಸ್ಥೂಲಶರೀರ ಸೂಕ್ಷ್ಮತನು ಕಾರಣದೇಹಮೆನಿಪ್ಪ - ಸ್ಥೂಲ-ಸೂಕ್ಷ್ಮ-ಕಾರಣದೇಹಗಳೆಂಬ, ಮೂರರೊಳ್ - ಮೂರರಲ್ಲಿ, ಅಖಂಡಿತನಿತ್ಯಚಿತ್ಪ್ರಕಾಶಾಲಯಮಾಗಿ - ಅಖಂಡಿತ - ಪರಿಪೂರ್ಣವಾಗಿ, ನಿತ್ಯ - ಕೇಡಿಲ್ಲದುದಾಗಿ - ಚಿತ್ಪ್ರಕಾಶಾಲಯಮಾಗಿ - ಜ್ಞಾನಪ್ರಕಾಶಕ್ಕೆ ಸ್ಥಾನವಾಗಿ ತೋರಲು - ಕಾಣಿಸಲು, ಮೇಲೆ - ಅಷ್ಟರಮೇಲೆ, ತನುತ್ರಯದೊಳ್ - ತನು ಮೂರರಲ್ಲಿ, ತೆರಹಿಲ್ಲದಿರ್ಪ - ಸಂದಿಲ್ಲದಿರ್ಪ, ತಲ್ಲೀಲೆಯೆ - ಆ ಶಿವಲಿಂಗದ ವಿಲಾಸವೇ, ಶುದ್ಧಪೂಜೆ - ನಿರ್ಮಳವಾದ ಪೂಜೆಯು.

**ಭಾವಾರ್ಥಬೋಧಿನಿ :** ಶ್ರೀ ಗುರುವಿನಿಂದ ಉಪದೇಶಮೂಲಕವಾಗಿ ಕೊಡಲ್ಪಟ್ಟ ಶಿವಲಿಂಗವು, ಸ್ಥೂಲ-ಸೂಕ್ಷ್ಮ-ಕಾರಣವೆಂಬ ಶರೀರತ್ರಯದಲ್ಲಿ ಇಷ್ಟ-ಪ್ರಾಣ-ಭಾವರೂಪದಿಂದ ಪರಿಪೂರ್ಣವಾಗಿಯೂ, ನಿತ್ಯವಾಗಿಯೂ ಜ್ಞಾನಪ್ರಕಾಶ ನಿಧಿಯಾಗಿಯೂ ಕಾಣಿಸಿಕೊಂಡಿರಲು, ಆ ಮೇಲೆ ಆ ಶರೀರತ್ರಯದ ವ್ಯಾಪಾರವು ಆ ಶರೀರತ್ರಯದಲ್ಲಿರುವ ಲಿಂಗದ ಲೀಲೆಯಾಗುವುದು. ಅದೇ ಶುದ್ಧಲಿಂಗಪೂಜೆಯಾಗಿ ಪರಿಣಮಿಸುವುದು. (ಲಿಂಗವಂತನ ವ್ಯವಹಾರವೆಲ್ಲವೂ ಸದಾ ಲಿಂಗಾರ್ಚನ ಕ್ರಿಯೆಯಾಗಿರುವುದೆಂದು ತಾತ್ಪರ್ಯ.)

## ಉತ್ಪಲಮಾಲಾವೃತ್ತಂ

ಲಿಂಗದೊಳಿಟ್ಟ ದೃಷ್ಟಿ ನಿಜದೃಷ್ಟಿಯೊಳಿರ್ದ್ದ ಮನಂ ಮನಸ್ಸಿನೊ
ಳ್ಪಿಂಗದೆ ನಿಂದಭಾವ ಮದರೊಳ್ನೆಲೆಗೊಂಡ ಶಿವಾತ್ಮಲಿಂಗವಾ
ಲಿಂಗದೊಳಿರ್ದ್ದು ನಿತ್ಯಸುಖಿಯಾಗಿ ವಿರಾಜಿಸುವಂಗೆ ಬಾಹ್ಯ ಕ
ರ್ಮಂಗಳವೇತಕಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೫೨

**ಟೀಕೆ :** ಲಿಂಗದೊಳ್ - ಶಿವಲಿಂಗದಲ್ಲಿ, ಇಟ್ಟ - ಇರಿಸಿದ, ದೃಷ್ಟಿ - ದೃಷ್ಟಿಯು, ನಿಜದೃಷ್ಟಿಯೊಳ್ - ಸಹಜವಾದ ದೃಷ್ಟಿಯಲ್ಲಿ, ಇರ್ದ - ನೆಲಸಿದ, ಮನಂ - ಮನವು, ಮನಸ್ಸಿನೊಳ್ - ಮನಸ್ಸಿನಲ್ಲಿ, ಪಿಂಗದೆ - ತೊಲಗದೆ, ನಿಂದ- ಸ್ಥಿರವಾದ, ಭಾವಂ - ಭಾವವು, ಅದರೊಳ್ - ಆಭಾವದಲ್ಲಿ, ನೆಲೆಗೊಂಡ - ಸ್ಥಿರ ಗೊಂಡ, ಶಿವಾತ್ಮಲಿಂಗಂ - ಪರಮಾತ್ಮಲಿಂಗವು, ಆ ಲಿಂಗದೊಳ್ - ಆ ಪರಮಾತ್ಮ ಲಿಂಗದಲ್ಲಿ, ಇರ್ದ್ದು-ಸಾಮರಸ್ಯವನೆಯ್ದಿ, ನಿತ್ಯಸುಖಿಯಾಗಿ - ಸದಾಸುಖಿಯಾಗಿ, ವಿರಾಜಿಸುವಂಗೆ - ಒಪ್ಪುವಾತಂಗೆ, ಬಾಹ್ಯಕರ್ಮಂಗಳ್ - ಜಡವ್ಯಾಪಾರಗಳು, ಅವು - ಅವುತಾನು,ಎತಕಯ್ಯ - ಏನು ಪ್ರಯೋಜನವಯ್ಯ ?

**ಭಾವಾರ್ಥಬೋಧಿನಿ :** ಧರಿಸಿರುವ ಶಿವಲಿಂಗದಲ್ಲಿ ದೃಷ್ಟಿ ಚಲಿಸದಿರಲಾಗಿ, ಆ ದೃಷ್ಟಿಯಲ್ಲಿ ಮನವು ಕದಲದೆ ನಿಲ್ಲುವುದು. ಕದಲದ ಮನದಲ್ಲಿ ಭಾವವು ಸ್ಥಿರವಾಗಿ ನಿಲ್ಲುವುದು. ಸ್ಥಿರಭಾವದಲ್ಲಿ ಪರಮಾತ್ಮರೂಪ (ಭಾವ) ಲಿಂಗವು ನೆಲೆ ಗೊಳ್ಳುವುದು. ಆ ಲಿಂಗದಲ್ಲಿ ಸಾಮರಸ್ಯವನ್ನು ಪಡೆದು, ನಿತ್ಯಸುಖಿಯಾಗಿ ಒಪ್ಪುವ ಶರಣನಿಗೆ ಇನ್ನು ಬಹಿರ್ವ್ಯಾಪಾರಗಳು ಬೇರೆಯಾಗಿ ಎಲ್ಲಿರುವವು?ಅವುಗಳಿಂದ ಪ್ರಯೋಜನವೇನು ? (ಒಂದು ಪಕ್ಷದಲ್ಲಿ - ಬಾಹ್ಯವ್ಯಾಪಾರಗಳು ತೋರಿದರೂ ಅವು ಲಿಂಗಲೀಲಾವಿಲಾಸಗಳಾಗಿಯೇ ಒಪ್ಪುವವು.) ೫೨

## ಉತ್ಪಲಮಾಲಾವೃತ್ತಂ

ಅಂಗದ ಲಿಂಗಮಂ ಮನದ ಲಿಂಗಮ ನುತ್ತರಭಾವಲಿಂಗಮಂ
ಸಂಗಿಸಿ ಪೂಜೆಗೆಯ್ದು ಮುಕುರಪ್ರತಿಬಿಂಬವವೊಲ್ಬಹಿಃಕ್ರಿಯಾ
ಸಂಗದೊಳಿರ್ದುಮಿಲ್ಲದಿಹ ತನ್ನಿಜಮೇ ನಿಜಮಾಗಿ ತೋರ್ಪ ಭ
ಕ್ತಂ ಗೆಣೆಯುಂಟೆ ದೇವ ಪರಮಪ್ರಭುವೇ ಮುಹದ್ಮೆಪುರೀಶ್ವರಾ ೫೩

**ಟೀಕೆ :** ದೇವ - ಎಲೆ ಚಿತ್ಪ್ರಕಾಶರೂಪನೇ, ಅಂಗದಲಿಂಗಮಂ - ಇಷ್ಟಲಿಂಗ ವನ್ನು, ಮನದಲಿಂಗಮಂ – ಪ್ರಾಣಲಿಂಗವನ್ನು, ಉತ್ತರಭಾವಲಿಂಗಮಂ - ಸರ್ವೋತ್ಕೃಷ್ಟವಾದ ಭಾವಲಿಂಗವನ್ನು; ಸಂಗಿಸಿ - ಸಂಬಂಧಿಸಿಕೊಂಡು, ಪೂಜೆ ಗೆಯ್ದು - ಅರ್ಚನೆಯಮಾಡಿ, ಮುಕುರ ಪ್ರತಿಬಿಂಬದವೊಲ್ - ಕನ್ನಡಿಯಲ್ಲಿ ತೋರ್ಪ ಪ್ರತಿಬಿಂಬದಹಾಗೆ, ಬಹಿಃಕ್ರಿಯಾಸಂಗದೊಳ್ - ಬಾಹ್ಯಕ್ರಿಯಾಸಂಬಂಧ

ದಲ್ಲಿ, ಇರ್ದು - ಕೂಡಿರ್ದೂ, ಇಲ್ಲದಿಹ - ಇಲ್ಲದಿರ್ಪ, ತನ್ನಿಜಮೇ - ಆ ಲಿಂಗ ಸ್ವರೂಪವೇ, ನಿಜವಾಗಿ - ತಾನೆಯಾಗಿ, ತೋರ್ಪ - ತೋರುವ, ಭಕ್ತಂಗೆ - ಶಿವ ಶರಣಂಗೆ, ಎಣೆಯುಂಟೆ - ಸದೃಶವುಂಟೆ.

**ಭಾವಾರ್ಥಬೋಧಿನಿ :** ದೇವನೆ, ಅಂಗದ ಲಿಂಗವಾದ ಇಷ್ಟಲಿಂಗ, ಮನದ ಲಿಂಗವಾದ ಪ್ರಾಣಲಿಂಗ, ಶ್ರೇಷ್ಠವಾದ ಭಾವಲಿಂಗವಾದ ಭಾವಲಿಂಗ ಈ ಮೂರು ಲಿಂಗಗಳ ಸಂಬಂಧವನ್ನು ಒಂದುಗೂಡಿಸಿಕೊಂಡು ಪೂಜಿಸಿ, ಲಿಂಗಸ್ವರೂಪವೇ ತಾನಾಗಿ ತೋರುವ ಭಕ್ತನು ಬಾಹ್ಯಕ್ರಿಯಾಸಂಬಂಧದಲ್ಲಿ ಇದ್ದರೂ ಇಲ್ಲದಂತೆ - ಎಂದರೆ ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬದ ವ್ಯಾಪಾರವು ತೋರಿಕೆಗೆ ಮಾತ್ರವಿದ್ದು ನಿಜವಾಗಿ ಇಲ್ಲದಿರುವಂತೆ - ವಿರಾಜಿಸುವನು ಅಂತಹ ಭಕ್ತನಿಗೆ ಸಮಾನರುಂಟೆ? ಇಲ್ಲ. ೫೩

**ಉತ್ಪಲಮಾಲಾವೃತ್ತಂ**

ಅಂಗಮ ನಂಗದಿಂ ಕಳೆಯ ನಾಕಳೆಯಿಂ ಸುಖಮಂ ಸುಖೋಕ್ತಿಯಿಂ
ಸಂಗಮ ನಾಪ್ರಸಂಗರತಿಯಿಂ ಲಯಮಂ ಲಯದಿಂ ನಿರಂತರಂ
ಸಂಗಿಸಿ ತತ್ಪ್ರಪಂಚವಿಷಯೈಕಬಹಿಷ್ಕೃತನಾಗಿ ರಾಜಿಪಂ
ಲಿಂಗನಿಜೈಕ್ಯನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೫೪

**ಟೀಕೆ :** ಲಿಂಗನಿಜೈಕ್ಯಂ - ಶಿವಲಿಂಗೈಕ್ಯನು, ಅಂಗಮಂ - ತನ್ನಂಗವನು, ಅಂಗದಿಂ - ಲಿಂಗದಂಗದೊಡನೆ, ಕಳೆಯಂ - ತನ್ನ ಕರಣಂಗಳನು, ಆಕಳೆಯಿಂ- ಆ ಲಿಂಗದಕರಣಂಗಳೊಡನೆ, ಸುಖಮಂ - ತನ್ನ ವಿಷಯಂಗಳನು, ಸುಖೋಕ್ತಿಯಿಂ - ಆ ಲಿಂಗದ ವಿಷಯುವೆಂದು ಪೇಳುವುದರೊಡನೆ, ಸಂಗಮಂ - ತನ್ನ ಇಂದ್ರಿಯಂಗಳನ್ನು, ಆಪ್ರಸಂಗರತಿಯಿಂ - ಆ ಲಿಂಗದ ವಿಶೇಷವಾದ ಇಂದ್ರಿಯಂಗಳ ರತಿಯೊಡನೆ, ಲಯಮಂ - ತನ್ನ ಚಿತ್ತಸಮಾಧಿಯನು, ಲಯದಿಂ - ಆ ಲಿಂಗದಚಿತ್ತ ಸಮಾಧಿಯೊಡನೆ, ನಿರಂತರಂ - ಎಡೆವಿಡದೆ, ಸಂಗಿಸಿ - ಸಂಬಂಧಿಸಿ, ತತ್ಪ್ರಪಂಚವಿಷಯೈಕಬಹಿಷ್ಕೃತನಾಗಿ, ತತ್ - ಆ, ಪ್ರಪಂಚವಿಷಯ - ಅನಿತ್ಯವಾದ ವಿಷಯಂಗಳಿಗೆ, ಏಕ - ಮುಖ್ಯವಾಗಿ, ಬಹಿಷ್ಕೃತನಾಗಿ - ಬೇರಾದಾತನಾಗಿ, ರಾಜಿಪನಯ್ಯ - ಒಪ್ಪುತ್ತಿರ್ಪನಯ್ಯಾ.

**ಭಾವಾರ್ಥಬೋಧಿನಿ :** ನಿಜಲಿಂಗಸಾಮರಸ್ಯವನ್ನು ಪಡೆದ ಶರಣನು ತನ್ನ ಅಂಗವನ್ನು ಲಿಂಗದ ಅಂಗದೊಡನೆಯೂ, ತನ್ನ ಕರಣಂಗಳನ್ನು ಲಿಂಗದ ಕರಣಂಗಳೊಡನೆಯೂ, ತನ್ನ ವಿಷಯಂಗಳನ್ನು ಲಿಂಗದ ವಿಷಯಂಗಳೆಂದು ಹೇಳು-ವುದರೊಡನೆಯೂ, ತನ್ನ ಇಂದ್ರಿಯಂಗಳನ್ನು ಲಿಂಗದ ವಿಶೇಷವಾದ ಇಂದ್ರಿಯಂಗಳ ರತಿಯೊಡನೆಯೂ, ತನ್ನ ಚಿತ್ತ ಸಮಾಧಿಯನ್ನು ಲಿಂಗದ ಚಿತ್ತಸಮಾಧಿ ಯೊಡನೆಯೂ ಯಾವಾಗಲೂ ಒಂದುಗೂಡಿಸಿ, ಪ್ರಪಂಚ ವಿಷಯಕ್ಕೆ ಬೇರಾದಾತನಾಗಿ ರಾಜಿಸುವನು. (ಶರಣನ ದೇಹೇಂದ್ರಿಯಾದಿಗಳೆಲ್ಲವೂ ಲಿಂಗ ದೇಹೇಂದ್ರಿಯಾದಿಗಳಾಗಿರುವುದರಿಂದ ಆ ದೇಹಾದಿಗಳ ವ್ಯವಹಾರವು ಲಿಂಗವ್ಯವ-ಹಾರವಾಗಿರುವುದಲ್ಲದೆ ಪ್ರಪಂಚವ್ಯಾಪಾರವಾಗಿರುವುದಿಲ್ಲವೆಂದು ತಾತ್ಪರ್ಯ) ೫೪

## ಉತ್ಪಲಮಾಲಾವೃತ್ತಂ

ಅಂಗಮದಾರದೋ ಕರಣಮಾರದೊ ಪೂಜೆಯದಾರದೋ ಮಹಾ
ಲಿಂಗ ಮದಾರದೋ ನೆರಪಿದಾತನದಾರಿವ ನೆಲ್ಲಮಂ ಮನೋ
ಮಂಗಳರೂಪನಾಗಿ ಬಯಲಂ ಬಯಲಿಂದಮೆ ಬಣ್ಣವಿಟ್ಟನಿ
ಸ್ಸಂಗ ನಿರಂಗ ನೀನೆ ಪರಮಪ್ರಭುವೇ ಮಹದೈವಪುರೀಶ್ವರಾ ೫೫

**ಟೀಕೆ :** ಅಂಗಂ - ಅಂಗಸ್ವರೂಪವು, ಅದಾರದೋ - ಅದುತಾನಾರದೊ, ಕರಣಂ - ಕರಣಂಗಳು, ಅರದೊ - ಅದುತಾನಾರದೊ, ಪೂಜೆ - ಅರ್ಚನೆಯು, ಆದಾರದೋ - ಅದುತಾನಾರದೊ, ಮಹಾಲಿಂಗಂ - ಘನಲಿಂಗವು, ಅದಾರದೋ - ಅದುತಾನಾರದೋ, ಇವನೆಲ್ಲಮಂ - ಇವನೆಲ್ಲದನೂ, ನೆರಪಿದಾತಂ - ಒಟ್ಟುಕೂಡಿಸಿ ದಾತನು, ಅದಾರ್ - ಅದುಯಾರು ? ಮನೋಮಂಗಳರೂಪನಾಗಿ - ಮನಸ್ಸಿಗೆ ಮಾಂಗಲ್ಯಸ್ವರೂಪನಾಗಿ, ಬಯಲಂ - ನಿರಾಕಾರಲಿಂಗವನು, ಬಯಲಿಂದಮೆ - ಮಹಾಜ್ಞಾನದಿಂದಲೇ, ಬಣ್ಣವಿಟ್ಟ - ಒಪ್ಪವಿಟ್ಟಂಥ, ನಿಸ್ಸಂಗ - ಸಂಗರಹಿತನಾದ, ನಿರಂಗ – ಜೀವಭಾವವಳಿದ ಶರಣನು, ನೀನೆ - ನೀನೆಯಲಾ.

**ಭಾವಾರ್ಥಬೋಧಿನಿ :** ಪರಶಿವನೆ, ಅಂಗವು ಯಾರದು ? ಬಹಿರಂತಃ ಕರಣಂಗಳು ಯಾರವು ? ಪೂಜೆ ಯಾರದು ? ಪೂಜ್ಯವಾದ ಮಹಾಲಿಂಗವು ಯಾರದು ? ಇವೆಲ್ಲವನೂ ಒಂದುಗೂಡಿಸಿದಾತನು ಯಾರು ? ಮನಸ್ಸಿಗೆ

ಮಾಂಗಲ್ಯಸ್ವರೂಪನಾಗಿ, ನಿರಾಕಾರಲಿಂಗವನ್ನು ಮಹಾಜ್ಞಾನದಿಂದ ಗೋಚರಿಸುವಂತೆ ಮಾಡಿದ ನಿಸ್ಸಂಗನೂ ನಿರಂಗನೂ ಆದ ಶರಣನು ನೀನಲ್ಲವೆ ? (ಶಿವನೇ ಲಿಂಗಾಂಗರೂಪದ ಲೀಲೆಯುಳ್ಳವನೆಂದು ತಾತ್ಪರ್ಯ.) ೫೫

## ಉತ್ಪಲಮಾಲಾವೃತ್ತಂ

ಲಿಂಗದೊಳಿರ್ದ್ದು ಲಿಂಗಮನೆ ತಾಳ್ದು ನಿರಂತರಲಿಂಗಪೂಜೆಯಂ
ಲಿಂಗದಿ ನೊಲ್ದು ವಿಸ್ತರಿಸಿ ಲಿಂಗಕೆ ಲಿಂಗಮನರ್ಪಿಸುತ್ತು ಮಾ
ಲಿಂಗ ಪದಾರ್ಥಮಂ ಸವಿದು ಲಿಂಗಸುಖಾಸ್ಪದನಾಗಿ ರಾಜಿಪಂ
ಲಿಂಗನಿಜೈಕ್ಯನಯ್ಯ ಪರಮಪ್ರಭುವೇ ಮಹದ್ವೈಪುರೀಶ್ವರಾ ೫೬

**ಟೀಕೆ :** ಲಿಂಗನಿಜೈಕ್ಯಂ - ಸಹಜವಾದ ಲಿಂಗೈಕ್ಯನು, ಲಿಂಗದೊಳ್ - ಮಹಾಲಿಂಗದಲ್ಲಿ, ಇರ್ದ್ದು - ಕೂಡಿರ್ದು, ಲಿಂಗಮನೆ - ಆ ಮಹಾಲಿಂಗವನೇ, ತಾಳ್ದು - ಧರಿಸಿ, ನಿರಂತರಲಿಂಗಪೂಜೆಯಂ – ಎಡೆಬಿಡದಿರ್ದ ಶಿವಲಿಂಗ ಪೂಜೆಯನು, ಲಿಂಗದಿಂ - ಆ ಶಿವಲಿಂಗದಿಂದ, ಒಲ್ದು - ಸಂತೋಷಿಸಿ ವಿಸ್ತರಿಸಿ- ವಿಶಾಲಮಂಮಾಡಿ, ಲಿಂಗಕೆ - ಆ ಶಿವಲಿಂಗಕ್ಕೆ, ಲಿಂಗಮಂ - ಆಶಿವಲಿಂಗವನು, ಅರ್ಪಿಸುತ್ತುಂ - ಸಮರ್ಪಣೆಮಾಡುತ್ತಲೂ, ಆ ಲಿಂಗಪದಾರ್ಥಮಂ - ಆ ಶಿವ ಲಿಂಗಸ್ವರೂಪವಾದ ಪದಾರ್ಥವನು, ಸವಿದು - ಆಸ್ವಾದಿಸಿ, ಲಿಂಗಸುಖಾಸ್ಪದನಾಗಿ- ಆ ಮಹಾಲಿಂಗಸುಖಕ್ಕೆ ಸ್ಥಾನವಾದಾತನಾಗಿ, ರಾಜಿಪನಯ್ಯ - ಒಪ್ಪುತ್ತಿರ್ಪನು, (ಈ ಅರ್ಥದಲ್ಲಿ –

"ಬಹ್ಮಹ ವಿಬ್ರ್ರಹ್ಮಾರ್ಪಣಂ ಬ್ರಹ್ಮಗೌಬ್ರ್ರಹ್ಮಣಾಹುತಂ |
ಬ್ರಹ್ಮೈವತೆನಗಂತವ್ಯಂ ಬ್ರಹ್ಮಕರ್ಮಸಮಾಧಿನಾ"

ಎಂದು ಯಾಜ್ಞವಲ್ಕ್ಯೋಪನಿಷತ್ತುಂಟಾಗಿ.)

**ಭಾವಾರ್ಥಬೋಧಿನಿ :** ಲಿಂಗಾಂಗಸಾಮರಸ್ಯದಲ್ಲಿರುವ ಶರಣನು ತಾನು ಮಹಾ ಲಿಂಗದಲ್ಲಿದ್ದು, ಆ ಲಿಂಗವನ್ನೇ ಧರಿಸಿ, ಲಿಂಗರೂಪ ಪೂಜಾವಸ್ತುಗಳಿಂದಲೇ ಲಿಂಗದ ಪೂಜೆಯನ್ನು ಮಾಡಿ, ಲಿಂಗಕ್ಕೆ ಲಿಂಗವನ್ನು (ಲಿಂಗರೂಪದ್ರವ್ಯವನ್ನು) ಸಮರ್ಪಿಸಿ,

ಆ ಲಿಂಗರೂಪಪ್ರಸಾದವನ್ನು ಆಸ್ವಾದಿಸಿ, ಲಿಂಗಸುಖಸ್ಥಾನನಾಗಿ ವಿರಾಜಿಸುವನು. (ಶರಣನಿಗೆ ತಾನೂ ತನ್ನ ಲಿಂಗವೂ ಲಿಂಗಾರ್ಚನಾರ್ಪಣಾದಿಗಳೂ ಲಿಂಗರೂಪ ದಿಂದಲೇ ಕಾಣುವವೆಂದು ತಾತ್ಪರ್ಯ.)

**ಚಂಪಕಮಾಲಾವೃತ್ತಂ**

ಶೂನ್ಯಮೆ ಗಟ್ಟಿಗೊಂಡು ಬಹಿರಂತರಖಂಡಿತಲಿಂಗಮಾಗಿ ನಿ
ಶ್ಶೂನ್ಯ ಗುರೂಪದೇಶಮುಖದಿಂ ಮುಖತೃಪ್ತಿಯನೆಯ್ದೆ ತನ್ಮುಖಾ
ನ್ಯೋನ್ಯ ಸಮರ್ಪಿತಾಖಿಳ ಪದಾರ್ಥಸುಖಪ್ರತಿಪತ್ತಿ ವೀರಶೈ
ವಾನ್ಯರಿಗೆತ್ತಲುಂಟು ಪರಮಪ್ರಭುವೇ ಮಹದೈಪುರೀಶ್ವರಾ ೫೭

**ಟೀಕೆ :** ನಿಶ್ಶೂನ್ಯಗುರೂಪದೇಶಮುಖದಿಂ - ನಿಶ್ಶೂನ್ಯಗುರು - ನಿಷ್ಕಳ ರೂಪನಾದ ಶ್ರೀಗುರುವಿನ, ಉಪದೇಶಮುಖದಿಂ- ದೀಕ್ಷಾತ್ರಯದ ಮುಖದಿಂ - ಶೂನ್ಯಮೆ - ನಿರಾಕಾರವಾದ ಲಿಂಗವೇ, ಗಟ್ಟಿಗೊಂಡು - ಸಾಕಾರವಾಗಿ, ಬಹಿರಂತರ ಖಂಡಿತ ಲಿಂಗಮಾಗಿ - ಒಳಗೂ ಹೊರಗೂ ಬೇರ್ಪಡಿಸಲ್ಪಟ್ಟ ಲಿಂಗವಾಗಿ, ಮುಖ ತೃಪ್ತಿಯಂ - ಶರಣನ ಷಡಿಂದ್ರಿಯಗಳೆಂಬ ಮುಖದಿಂ ತುಷ್ಟಿಯನ್ನು, ಎಯ್ದೆ - ಹೊಂದಲು, ತನ್ಮುಖಾನ್ಯೋನ್ಯಸಮರ್ಪಿತಾಖಿಳಪದಾರ್ಥ ಸುಖ ಪ್ರತಿಪತ್ತಿ - ತನ್ಮುಖ - ಆ ಲಿಂಗಮುಖದಿಂದ, ಅನ್ಯೋನ್ಯ - ತಮ್ಮೊಳಗಮ್ಮಲ್ಲಿ, ಸಮರ್ಪಿತ - ಅರ್ಪಿಸಲ್ಪಟ್ಟ, ಅಖಿಳ – ಸಮಸ್ತವಾದ, ಪದಾರ್ಥ - ವಸ್ತುಗಳಿಂದಲಾದ, ಸುಖ - ಆನಂದದ, ಪ್ರತಿಪತ್ತಿ - ಗ್ರಹಿಸುವುದು, ವೀರಶೈವಾನ್ಯರಿಗೆ - ವೀರಶೈವರಲ್ಲದವರಿಗೆ, ಎತ್ತಲುಂಟು - ಎಲ್ಲಿಯದು ?

**ಭಾವಾರ್ಥಬೋಧಿನಿ** : ನಿರಾಕಾರನಾದ ಶ್ರೀಗುರುವು ನಿರಾಕಾರವಾದ ಲಿಂಗವನ್ನು ಸಾಕಾರವನ್ನಾಗಿ ಮಾಡಿ, ದೀಕ್ಷಾತ್ರಯದಿಂದ ಭಕ್ತನ ಅಂತರಂಗ ಬಹಿ ರಂಗಗಳಲ್ಲಿ ಬೇರೆಬೇರೆಯಾಗಿ (ಹೊರಗೆ ಇಷ್ಟಲಿಂಗವಾಗಿ-ಒಳಗೆ ಪ್ರಾಣಲಿಂಗ ಭಾವ ಲಿಂಗಗಳಾಗಿ) ಪ್ರತಿಷ್ಠಿಸಿದನು. ಆ ಲಿಂಗವು ಮತ್ತು ಆಚಾರಾದಿ ಲಿಂಗರೂಪದಿಂದ ಭಕ್ತನ ಷಡಿಂದ್ರಿಯಗಳೆಂಬ ಮುಖಗಳಿಂದ ಗಂಧಾದಿ ಷಟ್ ಪದಾರ್ಥಗಳನ್ನು ಸ್ವೀಕ ರಿಸಿ ತೃಪ್ತಿ ಹೊಂದಲಾಗಿ, ಹೀಗೆ ಲಿಂಗಮುಖಾರ್ಪಿತವಾಗಿ ಬಂದ ಗಂಧಾದಿ ಪ್ರಸಾದವನ್ನು ಭಕ್ತನೂ ಆ ಇಂದ್ರಿಯಮುಖಗಳಿಂದಲೇ ಸ್ವೀಕರಿಸಿ ಪ್ರಸಾದಾನಂದ

ವನ್ನು ಪಡೆಯುವನು. ಹೀಗೆ ಶಿವನೂ ಶಿವಭಕ್ತನೂ ಪರಸ್ಪರವಾಗಿ ಅರ್ಪಿಸಲ್ಪಟ್ಟ ವಸ್ತುಗಳಿಂದಾದ ಆನಂದವನ್ನು ಪಡೆಯುವುದು ವೀರಶೈವರಲ್ಲದವರಿಗೆ ಎಲ್ಲಿರುವುದು ? ಇಲ್ಲ. ೫೭.

## ಉತ್ಪಲಮಾಲಾವೃತ್ತಂ

ನಿನ್ನ ಪದಾಂಬುವೇ ನಿನಗೆ ಮಜ್ಜನವಾರಿ ತವಪ್ರಸಾದದಿ
ವ್ಯಾನ್ನಮೆ ಭೋಜನಾನ್ನಮಿದು ತಥ್ಯಮದಲ್ಲದೆ ಬೇರೆ ಮೊಸಲಾ
ದನ್ನಮು ಮಂಬುವುಂ ಜಗದೊಳುಂಟೆ ಯಥೋಚಿತಭಕ್ತಿಭಾವಸಂ
ಪನ್ನಮನಃ ಪ್ರಸನ್ನ ಪರಮಪ್ರಭುವೇ ಮಹದೈಪುರೀಶ್ವರಾ ೫೮

**ಟೀಕೆ :** ಯಥೋಚಿತಭಕ್ತಿಭಾವಸಂಪನ್ನಮನಃ ಪ್ರಸನ್ನ - ಯಥೋಚಿತ - ಹೀಂಗೆ ದೊರಕಿದುದಾದ, ಭಕ್ತಿಭಾವ - ಭಕ್ತಿಭಾವದಿಂ, ಸಂಪನ್ನ - ಕೂಡಿದ ಶರಣನ, ಮನಃ - ಮನದಲ್ಲಿ, ಪ್ರಸನ್ನ - ಸಾಕ್ಷಾತ್ಕರಿಸಿದ ಪರಮಪ್ರಭುವೆ, ನಿನ್ನ ಪದಾಂಬುವೆ - ನಿನ್ನ ಪಾದತೀರ್ಥವೇ, ನಿನಗೆ ಮಜ್ಜನವಾರಿ - ನಿನಗೆ ಅಭಿಷೇಕೋದಕವು, ತವಪ್ರಸಾದದಿವ್ಯಾನ್ನಮೆ - ತವ - ನಿನ್ನ, ಪ್ರಸಾದ - ಪ್ರಸಾದವೆಂಬ, ದಿವ್ಯಾನ್ನಮೆ - ಶ್ರೇಷ್ಠವಾದ ಬೋನವೇ, ಭೋಜನಾನ್ನಂ - ನೈವೇದ್ಯವು, ಇದು - ಇಂತಪ್ಪುದು, ತಥ್ಯಂ - ನಿಶ್ಚಯು, ಅದಲ್ಲದೆ - ಅದಂ ಬಿಟ್ಟು, ಬೇರೆ - ಪೃಥಕ್ಕಾಗಿ, ಮೊಸಲಾದ - ಕೈದುಡುಕದ, ಅನ್ನಮುಂ - ಅನ್ನವೂ, ಅಂಬುವುಂ - ಉದಕವೂ, ಜಗದೊಳ್ - ಲೋಕದಲ್ಲಿ, ಉಂಟೆ ? - ಇಲ್ಲ, ಜಗತ್ತಿನಲ್ಲಿರ್ಪ ಉದಕಂಗಳೆಲ್ಲವೂ ಓಷಧಿಗಳೆಲ್ಲವೂ ಶಿವನ ಪಾದೋದಕ ಪ್ರಸಾದಗಳೆಂಬುದರ್ಥ.

**ಭಾವಾರ್ಥಬೋಧಿನಿ :** ಯಥೋಚಿತಭಕ್ತಿಭಾವದಿಂದ ಕೂಡಿದ ಶರಣನ ಮನದಲ್ಲಿ ಸಾಕ್ಷಾತ್ಕರಿಸಿದ ಪರಮಪ್ರಭುವೆ, ನಿನ್ನ ಪಾದತೀರ್ಥವೇ ನಿನಗೆ ಅಭಿಷೇಕ ಜಲವಾಗಿರುವುದು. ನಿನ್ನ ಪ್ರಸಾದವೆಂಬ ದಿವ್ಯಾನ್ನವೇ ನಿನಗೆ ನೈವೇದ್ಯವಾಗಿರುವುದು. ಇದು ನಿಶ್ಚಯ. ಹೀಗಲ್ಲದೆ ಬೇರೆಯಾಗಿ ಮೊಸಲಾದ ಅನ್ನೋದಕಗಳು ಜಗತ್ತಿನಲ್ಲಿರುವುದುಂಟೆ ? ಇಲ್ಲ. (ಜಗತ್ತಿನಲ್ಲಿರುವ ಉದಕವೂ ಅನ್ನಾದಿಪದಾರ್ಥವೂ ಶಿವನ ತೀರ್ಥಪ್ರಸಾದಗಳಾಗಿರುವವೆಂದು ಭಾವ.) ೫೮.

**ಅವತಾರಿಕೆ :** ಸಹಜ ಲಿಂಗೈಕ್ಯತ್ವಮಂ ಮುಂದೆ ಪೇಳುತ್ತಿರ್ದಪಂ.

## ಉತ್ಪಲಮಾಲಾವೃತ್ತಂ

ಛಾಯುಮೆ ರೂಪಮಾಗಿ ವರರೂಪಮೆ ನೋಳ್ಪೊಡೆಯಲ್ಲಿ ನಿರ್ಮಳ
ಚ್ಛಾಯಮದಾಗಿ ಜೀವಮೆ ನಿರಂಶಕದಿಂ ಸಲೆ ಕಾಯಮಾಗಿ ತ
ತ್ಕಾಯಮೆ ಜೀವಮಾಗಿ ನಿರುಪಾಧಿಕಲಿಂಗನಿಜಾಂಗಸಂಗ ನಿ
ರ್ಮಾಯತೆಯೊಗ ಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ೫೯

**ಟೀಕೆ :** ಛಾಯುಮೆ-ಪ್ರತಿಬಿಂಬವೇ, ರೂಪಮಾಗಿ-ಬಿಂಬವಾಗಿ, ವರರೂಪಮೆ-ಆ ಶ್ರೇಷ್ಠವಾದ ಬಿಂಬವೇ, ನೋಳ್ಪೊಡೆ - ವಿಚಾರಿಸಿದೊಡೆ, ಅಲ್ಲಿ - ಆ ಸ್ಥಳದಲ್ಲಿ, ಅದು - ಅದು ತಾನು, ನಿರ್ಮಳಚ್ಛಾಯಮಾಗಿ-ಸ್ವಚ್ಛವಾದ ಪ್ರತಿಬಿಂಬವಾಗಿ, (ಇಹುದೆಂತಂತೆ) ಜೀವಮೆ - ಜೀವನೇ, ನಿರಂಶಕದಿಂ - ನಿರವಯುವತ್ವದಿಂದ, ಸಲೆ - ಚೆನ್ನಾಗಿ, ಕಾಯಮಾಗಿ - ಶರೀರಮಾಗಿ, ತತ್ಕಾಯಮೇ- ಆ ದೇಹವೇ, ಜೀವಮಾಗಿ-ಜೀವಸ್ವರೂಪವಾಗಿ, (ಇಹುದು) ನಿರುಪಾಧಿಕ ಲಿಂಗ ಸಿಜಾಂಗಸಂಗನಿರ್ಮಾಯತೆಯೊಗ - ನಿರುಪಾಧಿಕ - ಇದು ಜೀವವಿದುಕಾಯವೆಂಬ ಉಪಾಧಿಯಿಲ್ಲದ, ಲಿಂಗ ನಿಜಾಂಗ ಸಂಗ - ಸಹಜವಾದಂಗಲಿಂಗ ಸಂಬಂಧದಲ್ಲಿ, ನಿರ್ಮಾಯತೆಯೊಗ - ಮಾಯೆಯಿಲ್ಲದಿಹುದೀಗವೇ ಭಕ್ತಿ - ಭಕ್ತಿಯು, (ಈ ಅರ್ಥದಲ್ಲಿ—

"ತಸ್ಯಾಭಿಧ್ಯಾನಾದ್ಯೋಜನಾತ್ತತ್ವ ಭಾವಾದ್ಭೂಯಸ್ಯಾಂತೇ
ವಿಶ್ವಮಾಯಾನಿವೃತ್ತಿಃ"

ಎಂದು ಶ್ವೇತಾಶ್ವತರೋಪನಿಷತ್ತುಂಟಾಗಿ).

**ಭಾವಾರ್ಥಬೋಧಿನಿ :** ಛಾಯಾರೂಪವಾದ ಪ್ರತಿಬಿಂಬವೇ ರೂಪವುಳ್ಳ ಬಿಂಬವಾಗಿರುವುದು. ಆ ಬಿಂಬವೇ ವಿಚಾರ ಮಾಡಿ ನೋಡಿದರೆ ಪ್ರತಿಬಿಂಬವಾಗಿರುವುದು. ಇದರಂತೆ ಜೀವವೇ ನಿರವಯುತ್ವದಿಂದ ಕಾಯವಾಗಿ (ಲಿಂಗದ ಅಂಗವಾಗಿ) ರುವುದು. ಮತ್ತು ಆ ಕಾಯವೇ ಜೀವವಾಗಿ (ಶಿವಾಂಶರೂಪವಾಗಿ) ರುವುದು. ಇದು ಜೀವವು ಇದು ಕಾಯವು ಎಂಬ ಉಪಾಧಿಯಿಲ್ಲದ ಸಹಜವಾದ ಅಂಗದ ಮತ್ತು ಲಿಂಗದ ಸಂಬಂಧದಲ್ಲಿ (ಸಮರಸಭಾವದಲ್ಲಿ) ಮಾಯೆಯಿಲ್ಲದೆ ಇರುವುದೇ (ಲಿಂಗಾಂಗಗಳಿಗೆ ಭೇದವಿಲ್ಲದಂತಿರುವುದೇ) ಭಕ್ತಿಯು (ಸಮರಸಭಕ್ತಿಯು).

**ವಿಚಾರ :** ಬಿಂಬವು ಕನ್ನಡಿಯಲ್ಲಿ ತೋರಿದಾಗ ಅದರ ಪ್ರತಿಬಿಂಬವು ಕಾಣುವುದು. ಹೀಗೆ ಕಂಡರೂ ಬಿಂಬಕ್ಕೂ ಪ್ರತಿಬಿಂಬಕ್ಕೂ ಭೇದವಿಲ್ಲವಷ್ಟೆ ಇದರಂತೆ



ಜೀವಾತ್ಮನಿಗೂ ಅಂಗಕ್ಕೂ ಭೇದವಿಲ್ಲ. ಇಲ್ಲಿ ಅಂಗವೆಂದರೆ ಲಿಂಗದ ಅಂಗವೆಂಬು ದನ್ನು ಗ್ರಹಿಸಬೇಕು. "ಸೋಽಯಮಾತ್ಮಾ ಶಿವಾಂಗಂ ಸ್ಯಾಚ್ಛಿವೇನಾಙ್ಗೀಕೃತತ್ವತಃ" ಎಂಬುಕ್ತಿಯಂತೆ ಜೀವಾತ್ಮನೇ ಲಿಂಗದ ಅಂಗವಾಗಿರುವನು. ಮತ್ತು ಜೀವಾತ್ಮ ಸ್ವರೂಪವಾದ ಅಂಗಕ್ಕೂ ಆ ಅಂಗದಲ್ಲಿ ಇಂಬುಗೊಂಡಿರುವ ಲಿಂಗಕ್ಕೂ ಭೇದವಿಲ್ಲ ದಂತೆ ಒಂದುಗೂಡುವುದೇ (ಸಮರಸವಾಗುವುದೇ) ಸಮರಸಭಕ್ತಿಯೆನಿಸುವುದು.

## ಉತ್ಪಲಮಾಲಾವೃತ್ತಂ

ರುದ್ರಪದಂ ಗಣೇಶ್ವರಪದಂ ಮೊದಲಾದ ಸಮಸ್ತ ಸಂಪದಂ
ಕ್ಷುದ್ರತರಂ ಶಿವಾಂಗ ಶಿವಲಿಂಗ ನಿಜೈಕ್ಯಸುಖಾಸ್ಪದಂಗೆ ಸಂ
ವಿದ್ರುಚಿರಾತ್ಮಕಂಗೆ ಸಮಖಂಡಿತ ಖಂಡಿತ ಕಾಯಜೀವದಿಂ
ಮುದ್ರಿತನಾದವಂಗೆ ಪರಮಪ್ರಭುವೇ ಮಹದೈಪುರೀಶ್ವರಾ ೬೧

**ಟೀಕೆ :** ಶಿವಾಂಗಶಿವಲಿಂಗ ನಿಜೈಕ್ಯಸುಖಾಸ್ಪದಂಗೆ - ಶಿವಾಂಗ - ಶಿವ ಸ್ವರೂಪವಾದಂಗವ, ಶಿವಲಿಂಗ - ಮಹಾಲಿಂಗದ, ನಿಜ - ಸಹಜವಾದ, ಐಕ್ಯ ಸುಖ - ಸಾಮರಸ್ಯದ ಪರಿಣಾಮಕ್ಕೆ, ಆಸ್ಪದಂಗೆ - ಸ್ಥಾನವಾದಾತನಾದ, ಸಂವಿದ್ರು ಚಿರಾತ್ಮಕಂಗೆ - ಸಂವಿತ್ - ಜ್ಞಾನದಿಂ, ರುಚಿರ - ಒಪ್ಪುತ್ತಿರ್ಪ, ಆತ್ಮಕಂಗೆ - ಸ್ವರೂಪವುಳ್ಳಾತನಾದ, ಸಮಖಂಡಿತಖಂಡಿತಕಾಯಜೀವದಿಂ - ಸಮ್ - ಸಮ್ಯ ಕ್ಕಾದ, ಅಖಂಡಿತ - ಮಹಾಲಿಂಗವೆಂಬ, ಖಂಡಿತ - ಇಷ್ಟಲಿಂಗವೆಂಬ, ಕಾಯ ಜೀವದಿಂ - ಪ್ರಾಣದೇಹಗಳಿಂದ, ಮುದ್ರಿತನಾದವಂಗೆ – ಕಟ್ಟುವಡೆಯಲ್ಪಟ್ಟ ಶರಣಂಗೆ, ರುದ್ರಪದಂ - ರುದ್ರಪದವು, ಗಣೇಶ್ವರಪದಂ - ಪ್ರಮಥಗಣಪದವು, ಮೊದಲಾದ - ಆದಿಯಾದ, ಸಮಸ್ತಸಂಪದಂ - ಬಹಳವಾದ ಸಂಪದಂಗಳು, ಕ್ಷುದ್ರತರಂ - ಅತ್ಯಂತನಿಕೃಷ್ಟವು.

**ಭಾವಾರ್ಥಬೋಧಿನಿ :** ಶಿವಸ್ವರೂಪವಾದ ತನ್ನಂಗ ಮತ್ತು ಶಿವಲಿಂಗ ಇವುಗಳ ಸಹಜ ಸಾಮರಸ್ಯದಿಂದುಂಟಾದ ಸುಖವನುಳ್ಳವನೂ, ಶಿವಜ್ಞಾನಸ್ವರೂ- ಪನೂ, ಮಹಾಲಿಂಗ - ಇಷ್ಟಲಿಂಗಗಳೇ ಪ್ರಾಣದೇಹಗಳಾಗಿ ಉಳ್ಳವನೂ ಆದ ಶಿವಶರಣನಿಗೆ ರುದ್ರಪದವಿ, ಪ್ರಮಥಪದವಿ ಮೊದಲಾದ ಪದವಿಗಳು ಅತ್ಯಂತ ನಿಕೃಷ್ಟವಾಗಿರುವವು. ೬೦

## ಉತ್ಪಲಮಾಲಾವೃತ್ತಂ

ಆದಿಯನಾದಿ ಮಧ್ಯಮವಸಾನಮೆನಿಪ್ಪವ ನೊಂದುಗೂಡಿ ಸಾ
ಕ್ಷಾದಮೃತಪ್ರಸಾದಪರಿಪೂರ್ಣ ಭವತ್ಕರುಣಾಲಸತ್ಕಟಾ
ಕ್ಷೋದಯ ಮಾರಿಗಾದಪುದವರ್ಗರಿದೇ ಶಿವಯೋಗಸಿದ್ಧಿ ನಿ
ರ್ಭೇದಸುಖಾಭಿವೃದ್ಧಿ ಪರಮಪ್ರಭುವೇ ಮಹದೈಪುರೀಶ್ವರಾ ೬೧

**ಟೀಕೆ :** ಆದಿ - ದೇಹವು, ಅನಾದಿ - ಆತ್ಮವು, ಮಧ್ಯಂ - ಕರಣಾದಿಗಳು, ಅವಸಾನಮೆನಿಪ್ಪವಂ - ಕಡೆಯಾಗಿರ್ಪವನೆಲ್ಲವಂ, ಒಂದುಗೂಡಿ - ಲಿಂಗದಲ್ಲಿ ಸಮರಸಂ ಮಾಡಿ, ಸಾಕ್ಷಾತ್……… ದಯಂ - ಸಾಕ್ಷಾತ್ - ಪ್ರತ್ಯಕ್ಷವಾದ, ಅಮೃತ - ಅಮೃತಸ್ವರೂಪವಾದ, ಪ್ರಸಾದ - ಅನುಗ್ರಹದಿಂ, ಪರಿಪೂರ್ಣ - ತುಂಬಲ್ಪಟ್ಟ, ಭವತ್ - ನಿನ್ನ, ಕರುಣಾ - ಕೃಪೆಯಿಂದ, ಲಸತ್ - ಒಪ್ಪುತ್ತಿರ್ಪ, ಕಟಾಕ್ಷ - ಕಡೆಗಣ್ಣಿನ ನೋಟವ, ಉದಯಂ - ಅಂಕುರವು, ಆರಿಗೆ - ಆವಾತಂಗೆ, ಆದಪುದು - ಅಹುದು, ಅವರ್ಗೆ - ಅವರುಗಳಿಗೆ, ಶಿವಯೋಗಸಿದ್ಧಿನಿರ್ಭೇದಸುಖಾಭಿವೃದ್ಧಿ - ಶಿವಯೋಗಸಿದ್ಧಿ - ಶಿವಸಾಮರಸ್ಯದ ಸಿದ್ಧಿಯಲ್ಲಿಯ, ನಿರ್ಭೇದ - ಭೇದವಿಲ್ಲದ, ಸುಖ - ಆನಂದದ, ಅಭಿವೃದ್ಧಿ - ಪೆರ್ಚುಗೆ, ಅರಿದೆ - ಅಸಾಧ್ಯವೆ? ಅಲ್ಲ.

**ಭಾವಾರ್ಥಬೋಧಿನಿ :** ಪರಮಾತ್ಮನೆ, ಯಾರು ತಮ್ಮ ದೇಹಾತ್ಮಕರಣಾದಿಗಳನ್ನು ಲಿಂಗದಲ್ಲಿ ಒಂದುಗೂಡಿಸಿ (ಸಮರಸವ ಮಾಡಿ) ಪ್ರತ್ಯಕ್ಷವಾದ ಮತ್ತು ಅಮೃತಸ್ವರೂಪವಾದ ಅನುಗ್ರಹದಿಂದ ಪೂರ್ಣವಾದ ಭವತ್ಕರುಣಾಕಟಾಕ್ಷಕ್ಕೆ ಪಾತ್ರರಾಗಿರುವರೋ; ಅವರಿಗೆ ಲಿಂಗಾಂಗಸಾಮರಸ್ಯ ಸಿದ್ಧಿಯಲ್ಲಿಯ ಅಖಂಡಾನಂದದ ಸಮೃದ್ಧಿಯು ದೊರೆಯುವುದು ಅಸಾಧ್ಯವೇನು ? ಅಸಾಧ್ಯವಲ್ಲ ? ೬೧

## ಉತ್ಪಲಮಾಲಾವೃತ್ತಂ

ಎಲ್ಲಿಯು ಮುಕ್ತಿಯೆಲ್ಲಿಯ ಪರಾಗತಿ ಯೆಲ್ಲಿಯ ಪಾರಲೌಕಿಕಂ
ನಿಲ್ಲು ಷಡಂಗಲಿಂಗಮುಖಖಂಡಿತಜೀವಶರೀರಯೋಗದಿಂ
ಪಲ್ಲಟಮಾಗಿ ಪೂರ್ವತನು ಪೋಗಿ ನಿಜೈಕ್ಯ ವಿಶೇಷವಲ್ಲಿ ತಾಂ
ನಿಲ್ಲದೆ ನಿಂದವಂಗೆ ಪರಮಪ್ರಭುವೇ ಮಹದೈಪುರೀಶ್ವರಾ ೬೨

**ಟೀಕೆ :** ಷಡಂಗ ... ... ಯೋಗದಿಂ - ಷಡಂಗ - ಭಕ್ತ್ಯಾದ್ಯಂಗವಾದರ, ಲಿಂಗ - ಆಚಾರಾದಿ ಲಿಂಗವಾದರ, ಮುಖ - ಮುಖದಿಂದೆ, ಖಂಡಿತ - ಬೇರ್ಪಡಿಸಲ್ಪಟ್ಟ, ಜೀವಶರೀರಯೋಗದಿಂ - ತನುಜೀವಸಂಬಂಧದಿಂದ, ಪಲ್ಲಟಮಾಗಿ - ವ್ಯತ್ಯಸ್ತವಾಗಿ, ಪೂರ್ವತನು - ಮೊದಲ ಕಾಯವು, ಪೋಗಿ - ಅಳಿದು, ನಿಜೈಕ್ಯ ವಿಶೇಷದಲ್ಲಿ - ನಿಜಲಿಂಗೈಕ್ಯವೆಂಬ ವಿಶೇಷದಲ್ಲಿ, ತಾಂ - ತಾನು, ನಿಲ್ಲದೆ ನಿಂದವಂಗೆ - ತಳುವಿಲ್ಲದೆ ನಿಂದ ಶರಣಂಗೆ, ಎಲ್ಲಿಯ ಮುಕ್ತಿ - ಮೋಕ್ಷವೆಲ್ಲಿಯದು ? ಎಲ್ಲಿಯ ಪರಾಗತಿ - ಎಲ್ಲಿಯ ಉತ್ಕೃಷ್ಟವಾದ ಗತಿ ? ಎಲ್ಲಿಯ ಪಾರಲೌಕಿಕಂ - ಪರಲೌಕಿಕ ವ್ಯಾಪಾರವೆಲ್ಲಿಯದು ? ನಿಲ್ಲು - ಸಾಕು, (ಈ ಅರ್ಥದಲ್ಲಿ – ನನಿರೋಧೋ ನ ಚೋತ್ಪತ್ತಿರ್ನಬದ್ಧೋನಚಸಾಧಕಃ|| ನಮುಮುಕ್ಷುರ್ನವಾಮುಕ್ತ ಇತ್ಯೇಷಾಪರಮಾರ್ಥತಾ” ಎಂದು ಅಮೃತ ಬಿಂದೂಪನಿಷತ್ತುಂಟಾಗಿ.

**ಭಾವಾರ್ಥಬೋಧಿನಿ :** ಪರಮಪ್ರಭುವೆ, ತನ್ನ ದೇಹವು - ಭಕ್ತಾದಿಯಾದ ಆರು ಅಂಗಸ್ಥಲವಾಗಿಯೂ, ತನ್ನ ಆತ್ಮವು - ಆಚಾರಾದಿಯಾದ ಆರು ಲಿಂಗಸ್ಥಲವಾಗಿಯೂ ಭೇದಗೊಂಡು ವಿಸ್ತಾರವಾಗಲಾಗಿ - ಪೂರ್ವದ (ದೀಕ್ಷಾಪೂರ್ವದ) ದೇಹಧರ್ಮವು (ಪ್ರಾಕೃತ ಭಾವವು) ನಾಶವಾಗಿ, ಲಿಂಗಾಂಗಸಾಮರಸ್ಯ ಸ್ಥಲದಲ್ಲಿ ನಿಂದ ಶಿವಶರಣನಿಗೆ ಮೋಕ್ಷವೆಲ್ಲಿಯದು ? ಉತ್ತಮಗತಿಯೆಲ್ಲಿಯದು ? ಪರಲೋಕವ್ಯಾಪಾರವೆಲ್ಲಿಯದು? ಸಾಕು (ಇವೆಲ್ಲವುಗಳೂ ಶರಣನಿಗೆ ಬೇಕಿಲ್ಲವೆಂದು ತಾತ್ಪರ್ಯ) ೬೨

**ಉತ್ಪಲಮಾಲಾವೃತ್ತಂ**

ಉಸುರೆಡೆಯಾಟಮೋ ಕರಗಸಂ ಕೊರೆವಲ್ಲಿ ಶರೀರಜೀವದಾ
ಬೆಸುಗೆಯ ನೆಯ್ದೆ ಬಿಚ್ಚಿ ಬಿಸುಟಂತದರೈಕ್ಯಮನಾರು ಬಲ್ಲರಾ
ಉಸುರುಮ ನಾಶರೀರಮುಮನಾಘನಜೀವಮನೊಂದುಗೂಡಿ ರಾ
ಜಿಸುವುದೆ ನಿನ್ನಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ೬೩

**ಟೀಕೆ :** ಶರೀರಜೀವದ - ಕಾಯಜೀವಂಗಳ, ಆ ಬೆಸುಗೆಯಂ - ಆ ಪೊರ್ದುಗೆಯನು, ಎಯ್ದೆ - ಚೆನ್ನಾಗಿ, ಬಿಚ್ಚಿಬಿಸುಟಂತೆ - ಬೇರ್ಪಡಿಸಿ ಕಡೆಗೆ ಬಿಸುಟಂತೆ, ಕೊರೆವಲ್ಲಿ - ಕೊಯ್ವಲ್ಲಿ, ಉಸುರೆಡೆಯಾಟವೆ - ಪ್ರಾಣವಾಯುವಿನ

ಸಂಚಾರವೇ, ಕರಗಸಂ - ಕ್ರಕಚವು, ಅದರ್ಯ್ಕೈವಮಂ - ಆ ಕಾಯ ಜೀವ ಪ್ರಾಣ ಕೂಟವನು, ಆರುಬಲ್ಲರು - ಬಲ್ಲವರಾರು? ಆ ಉಸುರುಮಂ - ಆ ಪ್ರಾಣ-ವಾಯುವನೂ, ಆ ಶರೀರಮುಮಂ - ಆ ಕಾಯವನೂ, ಆ ಘನಜೀವಮಂ - ಆ ದೊಡ್ಡಿತ್ತಾದ ಜೀವವನೂ, ಒಂದುಗೂಡಿ - ಲಿಂಗದಲ್ಲಿ ಸೇರಿಸಿ, ರಾಜಿಸುವುದೆ - ಒಪ್ಪುತ್ತಿರ್ಪುದೇ, ನಿನ್ನಭಕ್ತಿ - ಎಲೆ ಶಿವನೆ ನಿನ್ನ ಭಕ್ತಿಯು.

**ಭಾವಾರ್ಥಬೋಧಿನಿ :** ಶಿವನೆ, ದೇಹಕ್ಕೂ ಜೀವಕ್ಕೂ ಇರುವ ಬೆಸುಗೆ-ಯನ್ನು ಬಿಚ್ಚಿ ಹಾಕುವುದಕ್ಕೆ ಸಾಧನವಾದ ಕೊರೆಯುವ ಕರಗಸವಾಗಿರುವುದು ಪ್ರಾಣವಾಯು (ಶ್ವಾಸೋಚ್ಛ್ವಾಸರೂಪವಾದ ಉಸಿರು.) ಆ ದೇಹ-ಜೀವ-ಪ್ರಾಣ ಇವುಗಳು ಕೂಡಿರುವಂತೆ ಮಾಡುವ ಮಾಟವನ್ನು ಯಾರು ಬಲ್ಲರು ? ಆದರೆ ದೇಹ-ಜೀವ-ಪ್ರಾಣತ್ರಯವನ್ನು ಲಿಂಗದಲ್ಲಿ ಲೀನಗೊಳಿಸಿ ಶೋಭಿಸುತ್ತಿರುವುದು ನಿನ್ನಲ್ಲಿಟ್ಟ ಭಕ್ತಿಯು. (ಎಂದರೆ - ಶಿವಶರಣನು ಸಮರಸಭಕ್ತಿಶಕ್ತಿಯಿಂದ ತನ್ನ ದೇಹಾತ್ಮ ಪ್ರಾಣಗಳನ್ನು ಬಿಚ್ಚಿ ಬೇರಾಗದಂತೆ ಲಿಂಗದಲ್ಲಿ ಲೀನಗೊಳಿಸುವನು - ಲಿಂಗಸ್ವರೂಪ ವಾಗಿಸುವನು - ಎಂದು ತಾತ್ಪರ್ಯ) ೬೩

**ಚಂಪಕಮಾಲಾವೃತ್ತಂ**

ಕಡೆದಿಳುಹಿಟ್ಟ ಕಪ್ಪುರದ ಪುತ್ತಳಿಯಂತೆಸೆವಂಗಸಂಗದೊ
ಳ್ಗಡಣಿಸಿ ತೋರ್ಪ ತತ್ಪರಿಮಳಾಕೃತಿಯಂದದೆ ಲಿಂಗಸಂಗ ಮೊ
ಗ್ಗೊಡೆಯದೆ ರಮ್ಯಮಾಗಿ ಶಿವಲಿಂಗನಿಜಾಂಗದ ಸಂಗಸೌಖ್ಯಮಂ
ಪಡೆದಿಹುದೀಗಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ೬೪

**ಟೀಕೆ :** ಕಡೆದು - ಶುದ್ಧಮಂತದಿಂ ಕಡೆದು, ಇಳುಹಿಟ್ಟ - ಕಡೆಗೆ ಇರಿಸಿದ, ಕಪ್ಪುರದ - ಕರ್ಪೂರದ, ಪುತ್ತಳಿಯಂತೆ - ಬೊಂಬೆಯಂತೆ, ಎಸೆವ - ಒಪ್ಪುತ್ತಿರ್ಪ, ಅಂಗಸಂಗದೊಳ್ - ಶರೀರಸಂಬಂಧದಲ್ಲಿ, ಗಡಣಿಸಿ - ವ್ಯಾಪಿಸಿ ಕೊಂಡು, ತೋರ್ಪ - ತೋರುವಂಥ, ತತ್ಪರಿಮಳಾಕೃತಿಯಂದದೆ - ಆ ಪರಿಮಳದ ಆಕಾರದಂತೆ, ಲಿಂಗಸಂಗಂ - ಲಿಂಗಾಂಗಸಂಬಂಧವು, ಒಗ್ಗೊಡೆಯದೆ - ಬೇರಾ ಗದೆ, ರಮ್ಯವಾಗಿ - ಮನೋಹರವಾಗಿ, ಶಿವಲಿಂಗನಿಜಾಂಗದ - ಲಿಂಗಾಂಗಗಳ,

ಸಂಗ - ಸಂಬಂಧವಲ್ಲಿಯು, ಸೌಖ್ಯಮಂ - ಪರಿಣಾಮವನು, ಪಡೆದಿಹುದೀಗ - ಪಡೆದಿರ್ಪುದೀಗ, ಭಕ್ತಿ - ಶಿವಭಕ್ತಿಯು.

**ಭಾವಾರ್ಥಬೋಧಿನಿ :** ಕಡೆದು ಮಾಡಿಟ್ಟ ಕರ್ಪೂರದ ಬೊಂಬೆಯಂತಿರುವುದು ಶರಣನ ಶರೀರವು. ಕರ್ಪೂರದ ಬೊಂಬೆಯಲ್ಲಿ ವ್ಯಾಪಿಸಿಕೊಂಡಿರುವ ಸುಗಂಧದಂತೆ ಶರಣನ ಅಂಗದಲ್ಲಿ ಎಡೆಬಿಡದೆ ಲಿಂಗವು (ಲಿಂಗಗುಣವು) ತುಂಬಿರುವುದು. ಹೀಗೆ ಒಂದನ್ನೊಂದು ಬಿಡದಿರುವ ಅಂಗಲಿಂಗಗಳ ಸಾಮರಸ್ಯದಿಂದ ಲಭಿಸುವ ಸೌಖ್ಯವನ್ನನುಭವಿಸುವುದೇ ಆ ಶರಣನ ಶಿವಭಕ್ತಿಯಾಗಿರುವುದು. ೬೪

**ಚಂಪಕಮಾಲಾವೃತ್ತಂ**

ಸ್ಫಟಿಕಘಟಪ್ರದೀಪದವೊಲಂಗದ ಲಿಂಗದ ಸಂಗದೈಕ್ಯ ಸಂ
ಘಟಿತ ವಿಭೇದವರ್ಜ ವಿಮಳಾಕೃತಿವೆತ್ತ ವಿಲಾಸದೇಳ್ಗೆಯಿಂ
ನಟಿಯಿಸಿ ತೋರ್ಪ ಮೂರ್ತಿವಿಡಿದೊಪ್ಪುವ ಶಾಂಭವಯೋಗಸಿದ್ಧಿ ತಾಂ
ದಿಟಮಹುದೀಗ ಭಕ್ತಿ ಪರಮಪ್ರಭುವೇ ಮಹದೈವುರೀಶ್ವರಾ ೬೫

**ಟೀಕೆ :** ಸ್ಫಟಿಕಘಟಪ್ರದೀಪದವೊಲ್ - ಸ್ಫಟಿಕಘಟ - ಪಳುಕಿನ ಕೊಡದಲ್ಲಿಯು, ಪ್ರದೀಪದವೊಲ್ - ಪ್ರಕಾಶಿಸುವ ದೀಪದ ಹಾಂಗೆ, ಅಂಗದ - ತನ್ನಂಗದ, ಲಿಂಗದ - ಶಿವಲಿಂಗದ, ಸಂಗದ - ಸಂಬಂಧದ, ಐಕ್ಯಸಂಘಟಿತವಿಭೇದವರ್ಜವಿಮಳಾಕೃತಿವೆತ್ತ - ಐಕ್ಯ - ಸಮರಸದಲ್ಲಿ, ಸಂಘಟಿತ - ಕೂಡಿಸಲ್ಪಟ್ಟ, ವಿಭೇದ - ಭೇದವು, ವರ್ಜ - ಇಲ್ಲದ, ವಿಮಲ - ನಿರ್ಮಳವಾದ, ಆಕೃತಿವೆತ್ತ - ಆಕಾರವ ತಳೆದ, ವಿಲಾಸದ - ಲೀಲೆಯ, ಏಳ್ಗೆಯಿಂ - ಪೆರ್ಚುಗೆಯಿಂದೆ, ನಟಿಯಿಸಿ - ನರ್ತಿಸಿ, ತೋರ್ಪ - ಕಾಣಿಸುವ, ಮೂರ್ತಿವಿಡಿದು - ಆಕಾರವಿಡಿದು, ಒಪ್ಪುವ - ರಂಜಿಸುವ, ಶಾಂಭವಯೋಗಸಿದ್ಧಿ - ಶಿವಸಾಮರಸ್ಯದಸಿದ್ಧಿಯು, ತಾನೀಗ - ಅದು ತಾನೀಗಳೇ, ಭಕ್ತಿ - ಭಕ್ತಿಯು, ದಿಟಮಹುದು - ಇದು ನಿಶ್ಚಯವಪ್ಪುದು.

**ಭಾವಾರ್ಥಬೋಧಿನಿ :** ಪರಶಿವನೆ, ಪಳುಕಿನ ಕೊಡದಲ್ಲಿಯ ಪ್ರಕಾಶಿಸುವ ದೀಪದಂತೆ - ಎಂದರೆ - ಆ ಕೊಡದಲ್ಲಿಯ ದೀಪವು ಒಳಹೊರಗೊಂದಾಗಿ ಬೆಳಗು-

ವಂತೆ - ಅಂಗಲಿಂಗಸಂಬಂಧವಾದಲ್ಲಿ - ಅಂಗದಲ್ಲಿ ಲಿಂಗಪ್ರಕಾಶವು ಒಳಹೊರ-ಗೊಂದಾಗಿ ಹೊಳೆಯುತ್ತಿರಲು - ಈ ರೀತಿಯಾದ ಲಿಂಗಮಯ ಶರೀರದ ಲೀಲೆ-ವಿಡಿದೊಪ್ಪುವ ಅಂಗಲಿಂಗಸಾಮರಸ್ಯದ ಸಿದ್ಧಿಯೇ ಶಿವಭಕ್ತಿಯೆನಿಸಿರುವುದು. ಇದು ನಿಶ್ಚಯ. ೬೫

**ಚಂಪಕಮಾಲಾವೃತ್ತಂ**

ಗಗನದೊಳಿಂದ್ರಚಾಪ ಮತುಳಾನಿಲನೊಳ್ಸುಳಿ ದೀಪ್ತವಹ್ನಿಯೊ
ಳ್ಸೊಗಯಿಪ ತತ್ಕಣಂ ಸಲಿಲದೊಳ್ಕರಕಂ ಮಹಿಯೊಳ್ಮಹಿಷ್ಠಪಾಂ
ಸುಗತವಹಂತೆ ಲಿಂಗದೊಳ ಭಿನ್ನತೆಯಿಂ ಗತಮಪ್ಪ ನಿರ್ಮಲಾಂ
ಗಗುಣ ಮದೀಗಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ೬೬

**ಟೀಕೆ :** ಗಗನದೊಳ್ - ಆಕಾಶದಲ್ಲಿ, ಇಂದ್ರಚಾಪಂ - ಇಂದ್ರಧನುವಿನಂತೆ, ಅತುಳಾನಿಲನೊಳ್ - ಘನವಾದ ಗಾಳಿಯಲ್ಲಿ, ಸುಳಿ - ಸುಳಿಗಾಳಿಯಂತೆ, ದೀಪ್ತ ವಹ್ನಿಯೊಳ್ - ದೀಪ್ತ - ಪ್ರಕಾಶಿಸುವ, ವಹ್ನಿಯೊಳ್ - ಅಗ್ನಿಯಲ್ಲಿ, ಸೊಗಯಿಪ-ರಂಜಿಸುವಂಥ, ತತ್ಕಣಂ - ಆ ಅಗ್ನಿಯಕಿಡಿಯಂತೆ, ಸಲಿಲದೊಳ್ - ಉದಕದಲ್ಲಿ, ಕರಕಂ - ವಾರಿಶಿಲೆಯಂತೆ, ಮಹಿಯೊಳ್ - ಭೂಮಿಯಲ್ಲಿ, ಮಹಿಷ್ಠ - ಬಹುವಾಗಿರುವ, ಪಾಂಸು - ಧೂಳಿಯು, ಗತವಹಂತೆ – ಅಡಗುವಂತೆ, ಲಿಂಗದೊಳ್ - ಮಹಾಲಿಂಗದಲ್ಲಿ, ಅಭಿನ್ನತೆಯಿಂ - ಬೇರಿಲ್ಲದಿರ್ಪುವರಿಂದೆ, ಗತಮಪ್ಪ - ಅಡಗುವಂಥ, ನಿರ್ಮಲಾಂಗಗುಣಂ - ನಿರ್ಮಲವಾದ ದೇಹಗುಣವು, ಅದೀಗ - ಅದು ತಾನೀಗ, ಭಕ್ತಿ - ಶಿವಭಕ್ತಿಯು (ಈ ಅರ್ಥವಲ್ಲಿ—

"ವ್ಯತ್ಸಿಂಡಮೇ ಘೋಪಲವಿಸ್ಫುಲಿಂಗವರ್ತೀಂದ್ರಚಾಪಸ್ಥವಪುಃಕ್ರಮೇಣ
ಸ್ಯುಃಪಾರ್ಥಿವಾಪ್ಯಾಮಳತೇಜಸೌಖ್ಯವಾಯವ್ಯಸದ್ವ್ಯೋಮವಿಭೇದಭಿನ್ನಾಃ"

ಎಂದುಂಟಾಗಿ.)

**ಭಾವಾರ್ಥಬೋಧಿನಿ : ಆಕಾಶದಲ್ಲಿ ಇಂದ್ರಧನುಸ್ಸೂ, ದೊಡ್ಡ ಗಾಳಿಯಲ್ಲಿ ಸುಳಿಗಾಳಿಯೂ, ಉರಿಯುವ ಬೆಂಕಿಯಲ್ಲಿ ಕಿಡಿಯೂ, ನೀರಿನಲ್ಲಿ ಆಲಿಕಲ್ಲೂ, ಭೂಮಿಯಲ್ಲಿ ಅಧಿಕವಾದ ಧೂಳಿಯೂ ಹುಟ್ಟಿ, ಹುಟ್ಟಿದ ನೆಲೆಗಳಲ್ಲಿಯೇ**

ಅಡಗುವಂತೆ-ನಿರ್ಮಲವಾದ ದೇಹಗುಣವು ಮಹಾಲಿಂಗಕ್ಕೆ ಬೇರೆಯಾಗದಿರ್ದು-ಎಂದರೆ-ಅಂಗಗುಣವು ಲಿಂಗಗುಣವಾಗಿ ಪರಿಣಮಿಸಿ-ಆ ಅಂಗವು ಲಿಂಗದಲ್ಲಿ ಲೀನವಾಗುವ ಸ್ಥಿತಿಯೇ ಭಕ್ತಿಯೆನಿಸುವುದು. (ಲಿಂಗದಿಂದುದಯಿಸಿದ ಅಂಗನನ್ನು-ಲಿಂಗದಲ್ಲಿ ಲೀನಗೊಳಿಸುವ ಲಿಂಗವಾಗಿ ರೂಪುಗೊಳಿಸುವ–ವರ್ತನವೇಭಕ್ತಿಯೆನಿಸುವುದೆಂಮ ತಾತ್ಪರ್ಯ.) ೬೭

## ಚಂಪಕಮಾಲಾವೃತ್ತಂ

ಮನಮಮುವಾಕ್ಕಿನೊಳ್ವಿಮಲವಾಕ್ಯಮು ತಾಂ ಮನದೊಳ್ಮನೋವಚೋ
ಘನತರಯೋಗಮಾತನುವಿನೊಳ್ತನುವಾಸ ವಚೋಮನಸ್ಸಿನೊ
ಳ್ಸಿನೆ ತೆರಪಿಲ್ಲದಂತೆ ನೆರೆಕೂಡಿ ಪರಸ್ಪರಲೀನಮಾದ ವಾ
ಸನೆಯುಮು ತಾನೆ ಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ೬೮

**ಟೀಕೆ :** ಮನಮದು - ಮನ ತಾನದು, ವಾಕ್ಕಿನೊಳ್ - ವಾಕ್ಕಿನಲ್ಲಿ, ವಿಮಲವಾಕ್ಯಮು - ನಿರ್ಮಲವಾಕ್ಕೆಂಬುದು ತಾನು, ಮನದೊಳ್ - ಮನದಲ್ಲಿ, ಮನೋವಚೋ ಘನತರಯೋಗಂ - ಮನ - ಮನಸ್ಸಿನ, ವಚಃ - ವಾಕ್ಯದ, ಘನತರ - ದೊಡ್ಡಿತ್ತಾದ, ಯೋಗಂ - ಕೂಟವು, ಆ ತನುವಿನೊಳ್ - ಆ ದೇಹದಲ್ಲಿ, ತನುವಾಸ - ತನುವಿನ ನಿಲುಗಡೆಯು, ವಚೋಮನಸ್ಸಿನೊಳ್ - ವಾಕ್ಕಿನಲ್ಲಿಯೂ ಮನಸ್ಸಿನಲ್ಲಿಯೂ, ಸಿನೆತೆರಪಿಲ್ಲದಂತೆ -ಕಿಂಚಿತ್ತೂ ತೆರಪಿಲ್ಲದಹಾಂಗೆ, ನೆರೆಕೂಡಿ - ಚೆನ್ನಾಗಿ ಕೂಡಿ, ಪರಸ್ಪರಲೀನಮಾದ - ಅನ್ಯೋನ್ಯವಾಗಿ ಅಡಗಿದ, ವಾಸನೆ - ಸಂಸ್ಕಾರವು, ಅಮತಾನೆ -ತಾನದೀಗ, ಭಕ್ತಿ - ಶಿವಭಕ್ತಿಯು.

**ಭಾವಾರ್ಥಬೋಧಿನಿ :** ಮನಸ್ಸು ಮಾತಿನಲ್ಲಿಯೂ, ಒಳ್ಳೆಯಮಾತು ಮನದಲ್ಲಿಯೂ, ಆ ಮನಸ್ಸು ಮಾತುಗಳೆರಡೂ ಮೈಯಲ್ಲಿಯೂ, ಆ ಮೈಯೆಂಬುದು ಮನೋವಾಕ್ಕುಗಳೆರಡರಲ್ಲಿಯೂ ಕೂಡಿಕೊಂಡು, ಒಂದರಲ್ಲೊಂದು ಲೀನವಾದ ಸಂಸ್ಕಾರವೇ ಭಕ್ತಿಯೆನಿಸುವುದು. (ಎಂದರೆ-ಮನೋವಾಕ್ಕಾಯಗಳ ಏಕರೂಪವಾದ ಶುದ್ಧಪರಿವರ್ತನೆಯಿಂದುಂಟಾದ ಸಂಸ್ಕಾರವಿಶೇಷವೇ ಭಕ್ತಿಯೆಂದು ತಾತ್ಪರ್ಯ.)

## ಚಂಪಕಮಾಲಾವೃತ್ತಂ

ಮನದೊಳೆ ತೋರಿದರ್ಥಮದು ವಾಕ್ಕಿನೊಳೆಂತರಿವಂತೆ ತೋರಿತಾಂ
ಮನದೊಳೆ ವಾಕ್ಕಿನೊಳ್ಕರತಳಾಮಳಕಾಕೃತಿಯಾಗಿ ಸತ್ಯಚಿ
ದ್ಘನ ಪರಮಾರ್ಥಮುಚ್ಚಳಿಸಿ ತೋರುತಿಹಂತೆ ಮದೀಯಕಾಯದೊ
ಳ್ತನಿಮೊನೆದೋರಿಸಯ್ಯ ಪರಮಪ್ರಭುವೇ ಗುರುಮಹದೈಪುರೀಶ್ವರಾ ೬೮

**ಟೀಕೆ :** ಮನದೊಳೆ - ಮನಸ್ಸಿನಲ್ಲಿ, ತೋರಿದ - ಕಾಣಿಸಿದ, ಅರ್ಥಂ - ಅರ್ಥವು, ಅದು - ಅದುತಾನು, ವಾಕ್ಕಿನೊಳ್ - ವಾಕ್ಕಿನಲ್ಲಿ, ಎಂತು - ಹೇಗೆ, ಅರಿವಂತೆ ತೋರಿ - ತಿಳಿವಂತೆ ಕಾಣಿಸಿ, ತಾಂ - ಅದು ತಾನು, ಮನದೊಳೆ - ಮನಸ್ಸಿನಲ್ಲಿಯೂ, ವಾಕ್ಕಿನೊಳ್ - ವಾಕ್ಕಿನಲ್ಲಿಯೂ, ಕರತಳಾಮಳಕಾಕೃತಿಯಾಗಿ - ಅಂಗೈಯೊಳಗಣ ನೆಲ್ಲಿಯಕಾಯಾಕಾರವ ಹಾಂಗೆ, ಮದೀಯಕಾಯದೊಳ್ - ಎನ್ನ ಸಂಬಂಧವಾದ ಶರೀರದಲ್ಲಿ, ಸತ್ಯಚಿದ್ಘನಪರಮಾರ್ಥಂ - ಸತ್ಯಜ್ಞಾನಾನಂದಗಳಿಂದ ಸಾಂದ್ರಮಪ್ಪ ಪರಮಾರ್ಥವು, ಉಚ್ಚಳಿಸಿ - ಹೊರಹೊರಟು, ತೋರುತಿಹಂತೆ - ಕಾಣಿಸುವ ಹಾಂಗೆ, ತನಿಮೊನೆದೋರಿಸಯ್ಯ - ಚೆನ್ನಾಗಿ ತಲೆದೋರಿಸಯ್ಯ.

(ಈ ಅರ್ಥದಲ್ಲಿ —

"ಯದ್ಧಿ ಮನಸಾಧ್ಯಾಯತಿ ತದ್ವಾಚಾವದತಿ ತತ್ಕರ್ಮಣಾಕರೋತಿ "

ಎಂದು ಯಜುರ್ವೇದವುಂಟಾಗಿ).

**ಭಾವಾರ್ಥಬೋಧಿನಿ :** ಪರಶಿವನೆ, ಮನದಲ್ಲಿ ಕಾಣಿಸಿದ ಪರಮಾರ್ಥವು ವಾಕ್ಕಿನಲ್ಲಿ ಅರಿವಂತೆ ಕಾಣಿಸುವುದು. ಹೀಗೆ ಮನೋವಾಕ್ಕುಗಳೆರಡರಲ್ಲಿಯೂ ಅಂಗೈಯೊಳಗಣ ನೆಲ್ಲಿಯಕಾಯಂತೆ ಚೆನ್ನಾಗಿ ತೋರುವ ಪರಮಾರ್ಥವೇ - ಸಚ್ಚಿದಾನಂದಮಯವಾಗಿ ನನ್ನ ದೇಹವ್ಯಾಪಾರದಲ್ಲಿಯೂ ತೋರುವಂತೆ ಮಾಡಯ್ಯಾ (ಎಂದರೆ ತ್ರಿಕರಣಗಳಲ್ಲಿ ಏಕತ್ವವಾಗಿ ಅದು ಸಚ್ಚಿದಾನಂದರೂಪ ಲಿಂಗದಲ್ಲಿ ಬೆರೆಯುವಂತೆ ಮಾಡೆಂದು ಭಾವ). ೬೮

## ಚಂಪಕಮಾಲಾವೃತ್ತಂ

ಗಗನಮೊಳುಲ್ಕೆ ಬೀಳ್ವವೋಲು ನೋಡಲು ನೋಡಲಡಂಗಿ ಪೋಪ ಸೋ
ಜಿಗದ ಚಮತ್ಕೃತಿ ಪ್ರಕೃತಿಸಿದ್ಧಗುಣಾಧಿಕ ದೇಹಪಾತಮು
ರ್ವಿಗೆ ಪೊಸತಾಗಿ ಲಿಂಗದೊಳಡಂಗುವ ನಿತ್ಯಸುಖಾವಗಾಹಸಿ
ದ್ಧಿಗೆ ಸರಿನಿನ್ನಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ೬೯

**ಟೀಕೆ :** ಗಗನದೊಳ್ - ಆಕಾಶದಲ್ಲಿ, ಉಲ್ಕೆ ಬೀಳ್ವವೋಲು - ನಕ್ಷತ್ರವು ಬೀಳ್ವಹಾಂಗೆ, ನೋಡಲು ನೋಡಲ್ - ಕಾಣುತ ಕಾಣಿಸುತ್ತಿರ್ದಂತೆ, ಅಡಂಗಿ ಪೋಪ - ಅಡಗಿಹೋಗುವ, ಸೋಜಿಗದ - ಜೋದ್ಯದ, ಚಮತ್ಕೃತಿ ಪ್ರಕೃತಿಸಿದ್ಧ ಗುಣಾಧಿಕದೇಹಪಾತಂ - ಚಮತ್ಕೃತಿ – ಚಮತ್ಕಾರದ, ಪ್ರಕೃತಿಸಿದ್ಧ - ಸ್ವಭಾವ ಸಿದ್ಧವಾದ, ಗುಣ - ಗುಣದಿಂದೆ, ಅಧಿಕ - ಅಧಿಕವಾದ, ದೇಹಪಾತಂ - ಶರೀರ ನಾಶವು, ಉರ್ವಿಗೆ - ಭೂಮಿಗೆ, ಪೊಸತಾಗಿ - ನೂತನವಾಗಿ, ಲಿಂಗದೊಳ್ - ಶಿವಲಿಂಗದಲ್ಲಿ, ಅಡಂಗುವ - ಲೀನಮಪ್ಪ, ನಿತ್ಯಸುಖಾವಗಾಹಸಿದ್ಧಿಗೆ - ನಿತ್ಯ-ಸುಖ - ನಿತ್ಯಾನಂದದಲ್ಲಿಯು, ಅವಗಾಹ - ಮುಳುಂಗುವುದರ, ಸಿದ್ಧಿಗೆ - ಪ್ರಾಪ್ತಿಗೆ - ನಿನ್ನಭಕ್ತಿ - ಎಲೆ ಶಿವನೆ ನಿನ್ನ ಭಕ್ತಿಯು ಸರಿ - ಸಮವು.

**ಭಾವಾರ್ಥಬೋಧಿನಿ :** ಪರಶಿವನೆ, ಆಕಾಶದಲ್ಲಿ ಉಲ್ಕಾಪಾತವಾಗಿ, ಅದು ನೋಡುನೋಡುತ್ತಿದ್ದಂತೆಯೇ ಕಾಣಿಸದಂತೆ ಅಡಗಿ ಹೋಗುವಂತೆ ಅಡಗಿಹೋಗುವ ಸೋಜಿಗದ ಸ್ವಭಾವಸಿದ್ಧ ಗುಣವು ದೇಹಪಾತಕ್ಕೂ ಇರುವುದಷ್ಟೆ. ಈ ದೇಹ ಪಾತವು ಭೂಮಿಗೆ ಹೊಸದಾಗಿ ತೋರುವಂತೆ ಲಿಂಗದಲ್ಲಿ ಉಂಟಾಗಿ — ಎಂದರೆ ದೇಹವು ಲಿಂಗದಲ್ಲಿ ಅಡಗಿ ನಿತ್ಯಾನಂದದಲ್ಲಿ ಮುಳುಗುವ ಸಿದ್ಧಿಯನ್ನುಂಟುಮಾಡು-ವುದು ಭಕ್ತಿಯ ಗುಣವಾಗಿರುವುದು. (ಭಕ್ತರಾದ ಶಿವಶರಣರ ದೇಹೇಂದ್ರಿಯ ವ್ಯವಹಾರವು ಲಿಂಗವ್ಯವಹಾರವಾಗಿ ಪರಿಣಮಿಸಿ ನಿತ್ಯಾನಂದವನ್ನುಂಟುಮಾಡು-ವುದರಿಂದ ಅವರು ನಿತ್ಯಮುಕ್ತರಾಗಿರುವರೆಂದು ತಾತ್ಪರ್ಯ). ೬೯

**ಅವತಾರಿಕೆ :** ಇನ್ನು ಶಿವಾನುಗ್ರಹಮಂ ಪ್ರಾರ್ಥಿಸುತ್ತಿರ್ದಪಂ-

## ಉತ್ಪಲಮಾಲಾವೃತ್ತಂ

ಭವಹರ ನಿನ್ನ ಕಣ್ಣೆವೆಗಳಾಟದಿನಬ್ಜಭವಾದಿಗಳ್ಗೆ ಸಂ
ಭವಿಸುವುದುದ್ಭವಂ ಮರಣಮೆಂದೆನಲಿನ್ನು ಮನುಷ್ಯಕೀಟಜ
ನ್ಮವ ನಿರದೆಯ್ದಿ ಬಾಳುವರ ನಿತ್ಯತೆಯೇನಿವರೊಳ್ಕೃಪಾಪ್ರಸಾ
ದವನಿರದಿತ್ತು ಕಾಯಿ ಪರಮಪ್ರಭುವೇ ಮಹದೈಪುರೀಶ್ವರಾ ೭೦

**ಟೀಕೆ :** ಭೋಭವಹರ - ಎಲೆ ಸಂಸಾರಭೇದಕನೆ, ನಿನ್ನ, ಕಣ್ಣೆವೆಗಳಾಟದಿಂ- ಕಣ್ಣೆವೆಯ ಹಳಚುವಷ್ಟರೊಳಗೆ, ಅಬ್ಜಭವಾದಿಗಳ್ಗೆ-ಬ್ರಹ್ಮವಿಷ್ಣು ಮೊದಲಾದವರ್ಗೆ, ಉದ್ಭವಂ - ಉತ್ಪತ್ತಿಯು, ಮರಣಂ - ಮರಣವು, ಸಂಭವಿಸುವುದು - ಉಂಟಾಗು ವುದು, ಎಂದೆನಲ್ - ಹೀಗೆಂದೆನಲಾಗಿ, ಇನ್ನು - ಇಷ್ಟರಮೇಲೆ, ಮನುಷ್ಯಕೀಟ ಜನ್ಮವಂ - ಮಾನವಜನ್ಮವೆಂಬ ಹುಳುವಿನ ಜನ್ಮವನು, ಇರದೆ - ಬಿಡದೆ, ಎಯ್ದಿ - ಪೊರ್ದಿ, ಬಾಳುವರ - ಬದುಕುವರ, ನಿತ್ಯತೆ - ಸ್ಥಿರತ್ವವು, ಇವರೊಳ್ - ಇವರಲ್ಲಿ, ಏಂ - ಏನುಂಟು, ಕೃಪಾಪ್ರಸಾದವಂ - ನಿನ್ನ ಕಾರುಣ್ಯ ಪ್ರಸಾದವನು, ಇರದೆ - ಬಿಡದೆ, ಇತ್ತು - ಕೊಟ್ಟು, ಕಾಯಿ - ರಕ್ಷಿಸು.

**ಭಾವಾರ್ಥಬೋಧಿನಿ :** ಭವಹರನೆ, ನೀನು ಕಣ್ಣೆವೆಯನ್ನು ಮುಚ್ಚಿ ತೆಗೆ ಯುವಷ್ಟರೊಳಗೆ ಬ್ರಹ್ಮ ವಿಷ್ಣು ಮೊದಲಾದ ದೇವತೆಗಳಿಗೆ ಜನನಮರಣಗಳುಂಟಾಗು ತ್ತಿರುವವೆಂದು ಹೇಳುತ್ತಿರುವಾಗ, ಮನುಷ್ಯಜನ್ಮವೆಂಬ ಕೀಟಜನ್ಮವನ್ನು ಪಡೆದು ಜೀವಿಸುವವರ ಸ್ಥಿರತೆಯು ಎಷ್ಟರಮಟ್ಟಿಗಿರುವದು ? ಸ್ವಾಮಿ, ನಿನ್ನ ಕರುಣಾಪ್ರಸಾ ದವನ್ನು ನನಗೆ ಅನುಗ್ರಹಿಸಿ, ಬಿಡದಂತೆ ನನ್ನನ್ನು ರಕ್ಷಿಸು. ೭೦

## ಚಂಪಕಮಾಲಾವೃತ್ತಂ

ಪವನಸಮುದ್ಧತಾಂಬುರುಹ ಪತ್ರಪಯಃಕಣವಂತೆ ಚಂಚಲ
ತ್ವವ ನಿರದೆಯ್ದಿ ಜೀವಿಸುವ ಜೀವನದಲ್ಲಿ ಭವತ್ಪ್ರಸಾದಮು
ಳ್ಳವನೆ ಕೃತಾರ್ಥ ನೇಪೆನೆನಗಿಲ್ಲೆನಲೇಂ ದಯೆಗೆಯ್ವಬುದ್ಧಿ ಶಂ
ಭುವೆ ನಿನಗುಂಟೆಯಿಲ್ಲ ಪರಮಪ್ರಭುವೇ ಮಹದೈಪುರೀಶ್ವರಾ ೭೧

**ಟೀಕೆ :** ಪವನಸಮುದ್ಧತಾಂಬುರುಹಪತ್ರಪಯಃ ಕಣದಂತೆ - ಪವನ - ವಾಯುವಿನಿಂದ, ಸಮುದ್ಧತ - ಹೊಡೆಯಲ್ಪಟ್ಟ, ಅಂಬುರುಹಪತ್ರ - ತಾವರೆಯೆಲೆಯಲ್ಲಿಯ, ಪಯಃ ಕಣದಂತೆ - ಉದಕದ ಹನಿಯಂತೆ, ಚಂಚಲತ್ವಮಂ - ಚಲನೆಯನು, ಇರದೆ - ಬಿಡದೆ, ಎಯ್ದಿ - ಪೊರ್ದಿ, ಜೀವಿಸುವ - ಬದುಕುವ, ಜೀವನದಲ್ಲಿ - ಬಾಳುವುದರಲ್ಲಿ, ಭವತ್ಪ್ರಸಾದಮಂ - ನಿನ್ನನುಗ್ರಹವು, ಉಳ್ಳವನೆ - ಉಂಟಾದಾತನೇ, ಕೃತಾರ್ಥಂ - ಸುಕೃತಿಯು, ಎನಗಿಲ್ಲ - ಎನಗೆ ದೊರಕದು, ಎನಲ್ - ಹೀಂಗೆನಲಾಗಿ, ದಯೆಗೆಯ್ವ - ಕರುಣಿಸುವ, ಬುದ್ಧಿ - ಮತಿಯು, ಶಂಭುವೆ - ಆನಂದಕರನೆ, ನಿನಗುಂಟೇಂ - ನಿನಗೆಲ್ಲಿಯದು? ಇಲ್ಲ - ಇಲ್ಲವೇ, ಏವೆಂ - ಹೇಗೆ ಮಾಡಲಿ?

**ಭಾವಾರ್ಥಬೋಧಿನಿ :** ಮಹೇಶ್ವರನೆ, ಗಾಳಿಯಿಂದ ಹೊಡೆಯಲ್ಪಟ್ಟ ತಾವರೆಯೆಲೆಯ ಮೇಲಿನ ನೀರಿನ ಹನಿಯಂತೆ ಅಸ್ಥಿರತೆಯನ್ನು ಬಿಡದಂತೆ ಹೊಂದಿ, ಜೀವಿಸುವ ಜೀವನದಲ್ಲಿ ಯಾವನು ನಿನ್ನನುಗ್ರಹವನ್ನು ಪಡೆದಿರುವನೋ; ಅವನೇ ಧನ್ಯನು. ಆ ಧನ್ಯತೆಯು ನನಗಿಲ್ಲ. ಆದರೆ - ಶಂಭುವೆ, ನನ್ನನ್ನು ಅನುಗ್ರಹಿಸುವ ಬುದ್ಧಿಯು ನಿನಗಿರುವುದೇನು ? ಇಲ್ಲ. ನಾನೇನು ಮಾಡಲಿ. ೭೧.

**ಚಂಪಕಮಾಲಾವೃತ್ತಂ**

ಸುಖವೆ ಸುಖಾಭಿವೃದ್ಧಿಯೆ ಸುಖೋನ್ನತಿಯೇ ಸುಖಸಾರಸಿದ್ಧಿಯೇ
ಸುಖಪರಿಪೂರ್ತಿಯೇ ಸುಖಕಳಾಕೃತಿಯೇ ಸುಖಚಕ್ರವರ್ತಿಯೇ
ಸುಖಮುಖಬಂಧುವೇ ಸುಖರಸಾಮೃತಸಿಂಧುವೆ ನಿನ್ನವರ್ಗೆ ಕಿಂ
ಸುಖಮಣಿ ಮಾಳ್ಪುದಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೭೨

**ಟೀಕೆ :** ಸುಖವೇ - ಎಲೈ ಆನಂದವೇ, ಸುಖಾಭಿವೃದ್ಧಿಯೇ - ಎಲೆ ಆನಂದದ ಪೆರ್ಚುಗೆಯೆ, ಸುಖೋನ್ನತಿಯೇ - ಎಲೆ ಆನಂದದೌನ್ನತ್ಯವೆ, ಸುಖಸಾರಸಿದ್ಧಿಯೇ - ನಿರತಿಶಯಾನಂದ ಸಿದ್ಧಿಯೆ, ಸುಖಪರಿಪೂರ್ತಿಯೇ - ಆನಂದದ ವಿಸ್ತಾರವೆ, ಸುಖಕಳಾಕೃತಿಯೆ - ಆನಂದ ಸೌಂದರ್ಯವಾಕಾರವೆ, ಸುಖಚಕ್ರವರ್ತಿಯೇ - ಆನಂದಸಾರ್ವಭೌಮನೆ, ಸುಖಮುಖಬಂಧುವೇ - ಆನಂದಕ್ಕೆ

ಮುಖ್ಯವಾದ ಮಿತ್ರನೆ, ಸುಖರಸಾಮೃತಸಿಂಧುವೆ - ಆನಂದರಸಸುಧಾ ಸಮುದ್ರ, ನಿನ್ನವರ್ಗೆ - ನಿನ್ನ ಶರಣರ್ಗೆ, ನೀಂ - ನೀನು, ಸುಖವನೆ - ಆನಂದವನೇ, ಮಾಳ್ಪುದಯ್ಯ - ಮಾಡುವುದಯ್ಯ ("ಆನಂದಂ ಬ್ರಹ್ಮೇತಿವ್ಯಜಾನಾತ್" ಎಂದು ತೈತ್ತಿರೀಯೋಪನಿಷತ್ತುಂಟು).

**ಭಾವಾರ್ಥಬೋಧಿನಿ :** ಆನಂದರೂಪನೆ, ಆನಂದಾಭಿವೃದ್ಧಿಯೇ ಆನಂದದ ಸಿದ್ಧಿಯೇ, ಆನಂದಪರಿಪೂರ್ಣನೆ, ಆನಂದಾಕಾರನೆ, ಆನಂದ ಚಕ್ರವರ್ತಿಯೆ, ಆನಂದಕ್ಕೆ ಶ್ರೇಷ್ಠಸಖನೆ, ಆನಂದರಸಾಮೃತಸಿಂಧುವೆ, ನೀನು ನಿನ್ನವರಾದ ಶರಣರಿಗೆ ಆನಂದವನ್ನೇ ಉಂಟುಮಾಡು ಸ್ವಾಮಿಯೆ. ೭೨

**ಅವತಾರಿಕೆ .** ಶರಣಂಗಂಗವಾಗಿರ್ಪ ಪಂಚಭೂತಂಗಳು ಲಿಂಗಸ್ವರೂಪವಾಗಿರ್ಪುವೆಂದು ಪೇಳುತ್ತಿರ್ದಪಂ.

**ಚಂಪಕಮಾಲಾವೃತ್ತಂ**

ಧರಣಿಯೊಳಾದ ದೇಹದವೊಲಲ್ಲ ಜಲಾಗ್ನಿಮರುನ್ನಭಃಕಳೀ
ವರದೊಳೊದಂಗಿದ ಪ್ರಕೃತಿಯಂತಹುದಲ್ಲಿವರಂಗಮಂ ಸಮು
ದ್ಧರಿಸಿ ಶಿವಾತ್ಮಲಿಂಗತನು ಪಿಂತಿವರೊಳ್ಮಣಿಸೂತ್ರದಂತೆ ತಾ
ನಿರುತಿಹುದೈಕ್ಯಮಾಗಿ ಪರಮಪ್ರಭುವೇ ಮಹದೈಪುರೀಶ್ವರಾ ೭೩

**ಟೀಕೆ :** ಧರಣಿಯೊಳಾದ - ಪೃಥ್ವೀತತ್ವದೊಳಾದ, ದೇಹದವೊಲಲ್ಲ - ಶರೀರದ ಹಾಂಗಲ್ಲ, ಜಲಾಗ್ನಿಮರುನ್ನಭಃಕಳೀವರದೊಳ್ - ಅಪ್ತೇಜೋವಾಯ್ವಾಕಾಶತತ್ವಗಳಲ್ಲಿ, ಒದಂಗಿದ - ಸೇರಿದ, ಪ್ರಕೃತಿಯಂತಹುದು - ಪ್ರಕೃತಿತತ್ವದ ಹಾಗಿರುವುದು, ಅಲ್ಲ, ಇವರ - ಈ ಪಂಚಭೂತಂಗಳ, ಅಂಗಮಂ - ಮೂರ್ತಿಗಳನ್ನು, ಉದ್ಧರಿಸಿ - ಪವಿತ್ರವಮಾಡಿ, ಶಿವಾತ್ಮಲಿಂಗತನು - ಪರಮ ಮಂಗಲ ಸ್ವರೂಪವಾದ ಮಹಾಲಿಂಗದ ವಿಗ್ರಹವು, ಇಂತಿವರೊಳ್ - ಈ ಪವಿತ್ರವಾದ ಪಂಚಭೂತಂಗಳಲ್ಲಿ, ಮಣಿಸೂತ್ರದಂತೆ - ಮಣಿಗಳಿಂ ಪೋಣಿಸಲ್ಪಟ್ಟ ಸೂತ್ರದಂತೆ, ಐಕ್ಯಮಾಗಿ - ಸಮರಸಮಾಗಿ, ತಾಂ - ಆ ಲಿಂಗವಿಗ್ರಹವು, ಇರುತಿಹುದು - ಇರ್ಪುದು,

( ಈ ಅರ್ಥದಲ್ಲಿ "ಯೇನಸರ್ವಮಿದಂ ಪ್ರೋತಂಸೂತ್ರೇಮಣಿಗಣಾಇವ" ಇಂತೆಂದು ಬ್ರಹ್ಮೋಪನಿಷತ್ತುಂಟಾಗಿ)

**ಭಾವಾರ್ಥಬೋಧಿನಿ :** ಶರಣರ ದೇಹವು ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶವೆಂಬ ಪ್ರಾಕೃತ ಪಂಚಭೂತಗಳಿಂದಾದುದಲ್ಲ. ಮತ್ತೇನೆಂದರೆ - ಮಂಗಲ ರೂಪನಾದ ಲಿಂಗಮೂರ್ತಿಯು ಶರಣ ಶರೀರದ ಆ ಪಂಚಭೂತಗಳನ್ನು ಪವಿತ್ರಗೊಳಿಸಿ, ಅವುಗಳಲ್ಲಿ ಮಣಿಗಳಲ್ಲಿ ಪೋಣಿಸಿದ ಸೂತ್ರದಂತೆ ಸಮರಸವಾಗಿರುವದು ಎಂದರೆ - ಶರಣ ಶರೀರವು ಭೌತಿಕವಾಗಿರದೆ ಲಿಂಗಸಂಗದಿಂದ ಲಿಂಗಮಯವಾಗಿರುವುದೆಂದು ತಾತ್ಪರ್ಯ. ೨೩

**ಚಂಪಕಮಾಲಾವೃತ್ತಂ**

ಧರಣಿಯೆ ಪೀಠಮಂಬರಮೆ ಲಿಂಗಮಿಪಿಂತಿರದೊಂದನೊಂದುಬಿ
ಟ್ಟಿರದಿಹಕಾರಣಂ ಸಕಲಜೀವರಿಗಾಲಯಮಾಯ್ತು ತಮ್ಮೊಳೊಂ
ದಿರ ದಿರಲೊಂದೆಯಾಯ್ತು ಸರಿನೋಡೆ ವಿಶೇಷಮದೇನುಮಿರ್ದುದಿ
ಲ್ಲೆರಡರ ಮಧ್ಯದಲ್ಲಿ ಪರಮಪ್ರಭುವೇ ಮಹದೈಪುರೀಶ್ವರಾ ೨೪

**ಟೀಕೆ :** ಧರಣಿಯೆ - ಭೂಮಿಯೇ, ಪೀಠಂ - ಪೀಠವು, ಅಂಬರಮೆ - ಆಕಾಶವೇ, ಲಿಂಗಂ - ಲಿಂಗವು, ಇಪಿಂತು - ಇವುಹೀಂಗೆ, ಇರದೆ - ಬಿಡದೆ, ಒಂದನೊಂದು ಬಿಟ್ಟಿರದಿಹಕಾರಣಂ - ಒಂದನ್ನೊಂದು ವಿಸರ್ಜಿಸದೆ ಕೂಡಿರ್ಪುದ ರಿಂದೆ, ಸಕಲಜೀವರಿಗೆ - ಸಮಸ್ತ ಪ್ರಾಣಿಗಳಿಗೆ, ಆಲಯಮಾಯ್ತು - ಆಶ್ರಯ ವಾದುದೊ, ತಮ್ಮೊಳ್ - ತಮ್ಮಲ್ಲಿ, ಒಂದಿರದಿರಲ್ - ಒಂದನ್ನೊಂದು ಕೂಡದೆ ಇರಲಾಗಿ, ಒಂದೆಯಾಯ್ತು - ಒಂದೆಯಾದುದೊ, ಸರಿನೋಡೆ - ಸಮವಾಗಿ ನೋಡಲಾಗಿ, ಎರಡರ ಮಧ್ಯದಲ್ಲಿ - ಉಭಯದ ನಡುವೆ, ವಿಶೇಷಮದೇನುಂ - ವಿಶೇಷವಾದುದೇನೂ, ಇರ್ದುದಿಲ್ಲ - ಇರುವುದಿಲ್ಲ (ಈ ಅರ್ಥದಲ್ಲಿ—

"ಆಕಾಶಂಲಿಂಗಮಿತ್ಯಾಹುಃಪೃಥಿವೀತಸ್ಯಪೀಠಿಕಾ
ಆಲಯಸ್ಸರ್ವಭೂತಾನಾಂಲಯನಾಲ್ಲಿಂಗ ಮುಚ್ಯತೇ"

ಎಂದು ಉಂಟಾಗಿ.)

**ಭಾವಾರ್ಥಬೋಧಿನಿ :** ಭೂಮಿಯೇ ಪೀಠವಾಗಿಯೂ, ಆಕಾಶವೇ ಲಿಂಗವಾಗಿಯೂ ಇದ್ದು, ಈ ಭೂವ್ಯಾಕಾಶಗಳು ಬಿಡದಂತೆ ಒಂದನ್ನೊಂದು ಕೂಡಿಕೊಂಡಿರುವವು. ಆದಕಾರಣ ಮಹಾಲಿಂಗರೂಪವಾದ ಈ ಭೂವ್ಯಾಕಾಶಗಳು ಸಮಸ್ತ ಪ್ರಾಣಿಗಳಿಗೆ ಆಶ್ರಯಸ್ಥಾನವಾಗಿರುವವು. ಅವು ಕೂಡಿರದಿದ್ದರೆ ಸರ್ವಕ್ಕೂ ಆಶ್ರಯಸ್ಥಾನವಾಗುತ್ತಿರಲಿಲ್ಲ. ವಿಚಾರಮಾಡಿ ನೋಡಿದರೆ, ಈ ಭೂವ್ಯಾಕಾಶಗಳೆರಡರಲ್ಲಿಯೂ ಸಮಾನ ಧರ್ಮವಿರುವುದಲ್ಲದೆ ವ್ಯತ್ಯಾಸವಿರುವುದಿಲ್ಲ. (ವ್ಯತ್ಯಾಸವಿಲ್ಲೆಂಬುದು ಮುಂದಿನ ಪದ್ಯದಿಂದ ಗೊತ್ತಾಗುವುದು.) ೭೪

## ಉತ್ಪಲಮಾಲಾವೃತ್ತಂ

ಧಾರುಣಿ ಸರ್ವಭೂತಪರಿಣಾಮದ ಸಂಗತಿಗೆಯ್ದಿ ತಾನೆ ಯಾ
ಧಾರ ಮವಕ್ಕೆ ತಾನೆಯವಕಾಶಮನೂನವಿಯತ್ತಳಂ ತಮಾ
ಧಾರ ಪದಾವಕಾಶಪದಭಾವಮಿವಿಂತೆರಡಕ್ಕೆ ನೋಡೆಸಾ
ಧಾರಣ ಧರ್ಮವರ್ತಿ ಪರಮಪ್ರಭುವೇ ಮಹದೈಪುರೀಶ್ವರಾ ೭೫

**ಟೀಕೆ :** ಧಾರುಣಿ - ಭೂಮಿಯು, ಸರ್ವಭೂತಪರಿಣಾಮದ - ಸರ್ವ - ಸಮಸ್ತವಾದ, ಭೂತ - ಮಹಾಭೂತಂಗಳ, ಪರಿಣಾಮದ - ವಿಕಾರದ, ಸಂಗತಿಗೆ - ಸಂಬಂಧಕ್ಕೆ, ಎಯ್ದಿ - ಪೊರ್ದಿ, ತಾನೆ - ಆ ಭೂಮಿತಾನೆ, ಆಧಾರಂ - ಅಧಿಕರಣವು, ಅವಕ್ಕೆ - ಆ ಭೂತಂಗಳಿಗೆ, ಅನೂನವಿಯತ್ತಳಂತಾನೆ - ಅನೂನ - ಕೊರತೆಯಿಲ್ಲದ, ವಿಯತ್ತಳಂತಾನೆ - ಆಕಾಶವು ತಾನೆ, ಅವಕಾಶಂ - ತೆರಪುಗೊಡುವುದು, ನೋಡೆ - ವಿಚಾರಿಸಲಾಗಿ, ಸಾಧಾರಣ ಧರ್ಮವರ್ತಿ - ಸದೃಶವಾದ ಧರ್ಮದಲ್ಲಿರುತಿರ್ಪ ಮಹಾಲಿಂಗವು, ಇವಿಂತೆರಡಕ್ಕೆ - ಈ ಭೂವ್ಯಾಕಾಶವೆರಡಕ್ಕೂ, ತದಾಧಾರಪದಾವಕಾಶಪದಭಾವಂ - ತದಾಧಾರ - ಅವೆರಡಕ್ಕೂ ಆಧಾರವಾದ, ಪದ - ಸ್ಥಾನಂಗಳಿಗೆ, ಅವಕಾಶಪದಭಾವಂ - ತೆರಪುಗೊಡುವಲ್ಲಿ ಸ್ವಭಾವವನುಳ್ಳುದು. (ಎಲ್ಲಕ್ಕೂ ಮಹಾಲಿಂಗವೇ ಆಧಾರವೆಂಬುದರ್ಥಂ).

**ಭಾವಾರ್ಥಬೋಧಿನಿ :** ಭೂಮಿಯು ಸರ್ವಭೂತಗಳ ವಿಕಾರದ ಸಂಬಂಧವನ್ನು ಪಡೆದುದಾಗಿ, ಸರ್ವಕ್ಕೂ ಅಧಿಕರಣ (ಆಶ್ರಯ) ಸ್ಥಾನವಾಗಿರುವುದು. ಸರ್ವವ್ಯಾಪ್ತಿಯಾದ ಆಕಾಶವು ಎಲ್ಲವನ್ನೂ ತನ್ನೊಳಗೆ ಮಾಡಿಕೊಳ್ಳುವು-

ದಾಗಿ, ಸರ್ವಕ್ಕೂ ಆಧಾರವಾಗಿರುವುದು. ಈ ಬಗೆಯಿಂದ ಸರ್ವಾಧಾರವಾಗಿರುವ ಭೂಮ್ಯಾಕಾಶವೆರಡಕ್ಕೂ ಮಹಾಲಿಂಗವು ಆಶ್ರವಾಗಿ, ಸರ್ವಪ್ರಪಂಚಕ್ಕೂ ಮೂಲಾಧಾರವಾಗಿರುವುದು - ಎಂದರೆ ಜಗದುತ್ಪತ್ತಿಸ್ಥಿತಿಲಯಗಳಿಗೆ ಲಿಂಗವೇ ಮೂಲಕಾರಣವಾಗಿರುವುದೆಂದು ತಾತ್ಪರ್ಯ. ೭೫

## ಉತ್ಪಲಮಾಲಾವೃತ್ತಂ

ಅಂಬರಮಂಗಮಾಗಲನಿಲಾಕೃತಿಯಾಗಲಿ ವಹ್ನಿರೂಪಿನಾ
ಡಂಬರಮಾಗಲಂಬುವಿನ ತದ್ಗುಣಮಾಗಲಿ ಪೃಥ್ವಿಯಪ್ರಕಾ
ರಂಬಿಡವಾಗಲಾವಪರಿಯಾದೊಡದೇಂ ನಿಜಲಿಂಗಕಾಯಮಿ
ರ್ಪಿಂಬದು ಲಿಂಗದಿಂಬು ಪರಮಪ್ರಭುವೇ ಮಹದೈಪುರೀಶ್ವರಾ ೭೬

**ಟೀಕೆ :** ಅಂಬರದ - ಆಕಾಶದ, ಅಂಗಮಾಗಲಿ - ಶರೀರಮಾಗಲಿ, ಅನಿಲಾಕೃತಿಯಾಗಲಿ - ಗಾಳಿಯಾಕಾರವಾಗಲಿ, ವಹ್ನಿರೂಪಿನ - ಅಗ್ನಿರೂಪಿನ, ಆಡಂಬರಮಾಗಲಿ - ಸಂಭ್ರಮವಾದ ಶರೀರಮಾಗಲಿ, ಅಂಬುವಿನ - ಉದಕದ, ತದ್ಗುಣಮಾಗಲಿ - ಆ ಉದಕಗುಣದ ಶರೀರಮಾಗಲಿ, ಪೃಥ್ವಿಯ - ಭೂಮಿಯ, ಪ್ರಕಾರಂ - ಬಗೆಯು, ಬಿಡದಾಗಲಿ - ವಿಸರ್ಜಿಸದೆ ಉಂಟಾಗಲಿ, ಆವಪರಿಯಾದೊಡೆ - ಆವಬಗೆಯಾದರೂ, ಅದೇಂ - ಅದೇನು ? ಅದು - ಆ ಶರೀರವು, ನಿಜಲಿಂಗಕಾಯಂ - ಸಹಜವಾದ ಲಿಂಗವಿಗ್ರಹವು, ಇರ್ಪ - ಇರುವಂಥ, ಇಂಬು - ಸ್ಥಾನವು, ಲಿಂಗದಿಂಬು - ಅದೇ ಲಿಂಗಕ್ಕಾಶ್ರಯವು.

**ಬೋಧಿನಿ :** ಆಕಾಶಶರೀರವಾಗಿರಲಿ, ವಾಯುವಿನಿಂದಾದ ಶರೀರವಾಗಲಿ, ಅಗ್ನಿಮಯ ಶರೀರವಾಗಲಿ, ಜಲಮಯ ಶರೀರವಾಗಿರಲಿ, ಪೃಥ್ವಿಯ ಶರೀರವಾಗಲಿ, ಹೀಗೆ ಪಂಚಭೂತಗಳಲ್ಲಿ ಯಾವ ಭೂತದ ಶರೀರವಾಗಲಿ ಅದು ಲಿಂಗಮೂರ್ತಿಯು ಇರುವ ನೆಲೆಯಾಗಿ, ಲಿಂಗಸ್ಥಾನವಾಗಿಯೇ ಇರುವುದು. (ಸರ್ವವೂ ಂಗಮಯವಾಗಿರುವುದೆಂದು ಭಾವ). ೭೭

**ಚಂಪಕಮಾಲಾವೃತ್ತಂ**

ಧರಣಿ ಶರೀರಮೋ ವಿಮಲಭಕ್ತಪದಂ ದ್ರವದೇಹಮೋ ಮಹೇ
ಶ್ವರಪದ ಮುಷ್ಣಕಾಯಮೆ ತೃತೀಯಪದಂ ಚಲಭಾವಸತ್ಕಳೇ
ವರಮೆ ಚತುರ್ಥವಾದ ಪದಮಂಬರದೇಹಮೆ ಪಂಚಮಸ್ಥಳಂ
ನಿರುಪಮಮೈಕ್ಯಮಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೭೭

**ಟೀಕೆ :** ಧರಣಿಶರೀರಮೋ - ಭೂಮಿಮಯವಾದ ದೇಹವೇ, ವಿಮಲಭಕ್ತ ಪದಂ - ನಿರ್ಮಲವಾದ ಭಕ್ತಸ್ಥಳವು, ದ್ರವದೇಹಮೋ - ಉದಕಮಯವಾದ ತನುವೇ, ಮಹೇಶ್ವರಪದಂ - ಮಾಹೇಶ್ವರಸ್ಥಳವು, ಉಷ್ಣಕಾಯಮೆ - ಅಗ್ನಿ ಮಯಶರೀರವೇ, ತೃತೀಯಪದಂ - ಮೂರನೆಯವಾದ ಪ್ರಸಾದಿಸ್ಥಲವು, ಚಲಭಾವ ಸತ್ಕಳೇವರಮೆ - ಸಂಚಲಸ್ವಭಾವವನುಳ್ಳ ಒಳ್ಳಿತ್ತಾದ ವಾಯುಶರೀರವೇ, ಚತುರ್ಥ ಪದಂ – ನಾಲ್ಕನೆಯದಾದ ಪ್ರಾಣಲಿಂಗಿಸ್ಥಲವು, ಅಂಬರದೇಹಮೆ - ಆಕಾಶ ಶರೀರವೇ, ಪಂಚಮಸ್ಥಳಂ - ಐದನೆಯದಾದ ಶರಣಸ್ಥಲವು, ನಿರುಪಮಂ - ಎಣೆ ಯಿಲ್ಲದಿರ್ಪ ಆತ್ಮನೇ, ಐಕ್ಯಮಯ್ಯ - ಶಿವಲಿಂಗೈಕ್ಯಸ್ಥಳವಯ್ಯ.

**ಭಾವಾರ್ಥಬೋಧಿನಿ :** ಭಕ್ತಾದಿ ಷಡಂಗಸ್ಥಳಗಳಲ್ಲಿ - ಭಕ್ತಸ್ಥಲವು ಭೂವ್ಯಂಗವಾಗಿರುವುದು. ಮಹೇಶ್ವರಸ್ಥಲವು ಜಲಾಂಗವಾಗಿರುವುದು. ಪ್ರಸಾದಿ ಸ್ಥಲವು ಅಗ್ನ್ಯಂಗವಾಗಿರುವುದು. ಪ್ರಾಣಲಿಂಗಿಸ್ಥಲವು ವಾಯ್ವಂಗವಾಗಿರುವುದು. ಶರಣಸ್ಥಲವು ಆಕಾಶಾಂಗವಾಗಿರುವದು. ಐಕ್ಯಸ್ಥಲವು ಆತ್ಮಾಂಗವಾಗಿರುವುದು. ೭೭

**ಚಂಪಕಮಾಲಾವೃತ್ತಂ**

ಸ್ವಪನದ ದೇಹಕೆಲ್ಲ ರುಧಿರಾದಿಷಡಂಗಕಮಿಲ್ಲದಿರ್ದೊಡೇಂ
ವ್ಯಪಗತಜನ್ಮ ಮೃತ್ಯುಭಯಮಪ್ಪ ನಿರಂಶಕ ನಿತ್ಯದೇಹಮಾ
ದಪುದೆ ನಿಜಾಂಗಲಿಂಗಕೃತಸಂಗಶಿವಾತ್ಮಕ ದಿವ್ಯದೇಹಮಾ
ವಪರಿಯೊಳಾದೊಡೇನು ಪರಮಪ್ರಭುವೇ ಮಹದೈಪುರೀಶ್ವರಾ ೭೮

**ಟೀಕೆ** : ಸ್ವಪನದ ದೇಹಕೆ - ಸೂಕ್ಷ್ಮಶರೀರಕ್ಕೆ, ರುಧಿರಾದಿಷಡಂಗಕಮೆಲ್ಲ- ರಕ್ತ ಮೊದಲಾದ ಷಡ್ಧಾತುಗಳೆಲ್ಲವೂ, ಇಲ್ಲದಿರ್ದೊಡೇಂ - ಇಲ್ಲದಿರ್ದೊಡೇನಾಯಿತು, ವ್ಯಪಗತಜನ್ಮ ಮೃತ್ಯುಭಯಮಪ್ಪ - ವ್ಯಪಗತ - ಹೋದಂಥ, ಜನ್ಮ ಮೃತ್ಯು - ಜನನಮರಣಂಗಳ, ಭಯಮಪ್ಪ - ಭಯವುಳ್ಳ, ನಿರಂಶಕ ನಿತ್ಯದೇಹಂ- ಅವಯವಂಗಳಿಲ್ಲದ ಕೇಡಿಲ್ಲದ ದೇಹವು, ಆದಪುದೆ - ಆದೀತೆ ? ಆಗದು, ನಿಜಾಂಗ ಲಿಂಗಕೃತಸಂಗ ಶಿವಾತ್ಮಕ ದಿವ್ಯದೇಹಂ - ನಿಜಾಂಗಲಿಂಗ - ಸಹಜವಾದ ಅಂಗ ಲಿಂಗಗಳ, ಕೃತ - ಮಾಡಲ್ಪಟ್ಟ, ಸಂಗ-ಸಂಬಂಧವನುಳ್ಳ, ಶಿವಾತ್ಮಕದಿವ್ಯದೇಹಂ- ಶಿವಸ್ವರೂಪವಾದ ದಿವ್ಯ ವಿಗ್ರಹವು, ಆವ ಪರಿಯೊಳ್ - ಆವ ತೆರದಲ್ಲಿ, ಆದೊಡೇನು - ಉಂಟಾದೊಡೇನು ?

**ಭಾವಾರ್ಥಬೋಧಿನಿ** : ಸ್ವಪ್ನಾವಸ್ಥೆಗೆ ಸಂಬಂಧಿಸಿದ ಸೂಕ್ಷ್ಮಶರೀರಕ್ಕೆ ರಕ್ತಮೊದಲಾದ ಧಾತುಗಳಿಲ್ಲದಿರ್ದೊಡೇನು ? ಆ ಸೂಕ್ಷ್ಮಶರೀರವು ಜನನಮರಣಗಳ ಭಯವನ್ನು ನೀಗಿ, ನಿರವಯುವವಾದ ನಿತ್ಯದೇಹವಾದೀತೇ ? ಆಗಲಾರದು. ಅಂಗ ಲಿಂಗಸಂಬಂಧವುಳ್ಳುದಾಗಿ ಶಿವಸ್ವರೂಪವಾಗಿರುವ ದಿವ್ಯದೇಹವು ಆವ ತೆರದಲ್ಲಿ ಇದ್ದರೇನು ? ಅದಕ್ಕೆ ಜನನಮರಣಗಳ ಭಯವಿಲ್ಲವೆಂದರ್ಥ. (ಲಿಂಗಸಂಗಿಯಾದ ಶರಣಸಂಗವು ಹೇಗಿದ್ದರೂ ಅದಕ್ಕೆ ಯಾವ ಭಯವೂ ಇಲ್ಲದೆ ಆನಂದಮಯವಾಗಿರುವುದಲ್ಲವೆ ?)

## ಉತ್ಪಲಮಾಲಾವೃತ್ತಂ

ಭೂತಪಿಶಾಚ ರಾಕ್ಷಸನಿಶಾಚರ ರೇನಿರರೇ ತ್ವಗಾದಿಷ
ಡ್ಧಾತುವಿಹೀನವಾಗಿ ನೆಳಲಂತಿರೆ ತೋರ್ಪ ಶರೀರಗೊಂಡು ಸಾ
ಕೇತರವಾತು ಲಿಂಗತನುಗೊಂಡ ಶಿವಾತ್ಮರವೃತ್ತಿ ಬೇರೆ ತಾ
ನೇತೆರನಾದೊಡಕ್ಕು ಪರಮಪ್ರಭುವೇ ಮಹದೈಪುರೀಶ್ವರಾ ೭೯

**ಟೀಕೆ** : ತ್ವಗಾದಿಷಡ್ಧಾತುವಿಹೀನವಾಗಿ - ಚರ್ಮ ಮೊದಲಾದಾರುಧಾತುಗಳಿಂದ ವಿಲಕ್ಷಣವಾಗಿ, ನೆಳಲಂತಿರೆತೋರ್ಪ – ನೆಳಲಹಾಂಗೆ ಕಾಣಿಸುವ, ಶರೀರಗೊಂಡು – ದೇಹವತಾಳ್ದು, ಭೂತಪಿಶಾಚರಾಕ್ಷಸ ನಿಶಾಚರರ್ - ಭೂತ -

ಭೂತಂಗಳು, ಪಿಶಾಚ - ಪಿಶಾಚರು, ರಾಕ್ಷಸ - ರಾಕ್ಷಸರು, ನಿಶಾಚರರ್ - ಕತ್ತಲೆಯಲ್ಲಿ ಚಲಿಸುವವರುಗಳು, ಏನಿರರೇ - ಇರರೇನು ? ಏತರಮಾತು - ಏತರನುಡಿ ? ಸಾಕು - ಅದುಸಾಕು, ಲಿಂಗತನುಗೊಂಡ - ಶಿವಲಿಂಗ ಶರೀರವತಾಳ್ದ, ಶಿವಾತ್ಮರ - ಶಿವಸ್ವರೂಪರಾದ ಶರಣರ, ವೃತ್ತಿ - ವರ್ತನೆ, ಬೇರೆ - ವಿಲಕ್ಷಣವು, ತಾಂ - ಅದು ತಾನು, ಏತೆರನಾದೊಡಂ - ಆವಪ್ರಕಾರವಾದೊಡೆಯೂ, ಅಕ್ಕು - ಅಪ್ಪುದು.

**ಭಾವಾರ್ಥಬೋಧಿನಿ :** ಚರ್ಮ ಮೊದಲಾದವುಗಳಿಂದ ಕೂಡದೆ, ಛಾಯಾ ಮಾತ್ರವಾಗಿ ತೋರುವ ಶರೀರವು ಭೂತಪಿಶಾಚ ರಾಕ್ಷಸಾದಿಗಳಿಗಿರುವುದಿಲ್ಲವೆ ? ಇದ್ದರೇನು ? (ಭೂತಾದಿಗಳಿಗೆ ಜನನಮರಣ ಭಯವು ತಪ್ಪದು.) ಇನ್ನು ಧಾತುಮಯವಾದ ಶರೀರವಾದರೂ ಅದನ್ನು ಲಿಂಗ ಶರೀರವನ್ನಾಗಿ ಮಾಡಿಕೊಂಡು ಶಿವ-ಸ್ವರೂಪರಾದ ಶರಣರ ವರ್ತನವು ಹೇಗಿದ್ದರೇನು ? ಅದು ಜಗದ್ವಿಲಕ್ಷಣವಾಗಿರು-ವುದು. (ಭೂತಮಯವಾದ ದೇಹವಿಲ್ಲದಿರುವುದೇ ಘನವೆಂದು ಭಾವಿಸಲಾಗದು. ಯಾವ ದೇಹವಿದ್ದರೂ ಅದು ಲಿಂಗಸಂಗವುಳ್ಳುದಾದರೆ ಘನವೆನಿಸುವುದು.)

**ಚಂಪಕಮಾಲಾವೃತ್ತಂ**

ಧರೆ ಸಲಿಲಾಗ್ನಿ ವಾಯುನಭಮೆಂಬಿವು ತಮ್ಮೊಳೆ ಹೀನಮಧ್ಯಮೋ
ತ್ತರತಮ ಮೆಲ್ಲವಕ್ಕವರ ಭಾವಮದೇ ಕಡೆಯಾಗಿ ಸರ್ವಮುಂ
ಸರಿ ಜಗದುದ್ಭವಸ್ಥಿತಿವಿನಾಶಮನೊಂದಿರದೊಂದು ಮಾಳ್ಪ ಶ
ಕ್ತಿರಹಿತಮಪ್ಪುವಾಗಿ ಪರಮಪ್ರಭುವೇ ಮಹದೈಪುರೀಶ್ವರಾ ೮೦

**ಟೀಕೆ :** ಧರೆಸಲಿಲಾಗ್ನಿವಾಯುನಭಮೆಂಬಿವು - ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶವೆಂಬಿವು, ತಮ್ಮೊಳೆ - ತಮ್ಮಲ್ಲಿಯೇ, ಹೀನಮಧ್ಯಮೋತ್ತರ-ತಮಂ - ಹೀನಮಧ್ಯಮೋತ್ತಮವೆಂಬತಾರತಮ್ಯಗಳುಳ್ಳುವು, ಎಲ್ಲವಕ್ಕೆ - ಆ ಭೂತಂಗಳೆಲ್ಲವಕ್ಕೆಯೂ, ಅವರಭಾವಂ - ಆ ಭೂತಂಗಳ ಐದು ನಾಲ್ಕು ಮೂರು ಎರಡು ಒಂದು ಎಂಬ ಗುಣಂಗಳು, ಅದೇ ಕಡೆಯಾಗಿ - ತಾನೆ ಕಡೆಯಾಗಿ, ಜಗದುದ್ಭವಸ್ಥಿತಿವಿನಾಶಮಂ - ಜಗತ್ತಿನ ಸೃಷ್ಟಿಸ್ಥಿತಿಲಯಂಗಳನ್ನು, ಒಂದಿರದೆ - ಒಂದು ಭೂತವಿರದೆ, ಒಂದು ಮಾಳ್ಪ - ಒಂದು ಭೂತಮಾಡುವ, ಶಕ್ತಿರಹಿತಮಪ್ಪುವಾಗಿ - ಸಾಮರ್ಥ್ಯದಿಂದ ಹೀನಮಾಗಿ, ಸರ್ವಮುಂ - ಎಲ್ಲವೂ, ಸರಿ - ಸಮವು.

**ಭಾವಾರ್ಥ-ಬೋಧಿನಿ** : ಗಂಧ, ರಸ, ರೂಪ, ಸ್ಪರ್ಶ, ಶಬ್ದವೆಂಬ ೫ ಗುಣಗಳಲ್ಲಿ ಕ್ರಮವಾಗಿ - ಭೂಮಿಗೆ ೫, ಜಲಕ್ಕೆ ೪, ಅಗ್ನಿಗೆ ೩, ವಾಯು-ವಿಗೆ ೨. ಆಕಾಶಕ್ಕೆ ೧, ಇರುವವು. ಹೀಗೆ ಭೂಮ್ಯಾದಿ ಪಂಚಭೂತಗಳು ಒಂದಕ್ಕಿಂತ ಮತ್ತೊಂದು ಹೆಚ್ಚು ಕಡಮೆ ಗುಣಗಳುಳ್ಳವಾಗಿರುವುದರಿಂದ ಕನಿಷ್ಟ ಮಧ್ಯಮೋತ್ತಮವೆಂಬ ತಾರತಮ್ಯವುಳ್ಳವುಗಳಾಗಿದ್ದರೂ, ಜಗತ್ತಿನ ಸೃಷ್ಟಿಸ್ಥಿತಿ ಲಯಂಗಳನ್ನು ಒಂದನ್ನುಬಿಟ್ಟು ಮತ್ತೊಂದು ಮಾಡಲಾರವು. ಎಲ್ಲವೂ ಕೂಡಿಯೇ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವವು. ಆದುದರಿಂದ.ಈ ಕಾರ್ಯದಲ್ಲಿ ಎಲ್ಲವೂ ಸಮಾನವಾಗಿಯೇ ಇರುವವು. ೮೦

**ಚಂಪಕಮಾಲಾವೃತ್ತಂ**

ರಸರುಧಿರಾದಿಧಾತುಮಯಮಪ್ಪ ಶರೀರಮದಲ್ಲ ಲಿಂಗಭ
ಕ್ತಸಮಿತಿಗೆಂಬ ಮಾತದು ದುರಾಗ್ರಹಮುಕ್ತಿ ಶಿವೈಕ್ಯಭಕ್ತಿಯೋ
ಗಸುಖದೊಳಾಂತು ಧಾತುಕಮಧಾತುಕಮೆಂಬುಭಯಾಂಗಮೊಂದಿ ಯಿಂ
ತೆಸೆದಿಹುದೈಕ್ಯಮಾಗಿ ಪರಮಪ್ರಭುಮೇ ಮಹದೈಪುರೀಶ್ವರಾ ೮೧

**ಟೀಕೆ** : ಲಿಂಗಭಕ್ತ ಸಮಿತಿಗೆ - ಶಿವಭಕ್ತ ಸಮೂಹಕ್ಕೆ, ರಸರುಧಿರಾದಿ ಧಾತುಮಯಮಪ್ಪ - ರಸರಕ್ತ ಮೊದಲಾದ ಷಡ್ಧಾತುವಿಕಾರಮಾದ, ಶರೀರಂ - ದೇಹವು, ಅದಲ್ಲ - ಅದು ತಾನಲ್ಲ, ಎಂಬ - ಹೀಗೆಂಬ, ಮಾತದು - ಆ ನುಡಿ, ದುರಾಗ್ರಹಮುಕ್ತಿ - ವ್ಯರ್ಥವಾದ ದ್ವೇಷದ ನುಡಿ, ಶಿವೈಕ್ಯಭಕ್ತಿಯೋಗಸುಖ-ದೊಳ್ - ಶಿವೈಕ್ಯ - ಶಿವಲಿಂಗೈಕ್ಯದಲ್ಲಿಯು, ಭಕ್ತಿ - ಭಕ್ತಿಯಲ್ಲಿಯು, ಯೋಗ - ಸಂಬಂಧದಿಂದಾದ, ಸುಖದೊಳ್ - ಆನಂದದಲ್ಲಿ, ಆಂತು - ಧರಿಸಿ, ಧಾತುಕಂ - ಷಡ್ಧಾತುಮಯವು, ಅಧಾತುಕಂ - ಇದು ಷಡ್ಧಾತುಕಮಲ್ಲ, ಎಂಬ - ಹೀಗೆಂಬ, ಉಭಯಾಂಗಮೊಂದಿ - ಎರಡು ತೆರದ ದೇಹಮಂತಾಳ್ದು, ಐಕ್ಯಮಾಗಿ - ಸಮರಸವಾಗಿ, ಇಂತು - ಈ ಪ್ರಕಾರದಿಂದೆ, ಎಸೆದಿಹುದು - ಒಪ್ಪುತ್ತಿರ್ಪುದು.

**ಭಾವಾರ್ಥಬೋಧಿನಿ** :- ಲಿಂಗಭಕ್ತ ಸಮೂಹದ ಶರೀರವು ರಕ್ತಮಾಂಸಾದಿ ಧಾತುಮಯವಾಗಿರುವುದಿಲ್ಲೆಂಬ ಮಾತು ದುರಾಗ್ರಹದ ಮಾತಾಗಿರುವುದು. ಏಕೆಂದರೆ ಲಿಂಗಾಂಗಸಮರಸಭಕ್ತಿಯೋಗದಿಂದುಂಟಾದ ಆನಂದದಲ್ಲಿ ಮುಳುಗಿ

ದವರಾದ ಲಿಂಗಭಕ್ತರ ಶರೀರವು ಧಾತುಮಯವಾಗಿದ್ದರೂ ಲಿಂಗಾಂಗಸಮರಸದ-ಲ್ಲಿಯೇ ಇದ್ದು ವಿರಾಜಿಸುವುದು. (ಲಿಂಗಭಕ್ತರ ದೇಹವು ಧಾತುವಿಕಾರವಾಗದಿರು-ವುದೇ ಮುಖ್ಯವಲ್ಲ. ಆ ಶರೀರವು ಯಾವರೀತಿಯಿಂದಿದ್ದರೂ ಲಿಂಗಾಂಗಸಮರಸ ಸುಖಸ್ಥಾನವಾಗಿರುವುದು ಮುಖ್ಯವೆಂದು ತಾತ್ಪರ್ಯ) ೮೧

**ಚಂಪಕಮಾಲಾವೃತ್ತಂ**

ಅನಿಮಿಷನಸ್ಥಿಮಾತ್ರತನುವಾಗಿರನೇ ಬಸವಂ ತ್ವಗಾದಿಸಂ
ಜನಿತವಪುಷ್ಕನಾಗಿರನೆ ಯಲ್ಲಮನಂಶಕವರ್ಜಕಾಯನಾ
ಗಿ ನೆಳಲು ಹೆಜ್ಜೆಯಿಲ್ಲದಿರನೇ ಶಿವಯೋಗಸುಖಪ್ರಪೂರ್ಣ ವಾ
ಸನೆಯ ಶರೀರಮೊಂದೆ ಪರಮಪ್ರಭುವೇ ಮಹದೈವುರೀಶ್ವರಾ ೮೨

**ಟೀಕೆ:** ಅನಿಮಿಷಂ-ಅನಿಮಿಷಯ್ಯನು, ಅಸ್ಥಿಮಾತ್ರತನುವಾಗಿರನೇ-ಅಸ್ಥಿಮಾತ್ರ ದೇಹವುಳ್ಳಾತನಾಗಿರನೆ? ಬಸವಂ-ಬಸವೇಶ್ವರನು, ತ್ವಗಾದಿಸಂಜನಿತವಪುಷ್ಕನಾಗಿರನೆ-ಷಡ್‌ಧಾತುಗಳಿಂದೆ ಪುಟ್ಟಿಸಲ್ಪಟ್ಟ ದೇಹವುಳ್ಳಾತನಾಗಿರನೆ ? ಅಲ್ಲಮಂ - ಅಲ್ಲಮ ಪ್ರಭುವು, ಅಂಶಕವರ್ಜಕಾಯನಾಗಿ - ಅವಯವಂಗಳಿಲ್ಲದ ಶರೀರವುಳ್ಳಾತನಾಗಿ, ನೆಳಲುಹೆಜ್ಜೆಯಿಲ್ಲದಿರನೇ - ನೆಳಲು ಹೆಜ್ಜೆಗಳಿಲ್ಲದೆ ಇರನೆ ? ಶಿವಯೋಗಸುಖ ಪ್ರಪೂರ್ಣವಾಸನೆಯ - ಶಿವಯೋಗಸುಖ - ಶಿವಯೋಗಾನಂದದಿಂ, ಪ್ರಪೂರ್ಣ - ಚೆನ್ನಾಗಿ ತುಂಬಲ್ಪಟ್ಟ, ವಾಸನೆಯ - ಸಂಸ್ಕಾರದ, ಶರೀರಂ - ದೇಹವು, ಒಂದೆ - ಒಂದೇ ಸ್ವರೂಪವು.

**ಭಾವಾರ್ಥಬೋಧಿನಿ** :- ಅನಿಮಿಷಯ್ಯನು ಅಸ್ಥಿಮಾತ್ರದೇಹವುಳ್ಳವ ನಾಗಿರಲಿಲ್ಲವೆ ? ಬಸವೇಶ್ವರನು ರಕ್ತಾದಿಧಾತುಗಳಿಂದ ಕೂಡಿದ ತನುವುಳ್ಳಾತ ನಾಗಿರಲಿಲ್ಲವೇ ? ಅಲ್ಲಮಪ್ರಭುವು ಅವಯವರಹಿತ ಶರೀರಿಯಾಗಿ ನೆಳಲೂ ಹೆಜ್ಜೆಯೂ ಇಲ್ಲದಾತನಾಗಿರಲಿಲ್ಲವೆ ? ಶಿವಯೋಗಾನಂದದಿಂದ ಪೂರ್ಣವಾದ ಸಂಸ್ಕಾರವುಳ್ಳ ಶರೀರವು ಮಾತ್ರ ಅವರೆಲ್ಲರಿಗೂ ಒಂದೇವಿಧವಾದುದಾಗಿರುವುದು ಎಂದರೆ- ಶರಣರ ಶರೀರವು ಯಾವದೇರೀತಿಯಿಂದಿದ್ದರೂ ಅದು ಲಿಂಗಾಂಗ-ಯೋಗವುಳ್ಳುದಾಗಿದ್ದು ಅವರೆಲ್ಲರಿಗೂ ಏಕಪ್ರಕಾರವಾದುದಾಗಿಯೇ ಗೋಚರಿಸು-ವುದೆಂದು ಭಾವ ೮೨

### ಉತ್ಪಲಮಾಲಾವೃತ್ತಂ

ಭೌತಿಕಮಾದೊಡಾಗಲವಕೇಂ ಬಹಿರಂಗದೆ ತೊಟ್ಟಕಂತೆ ಷ
ಡ್ಧಾತುಕಮಾಗಲಲ್ಲದೊಡೆ ಧಾತುವಿವರ್ಜಿತಮಾಗ ಲೊಂದೆರ
ಡ್ಧಾತುಸಮೇತಮಾಗಲವನೀಜಲವಹ್ನಿ ಮರುನ್ನಭಸ್ಸಮು
ದ್ಭೂತಶರೀರವೃತ್ತಿ ಪರಮಪ್ರಭುವೇ ಮಹದೈಪುರೀಶ್ವರಾ ೮೭

**ಟೀಕೆ :** ಅವನೀಜಲವಹ್ನಿ ಮರುನ್ನಭಸ್ಸಮುದ್ಭೂತ ಶರೀರವೃತ್ತಿ - ಪೃಥ್ವಿ ಅಪ್ಪು ತೇಜಸ್ಸು ವಾಯು ಆಕಾಶಂಗಳಿಂದ ಹುಟ್ಟಲ್ಪಟ್ಟ ದೇಹದವರ್ತನೆಯುಳ್ಳ, ಬಹಿರಂಗದೆತೊಟ್ಟಕಂತೆ - ಬಾಹ್ಯದಲ್ಲಿ ಧರಿಸಿದ ದೇಹವು, ಭೌತಿಕಮಾಗಲಿ - ಪಂಚ ಭೂತವಿಕಾರವುಳ್ಳುದಾದೊಡೆಯೂ ಆಗಲಿ, ಷಡ್ಧಾತುಕಮಾಗಲಿ - ರಕ್ತಾದಿಷಡ್ಧಾತುಕವಾದೊಡೆಯೂ ಆಗಲಿ, ಅಲ್ಲದೊಡೆ - ಅಲ್ಲದಿರ್ದೊಡೆ, ಧಾತುವಿವರ್ಜಿತಮಾಗಲಿ - ಷಡ್ಧಾತುರಹಿತವಾದೊಡೆಯೂ ಆಗಲಿ, ಒಂದೆರಡ್ಧಾತುಸಮೇತವಾಗಲಿ- ಒಂದೆರಡು ಧಾತುಗಳಿಂದ ಕೂಡಿದುದಾದೊಡೆಯೂ ಆಗಲಿ, ಅವಕೇಂ - ಅದಕ್ಕೇನು ದೋಷವು ?

**ಭಾವಾರ್ಥಬೋಧಿನಿ :** ಲಿಂಗಭಕ್ತನ ದೇಹವು ಪೃಥ್ವಿ ಮೊದಲಾದ ಪಂಚ ಭೂತಗಳಿಂದ ಸಮುತ್ಪನ್ನವಾಗಿದ್ದರೂ ಇರಲಿ, ಚರ್ಮಮಾಂಸಾದಿ ಷಡ್ಧಾತುಗಳ ವಿಕಾರವುಳ್ಳುದಾಗಿದ್ದರೂ ಇರಲಿ, ಇಲ್ಲವೆ ಒಂದೆರಡು ಧಾತುಗಳಿಂದ ಕೂಡಿದ್ದರೂ ಇರಲಿ, ಹೊರನೋಟಕ್ಕೆ ಆ ದೇಹವು ಹೇಗೆ ಕಾಣುತ್ತಿದ್ದರೂ ಯಾವ ದೋಷವೂ ಇಲ್ಲ. ೮೭

### ~~ಉತ್ಪಲ~~ಮಾಲಾವೃತ್ತಂ

ಬಿಡುವೊಡೆ ಸರ್ವಮಂ ಬಿಡಲೆಬೇಕವಸಾನದೊಳೈಕ್ಯಸೌಖ್ಯಮಂ
ಪಡೆವೊಡೆ ಪಾರ್ಥಿವಾಂಬುಘನತೈಜಸಮಾರುತ ಮಂತರಿಕ್ಷಮೆಂ
ಬೊಡಲಿದು ಪೊಂದೆಯ್ಸೆ ತನು ಪಾರ್ಥಿವಮಂಬರದೇಹಮಾದೊಡೇಂ
ಬಿಡದಿರಬಾರದಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೮೮

**ಟೀಕೆ :** ಅವಸಾನದೊಳ್ - ದೇಹಾವಸಾನದಲ್ಲಿ, ಬಿಡುವೊಡೆ - ಬಿಡಬೇಕಾದೊಡೆ, ಸರ್ವಮಂ - ಎಲ್ಲವನ್ನೂ, ಬಿಡಲೇಬೇಕು - ವಿಸರ್ಜಿಸಲೇಬೇಕು, ಐಕ್ಯಸೌಖ್ಯಮಂ ಪಡೆವೊಡೆ - ಶಿವಸಾಮರಸ್ಯಾನಂದವನು ಪಡೆಯಬೇಕಾದೊಡೆ,

ಪಾರ್ಥಿವಾಂಬುಘನತೈಜಸಮಾರುತಮಂತರಿಕ್ಷಂ - ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶಾಂಗಗಳು, ಎಂಬ - ಎನಿಸುವ, ಒಡಲಿದು - ದೇಹವಿದು, ಒಂದೆಯ್ಯೆಸೆ - ಒಂದೆಯಷ್ಟೇ, ತನು - ಶರೀರವು, ಪಾರ್ಥಿವಂ - ಪೃಥ್ವೀತತ್ವಸಂಬಂಧವಾದೊಡೆಯೂ, ಅಂಬರದೇಹಂ - ಆಕಾಶತತ್ವಸಂಬಂಧವಾದ ದೇಹವು, ಆದೊಡೆ-ಉಂಟಾದೊಡೆಯೂ, ಏಂ - ಏನು ಪ್ರಯೋಜನ ? ಬಿಡದಿರಬಾರದಯ್ಯ - ವಿಸರ್ಜಿಸಬಾರದು.

**ಭಾವಾರ್ಥಬೋಧಿನಿ** : ದೇಹಾವಸಾನಕಾಲದಲ್ಲಿ ಯಾವ ರೀತಿಯ ಶರೀರವನ್ನಾದರೂ ತ್ಯಜಿಸಲೇಬೇಕು. ಲಿಂಗಾಂಗಸಮರಸಸೌಖ್ಯವನ್ನು ಪಡೆಯುವುದಕ್ಕಾಗಿ ಭೂಮಿ ಮೊದಲಾದ ಭೂತಗಳಿಂದುಂಟಾದುದಾಗಿರಲಿ, ಅಥವಾ ಭೂಮಿಯೊಂದರಿಂದುಂಟಾಗಿರಲಿ ಇಲ್ಲವೆ ಆಕಾಶತತ್ವದಿಂದಾಗಿರಲಿ ಎಲ್ಲವೂ ಸಮಾನವು. ಇನ್ನು ದೇಹಸಂಬಂಧವಿರುವವರೆಗೂ ಯಾವ ವಿಧವಾದ ಶರೀರವಾಗಿದ್ದರೂ ಕೊನೆಗೆ ಅದನ್ನು ತ್ಯಜಿಸಲಾಗುವುದಲ್ಲವೆ ? (ಯಾವ ಶರೀರವಿದ್ದರೂ ಅವಸಾನ ಕಾಲದಲ್ಲಿ ಅದನ್ನು ತ್ಯಜಿಸಲಾಗುವದು. ಆ ಶರೀರವಿರುವುದರೊಳಗೆ ಲಿಂಗಾಂಗಸಮರಸ ಸೌಖ್ಯವನ್ನು ಪಡೆಯಬೇಕು. ಹೀಗೆ ಪಡೆಯುವುದೇ ಶರಣನಿಗೆ ಮುಖ್ಯವಲ್ಲದೆ ಶರೀರವು ಮುಖ್ಯವಲ್ಲವೆಂದು ತಾತ್ಪರ್ಯ.) ೮೪

## ಉತ್ಪಲಮಾಲಾವೃತ್ತಂ

ಇಲ್ಲೆನಗುರ್ವಿವಾರಿಹುತಭುಙ್ಮರುದಂಬರಮೆಂಬಿವೆಂದು ತ
ನ್ನಲ್ಲಿಯೆ ತಾಂ ಗುರೂಕ್ತಿಮತದಿಂ ತಿಳಿದೈದುಮನೆಯ್ದೆ ಬಿಟ್ಟು ನಿಂ
ದಲ್ಲಿ ವಿಶುದ್ಧ ನಿಷ್ಕಳ ಶಿವೈಕ್ಯಸುಖಾಸ್ಪದನಪ್ಪನೆಂದು ಕೈ
ವಲ್ಯಶೃತಿ ಪ್ರಶಸ್ತಿ ಪರಮಪ್ರಭುವೇ ಮಹದೈಪುರೀಶ್ವರಾ ೮೫

**ಟೀಕೆ** : ಗುರೂಕ್ತಿಮತದಿಂ - ಗುರೂಪದೇಶ ಪ್ರಕಾರದಿಂದೆ, ತನ್ನಲ್ಲಿಯೆ ತಾಂ - ತನ್ನಲ್ಲಿ ತಾನೇ, ತಿಳಿದು - ಅರಿದು, ಉರ್ವಿವಾರಿಹುತಭುಙ್ಮರುದಂಬರಮೆಂಬಿವು - ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶಗಳೆಂಬಿವು, ಇಲ್ಲೆನಗೆಂದು-ತನಗಿಲ್ಲವೆಂದು, ಐದುಮಂ - ಐದು ಭೂತಂಗಳನ್ನೂ, ಎಯ್ದೆ ಬಿಟ್ಟು - ಚೆನ್ನಾಗಿ ವಿಸರ್ಜಿಸಿ, ನಿಂದಲ್ಲಿ - ಸ್ಥಿರವಾದಲ್ಲಿ, ವಿಶುದ್ಧ ನಿಷ್ಕಳ ಶಿವೈಕ್ಯಸುಖಾಸ್ಪದನಪ್ಪನೆಂದು-

ವಿಶುದ್ಧ - ಮಿಗೆ ನಿರ್ಮಳವಾದ, ನಿಷ್ಕಳ - ಕಳಾತೀತವಾದ, ಶಿವೈಕ್ಯಸುಖ - ಶಿವ ಸಾಮರಸ್ಯಾನಂದಕ್ಕೆ, ಆಸ್ಪದನಪ್ಪನೆಂದು - ಸ್ಥಾನವಾಗುವನೆಂದು, ಕೈವಲ್ಯಶ್ರುತಿ ಪ್ರಶಸ್ತಿ - ಕೈವಲ್ಯಶೃತಿ—

"ನ ಭೂಮಿರಾಪೋನ ಚ ವಹ್ನಿರಸ್ತಿನಚಾನಿಲೋಮೇಽಸ್ತಿನ ಚಾಂಬರಂ ಚ
ಏವಂ ವಿದಿತ್ವಾಪರಮಾತ್ಮರೂಪಂ ಗುಹಾಶಯಂ ನಿಷ್ಕಳಮದ್ವಿತೀಯಂ
ಸಮಸ್ತ ಸಾಕ್ಷಿಂ ಸದಸದ್ವಿಹೀನಂ ಪ್ರಯಾತಿಸದ್ಯಃ ಪರಮಾತ್ಮರೂಪಂ"

ಎಂಬ ಕೈವಲ್ಯೋಪನಿಷತ್ತಿನ ಪ್ರಶಸ್ತಿ - ಕೊಂಡಾಡುವಿಕೆಯುಂಟು.

**ಭಾವಾರ್ಥಬೋಧಿನಿ :** ಗುರುವು ಉಪದೇಶಿಸಿದ ರೀತಿಯಿಂದ ತನ್ನಲ್ಲಿ ತಾನು ವಿಚಾರಿಸಿಕೊಂಡು, ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬ ಪಂಚ ಭೂತಗಳ ಸಂಬಂಧವೆನಗಿಲ್ಲವೆಂದು ತಿಳಿದು, ಅವುಗಳನ್ನು ತ್ಯಜಿಸಿ ಸ್ಥಿರತೆಯನ್ನು ಹೊಂದಿದ ಭಕ್ತನು ನಿರ್ಮಲವೂ ನಿಷ್ಕಲವೂ ಆದ ಶಿವಸಾಮರಸ್ಯಸುಖಕ್ಕೆ ಪಾತ್ರ ನಾಗುವನೆಂದು ಕೈವಲ್ಯಶ್ರುತಿಯು ಹೊಗಳಿರುವುದು. (ಕೈವಲ್ಯಶೃತಿಯು ಟೀಕೆ ಯಲ್ಲಿ ಉಕ್ತವಾಗಿರುವುದು.) (ಗುರುದೀಕ್ಷೆಯಿಂದ ಶುದ್ಧವಾದ ಶರೀರದಲ್ಲಿ ಪಂಚ ಭೂತವಿಕಾರದ ಸಂಬಂಧವಿರುವುದಿಲ್ಲ. ಆ ಶರೀರವು ಲಿಂಗಶರೀರವಾಗಿರುವುದೆಂಬ ಭಾವನೆಯು ದೃಢವಾಗಿದ್ದರೆ ಲಿಂಗಾಂಗಸಂಯೋಗಸುಖವು ಲಭಿಸುವುದೆಂದು ತಾತ್ಪರ್ಯ.) ೮೫

## ಉತ್ಪಲಮಾಲಾವೃತ್ತಂ

ದೃಶ್ಯಜಡಂಗಳೆಂದೆನಿಪ ನಾಕಸಮೀರಣಹವ್ಯಭುಕ್ಪಯಃ
ಕಾಶ್ಯಪಿಗಳ್ ವಿಶಿಷ್ಟಗುಣವೃತ್ತಿಗಳಾದೊಡೆ ಯುತ್ತರೋತ್ತರಂ
ನಶ್ವರವಸ್ತುಗಳ್ ಪ್ರಳಯಕಾಲದೊಳಂತಿವಡಂಗಿ ಪೋಗೆ ನೀಂ
ಶಾಶ್ವತನಾಗಿ ಬಾಳ್ವೆ ಪರಮಪ್ರಭುವೇ ಮಹದೈಪುರೀಶ್ವರಾ ೮೬

**ಟೀಕೆ :** ದೃಶ್ಯಜಡಂಗಳ್ ಎಂದೆನಿಪ - ದೃಶ್ಯ - ಕಾಣಲ್ತಕ್ಕ, ಜಡ - ಅಚೇತನಂಗಳೆಂದೆನಿಸುವ, ನಾಕಸಮೀರಣಹವ್ಯಭುಕ್ಪಯಃ ಕಾಶ್ಯಪಿಗಳ್ - ನಾಕ - ಆಕಾಶ, ಸಮೀರಣ - ವಾಯು, ಹವ್ಯಭುಕ್ - ಅಗ್ನಿ, ಪಯಃ - ಉದಕ, ಕಾಶ್ಯಪಿ-

ಗಳ್ - ಭೂಮಿ ಇವುಗಳು, ವಿಶಿಷ್ಟಗುಣವೃತ್ತಿಗಳಾದೊಡೆ - ತಮ್ಮ ತಮ್ಮ ಗುಣಂಗಳ ವರ್ತನೆಯೊಡನೆಕೂಡಿದೊಡೆಯೂ, ಉತ್ತರೋತ್ತರಂ - ಒಂದ-ರಿಂದೊಂದುವೆಗ್ಗಳವಾಗಿ, ನಶ್ವರವಸ್ತುಗಳ್ - ಅನಿತ್ಯವಾದ ವಸ್ತುಗಳು, ಪ್ರಳಯ ಕಾಲದೊಳ್ - ಲಯಕಾಲದಲ್ಲಿ, ಇಂತಿವು - ಈ ಭೂತಂಗಳು, ಅಡಂಗಿಪೋಗೆ - ನಷ್ಟವಾಗಿ ಹೋಗಲಾಗಿ, ನೀಂ - ಎಲೆ ಶಿವನೆ ನೀನು, ಶಾಶ್ವತನಾಗಿ ಬಾಳ್ವೆ - ಕೇಡಿಲ್ಲ ದಾತನಾಗಿ ಬದುಕುವೆ.

**ಭಾವಾರ್ಥಬೋಧಿನಿ :** ಕಣ್ಣಿಗೆ ಕಾಣಿಸುವ ಅಚೇತನಗಳಾದ ಆಕಾಶ, ವಾಯು, ಅಗ್ನಿ, ಜಲ, ಭೂಮಿಗಳೆಂಬ ಪಂಚ ಭೂತಗಳು ತಮ್ಮ ತಮ್ಮ ಶಬ್ದಾದಿ-ಗುಣಗಳಿಂದ ಕೂಡಿಕೊಂಡು ಒಂದಕ್ಕಿಂತ ಮತ್ತೊಂದು ವೆಗ್ಗಳವಾಗಿದ್ದರೂ ಅವು ನಶ್ವರವಾದವುಗಳು. ಮತ್ತು ಪ್ರಳಯಕಾಲದಲ್ಲಿ ಅವು ನಷ್ಟವಾಗಿ ಹೋಗುವವು. ಪರಶಿವನೆ, ನೀನು ಮಾತ್ರ ಯಾವಾಗಲೂ ಶಾಶ್ವತನಾಗಿ ರಾಜಿಸುತ್ತಿರುವೆ. ೮೬

**ಚಂಪಕಮಾಲಾವೃತ್ತಂ**

ಪೃಥಿವಿ ಜಡಂ ಜಡಂ ಸಲಿಲಮಗ್ನಿಜಡಂ ಸ್ವಸನಂ ಜಡಂ ಜಡಂ
ಪ್ರಥಮಗುಣೈಕವೃತ್ತಿನಭಮಿಂತಿವನಾತ್ಮ ವಿವೇಕಶಕ್ತಿಯಿಂ
ಮಥಿಸಿ ಜಡಾಂಗಮಂ ಬಿಸುಟುನಿಷ್ಕಳಮಪ್ಪ ಷಡಂಗಲಿಂಗ ಸ
ತ್ಪಥಗತನಪ್ಪನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೮೭

**ಟೀಕೆ :** ಪೃಥಿವಿ - ಭೂಮಿಯು, ಜಡಂ - ಅಚೇತನವು, ಸಲಿಲಂ - ಜಲವು, ಜಡಂ - ಅಚೇತನವು, ಅಗ್ನಿ - ವಹ್ನಿಯು, ಜಡಂ - ಅಚೇತನವು, ಶ್ವಸನಂ - ವಾಯು, ಜಡಂ - ಅಚೇತನವು, ಪ್ರಥಮಗುಣೈಕವೃತ್ತಿನಭಂ - ಪ್ರಥಮಗುಣ - ಶಬ್ದಗುಣದಿಂದ, ಏಕ - ಮುಖ್ಯವಾದ, ವೃತ್ತಿ - ವರ್ತನೆಯುಳ್ಳ, ನಭಂ - ಆಕಾಶವು, ಜಡಂ - ಅಚೇತನವು, ಇಂತು - ಹೀಗೆ, ಇವಂ - ಇವನ್ನು ಆತ್ಮವಿವೇಕಶಕ್ತಿಯಿಂ - ತನ್ನ ಜ್ಞಾನ ಸಾಮರ್ಥ್ಯದಿಂದ, ಮಥಿಸಿ - ಕಡೆದು, ಜಡಾಂಗಮಂ - ಅಚೇತನ ಶರೀರವನ್ನು, ಬಿಸುಟು - ವಿಸರ್ಜಿಸಿ, ನಿಷ್ಕಳಮಪ್ಪ - ಕಲಾತೀತವಾದ, ಷಡಂಗಲಿಂಗಸತ್ಪಥಗತನಪ್ಪನಯ್ಯ - ಷಡಂಗಲಿಂಗ - ಆರು ಲಿಂಗಗಳ, ಸತ್ಪಥ - ಸನ್ಮಾರ್ಗವನ್ನು, ಗತನಪ್ಪನಯ್ಯ- ಐದುವಾತನಹನು.

**ಭಾವಾರ್ಥಬೋಧಿನಿ :** ವೀರಶೈವನು ಭೂಮಿ, ಜಲ, ಅಗ್ನಿ, ವಾಯು, ಶಬ್ದವೇ ಅಸಾಧಾರಣಗುಣವಾಗುಳ್ಳ ಆಕಾಶವೆಂಬಿವು ಅಚೇತನಗಳೆಂಬುದನ್ನು ತನ್ನ ವಿವೇಕಶಕ್ತಿಯಿಂದರಿದು, ಪಂಚ ಭೂತಾತ್ಮಕವಾದ ಜಡಾಂಗವನ್ನು ಬಿಸುಟು, ಭಕ್ತಾದಿಯಾದ ಷಡಂಗಗಳ ಮತ್ತು ಆಚಾರಾದಿಯಾದ ಷಡ್ಲಿಂಗಗಳ ಸತ್ಪಥವಾಗಿರುವ ಷಟ್ ಸ್ಥಲಮಾರ್ಗವನ್ನು ಹೊಂದುವಾತನಾಗಿರುವನಯ್ಯ ಪರಶಿವನೆ. ೮೭

**ಅವತಾರಿಕೆ :** ನಿಜಾನಂದ ತೃಪ್ತನಾಗಿ ನಿಸ್ಪೃಹನಾದ ಶರಣಂಗೆ ಕಾಂಕ್ಷೆಯಿಂದೊಂದ ಬೇಡುವುದು ಸಲ್ಲದೆಂದು ಪೇಳುತ್ತಿರ್ದಪಂ.

**ಚಂಪಕಮಾಲಾವೃತ್ತಂ**

ಮಾಡಿದಪಾಪಮಿಲ್ಲದೊಡೆ ಮಾಡುವಪಾಪಮದಿಲ್ಲ ಮುಂದೆ ತಾಂ
ನೋಡಲು ಪಾಪಮೆಂಬುದದು ಮುನ್ನವೆಯಿಲ್ಲ ಬಿಡಾದೊಡಂತದಂ
ಮಾಡಲು ಕರ್ತನಲ್ಲ ಪರತಂತ್ರನದಂತಿರಲಿನ್ನು ನಿನ್ನನಾಂ
ಬೇಡುವ ಪಾಪಮುಂಟೆ ಪರಮಪ್ರಭುವೇ ಮಹದೈವುರೀಶ್ವರಾ ೮೮

**ಟೀಕೆ :** ಮಾಡಿದಪಾಪಂ - ಮೊದಲುಮಾಡಿದ ಪಾಪವು, ಇಲ್ಲದೊಡೆ - ಇಲ್ಲದಿರ್ದೊಡೆ, ಮುಂದೆ - ಇನ್ನು, ಮಾಡುವಪಾಪಂ - ಮಾಡತಕ್ಕ ಪಾಪವು, ತಾಂ - ತಾನು, ಅದಿಲ್ಲ - ಅದು ತಾನಿಲ್ಲ, ನೋಡಲು - ವಿಚಾರಿಸಲಾಗಿ, ಪಾಪ ಮೆಂಬುದದು - ಪಾಪವೆಂಬುದು ತಾನು, ಮುನ್ನವೆಯಿಲ್ಲ - ಮೊದಲೇ ಇಲ್ಲ, ಬಿಡು - ವಿಸರ್ಜಿಸು, ಆದೊಡೆ - ಉಂಟಾದೊಡೆ, ಅಂತದಂ - ಹಾಗದನ್ನು ಮಾಡಲು - ಮಾಡುವುದಕ್ಕೆ, ಕರ್ತನಲ್ಲ - ಸ್ವತಂತ್ರನಲ್ಲ, ಪರತಂತ್ರಂ - ಪರಾಧೀನನು, ಅದಂತಿರಲಿ - ಅದುಹಾಂಗಿರಲಿ, ಇನ್ನು - ಇನ್ನುಮುಂದೆ, ನಿನ್ನಂ - ನಿನ್ನನ್ನು, ಆಂ - ನಾನು, ಬೇಡುವ - ಬೇಡುವಂಥ, ಪಾಪಮುಂಟೆ - ದೋಷ ಮುಂಟೆ? ಇಲ್ಲ.

**ಭಾವಾರ್ಥಬೋಧಿನಿ :** ಪರಶಿವನೇ, ಮೊದಲುಮಾಡಿದ ಪಾಪವು (ಪಾಪಕರ್ಮವು) ಇಲ್ಲದಿದ್ದರೆ ಇನ್ನುಮುಂದಾದರೂ ಮಾಡಬೇಕೆಂಬ (ಪಾಪಕರ್ಮ)ವು ಉಂಟಾಗಲಾರದು. ಇನ್ನು ವಿಚಾರಮಾಡಿ ನೋಡಲಾಗಿ, ಪಾಪವೆಂಬುದೊಂದು ಮೊದಲಿಂದಲೇ ಇಲ್ಲಬಿಡು. ಏಕೆಂದರೆ - ಹಾಗೆ ಆ ಪಾಪವನ್ನು ಮಾಡಲಿಕ್ಕೆ

ನಾನು ಕರ್ತನೂಅಲ್ಲ. ಪರಾಧೀನ(ನಿನ್ನಅಧೀನ)ನಾಗಿರುವೆನು.ಹೀಗಿರುವಲ್ಲಿ ಮುಂದಾದರೂ ನಿನ್ನಕುರಿತು ಯಾವುದಾದರೊಂದನ್ನು ಬೇಡುವ ಪಾಪವಿರುವುದೇನು? ಇಲ್ಲ. ಶರಣನಾದವನಿಗೆ ಬೇಡುವುದೆಂಬುದೇ ಪಾಪವೆನಿಸುವುದು; ಅವನು ಆ ಪಾಪವನ್ನು ಮಾಡಲಾರನೆಂದು ತಾತ್ಪರ್ಯ. ೮೮

## ಉತ್ಪಲಮಾಲಾವೃತ್ತಂ

ಬೇಡುವವಂ ವಿಚಾರಿಪೊಡೆ ಭಕ್ತನೆ ಯಲ್ಲಭಿವಾಂಛಿತಾರ್ಥಮಂ
ಬೇಡಿಸಿಕೊಂಬವಂ ಕಡೆಗೆ ದೇವನೆಯಲ್ಲಭಯೈಕಮಿಂತಿವಂ
ಕೂಡುತಿರಲ್ಭವಂ ಭವಮನುಳ್ಳವನೇ ಭವಿಯಾಭವಿತ್ವಮಂ
ಮಾಡುವಭಕ್ತಿಯೇಕೆ ಪರಮಪ್ರಭುವೇ ಮಹದೈಪುರೀಶ್ವರಾ ೮೯

**ಟೀಕೆ :** ಬೇಡುವವಂ - ಯಾಚಿಸುವಾತನು, ವಿಚಾರಿಪೊಡೆ - ವಿಚಾರಿಸಲಾಗಿ, ಭಕ್ತನೆಯಲ್ಲ - ಶಿವಭಕ್ತನೇ ಅಲ್ಲ, ಅಭಿವಾಂಛಿತಾರ್ಥಮಂ - ಬಯಸಿದಂಥ ಅರ್ಥವನ್ನು, ಬೇಡಿಸಿಕೊಂಬವಂ - ಬೇಡಿಸಿಕೊಂಬಾತನು, ಕಡೆಗೆ - ಅಂತ್ಯಕ್ಕೆ, ದೇವನೆಯಲ್ಲ - ದೇವನೆನಿಸುವಾತನೇ ಅಲ್ಲ, ಉಭಯೈಕಂ - ಎರಡೂ ಒಂದೆಯೇ, ಇಂತಿವಂ - ಹೀಂಗೆ ಎರಡನು, ಕೂಡುತಿರಲ್ - ಸಂಬಂಧಿಸಲಾಗಿ, ಭವಂ - ಸಂಸಾರವು, ಭವಮನುಳ್ಳವನೇ - ಸಂಸಾರವನುಳ್ಳಾತನೇ, ಭವಿ - ಸಂಸಾರಿಯು, ಆಭವಿತ್ವಮಂ - ಆ ಸಂಸಾರಿತನವನು, ಮಾಡುವಭಕ್ತಿ - ಉಂಟುಮಾಡುವಭಕ್ತಿಯು, ಏಕೆ - ಏನು ಪ್ರಯೋಜನವು.

**ಭಾವಾರ್ಥಬೋಧಿನಿ :** ವಿಚಾರಿಸಲಾಗಿ – ಬೇಡುವಾತನು ಭಕ್ತನೇ ಅಲ್ಲ. ಬಯಸಿದುದನ್ನು ಬೇಡಿಸಿಕೊಂಬಾತನು ಕೊನೆಗೆ ದೇವರೇ ಅಲ್ಲ. ಬೇಡುವಾತನು ಬೇಡಿಸಿಕೊಂಬಾತನು – ಇವರಿಬ್ಬರೂ ಒಂದೆಯೇ. ಹೀಗೆ ಬೇಡುವುದು ಬೇಡಿಸಿಕೊಳ್ಳುವುದೂ ಇವೆರಡೂ ಕೂಡಿದಲ್ಲಿ ಭವವುಂಟಾಗುವುದು. ಭವವುಳ್ಳವನೇ ಭವಿಯೆನಿಸುವನು. ಈರೀತಿಯಾದ ಭವಿತ್ವವನ್ನು (ಭವವನ್ನು) ಉಂಟುಮಾಡುವ ಭಕ್ತಿಯಿಂದ ಪ್ರಯೋಜನವೇನು ? (ಬೇಡುವುದು ಸಕಾಮಭಕ್ತಿಯಾಗುವುದರಿಂದ ಅಂತಹಭಕ್ತಿಯಿಂದ ಭವಬಂಧನವು ತಪ್ಪದೆಂದು ತಾತ್ಪರ್ಯ) ೮೯

**ಉತ್ಪಲಮಾಲಾವೃತ್ತಂ**

ಬೇಡದಮುನ್ನ ತಾನೆ ಕುಡುವಾತನೆ ದೇವನಭೀಷ್ಟಸಿದ್ಧಿಯಂ
ಬೇಡದೆ ಕಾಡದೆಯ್ದುವನೆ ಭಕ್ತ ನಯತ್ನದಿ ನಪ್ರಯಾಸದಿಂ
ಬೇಡುವ ಕಾಡು ವಾಯಸಗೊಳುತ್ತಿಹ ಭಕ್ತಿಯೆ ಪಾಪ ಮಿಂತಿದಂ
ಬೇಡದಹಾಂಗೆ ಮಾಡು ಪರಮಪ್ರಭುವೇ ಮಹದೈಪುರೀಶ್ವರಾ ೯೦

**ಟೀಕೆ :** ಅಭೀಷ್ಟಸಿದ್ಧಿಯಂ - ಮನೋರಥಸಿದ್ಧಿಯನು, ಬೇಡದಮುನ್ನ- ಬೇಡುವುದರಿಂದ ಮೊದಲು, ತಾನೆ - ತನ್ನಿಂದತಾನೇ, ಕುಡುವಾತನೆ - ಕೊಡು ವಂಥಾತನೆ, ದೇವಂ - ಕರ್ತನು, ಅಯತ್ನದಿಂ - ಯತ್ನವಿಲ್ಲದೆ, ಅಪ್ರಯಾಸದಿಂ - ಪ್ರಯಾಸವಿಲ್ಲದೆ, ಬೇಡದೆ ಕಾಡದೆ – ಬೇಡುವುದೂ ಕಾಡುವುದೂ ಇಲ್ಲದೆ, ಎಯ್ದುವನೆ - ಐದುವಾತನೆ, ಭಕ್ತಂ - ಶಿವಭಕ್ತನು, ಬೇಡುವ ಕಾಡುವ - ಬೇಡುವ ಕಾಡುವುದರಿಂದೆ, ಆಯಾಸಗೊಳ್ಳುತ್ತಿಹ - ಕೋಟಲೆಗೊಳ್ಳುತ್ತಿರ್ಪ, ಭಕ್ತಿ - ಭಕ್ತಿ ತಾನೇ, ಪಾಪಂ - ಪಾಪವು, ಇಂತಿದಂ - ಹೀಗೆಂಬುದನ್ನು, ಬೇಡದಹಾಂಗೆ ಮಾಡು - ಬೇಡದಹಾಗೆಮಾಡು.

**ಭಾವಾರ್ಥಬೋಧಿನಿ :** ಬೇಡುವುದರಿಂದ ಮೊದಲೇ ಭಕ್ತನ ಮನೋರಥ ಸಿದ್ಧಿಯನ್ನು ತನ್ನಿಂದತಾನೇ ಕೊಡುವಾತನೇ ದೇವರು. ಪ್ರಯತ್ನಗೈಯ್ಯದೆ, ಪ್ರಯಾಸಪಡದೆ, ಬೇಡದೆ, ಕಾಡದೆಯಿದ್ದು. ದೇವರನ್ನು ಹೊಂದುವಾತನೇ ಭಕ್ತನು. ಇನ್ನು ಬೇಡುತ್ತ - ಕಾಡುತ್ತ - ಆಯಾಸಗೊಳ್ಳುತ್ತಿರುವ ಭಕ್ತಿಯೇ ಪಾಪಕರ್ಮವೆನಿಸುವುದು. ಇಂತಹ ಭಕ್ತಿಯನ್ನು ಬೇಡದಂತೆ ಅನುಗ್ರಹಿಸು ಶಿವನೆ, (ಶರಣನಿಗೆ ಸಕಾಮಭಕ್ತಿಯು ಅಪೇಕ್ಷಿತವಲ್ಲವೆಂದು ತಾತ್ಪರ್ಯ) ೯೦

**ಉತ್ಪಲಮಾಲಾವೃತ್ತಂ**

ಬೇಡುವುದಾವುದಿಲ್ಲದುದನುಳ್ಳುವದುಂಟದ ನಿಲ್ಲಮಾಡಿ ತಾಂ
ಬೇಡಲದೇಕೆ ಬೇಡಿದೊಡೆ ಬಾರದುದಿಲ್ಲದುದಿಲ್ಲ ಸರ್ವಥಾ
ಬೇಡದೆ ಮಾಣ್ದೊಡುಳ್ಳುದದು ಪೋಗದದೀಗ ಯಥಾರ್ಥ ಮಿಂತಿದಂ
ಬೇಡದಹಾಂಗೆಮಾಡು ಪರಮಪ್ರಭುವೇ ಮಹದೈಪುರೀಶ್ವರಾ ೯೧

**ಟೀಕೆ :** ಇಲ್ಲದುದಂ - ಇಲ್ಲದವಸ್ತುವನ್ನು, ಬೇಡುವುದಾವುದು - ಬೇಡುವುದೇನು ? ಉಳ್ಳುದು - ಉಂಟಾದ ವಸ್ತುವು, ಅದುಂಟು - ಅದುಂಟೇ ಉಂಟು, ಅದಂ - ಆ ವಸ್ತುವನ್ನು, ಇಲ್ಲಮಾಡಿ - ಇಲ್ಲದುದನಾಗಿಮಾಡಿ, ತಾಂ - ತಾನು, ಬೇಡಲದೇಕೆ - ಬೇಡುವುದು ತಾನೇಕೆ ? ಬೇಡಿದೊಡೆ - ಯಾಚಿಸಿದೊಡೆ, ಬಾರದುದು - ತಾನು ಕೈಸೇರದುದೂ, ಇಲ್ಲದುದು - ಇಲ್ಲದವಸ್ತುವೂ, ಇಲ್ಲ - ಇಲ್ಲವೇ ಇಲ್ಲ, ಸರ್ವಥಾ - ಎಲ್ಲಬಗೆಯಿಂದೆಯೂ, ಬೇಡದೆಮಾಣ್ದೊಡೆ - ಬೇಡದೆ ಬಿಟ್ಟೊಡೆ, ಉಳ್ಳುದು - ಉಂಟಾದುದು, ಅದುಪೋಗದು - ಅದುಪೋಗದೆ ಇರ್ಪುದು, ಅದೀಗ ಯಥಾರ್ಥಂ - ಅದೀಗವೇ ನಿಶ್ಚಯವು, ಇಂತಿದಂ - ಈ ತೆರದವಸ್ತುವನ್ನು ಬೇಡದಹಾಂಗೆಮಾಡು - ಯಾಚಿಸದಂತೆಮಾಡು.

**ಭಾವಾರ್ಥಬೋಧಿನಿ :** ಇಲ್ಲದವಸ್ತುವನ್ನು ಬೇಡುವುದೇನಿರುವುದು ? ಇದ್ದವಸ್ತುವು ಇದ್ದೇಇರುವುದು. ಇದ್ದವಸ್ತುವನ್ನು ತನ್ನಲ್ಲಿ ಇಲ್ಲದುದನ್ನಾಗಿ ಮಾಡಿ, ಅದನ್ನು ಬೇಡುವವೇತಕ್ಕೆ ? ಬೇಡಿದರೆ ಕೈಸೇರದುದೂ, ಯಾವಾಗಲೂ ಇಲ್ಲದವಸ್ತುವೂ ಇಲ್ಲವೇಇಲ್ಲವಲ್ಲವೆ ? ಯಾವ ಬಗೆಯಿಂದಲಾದರೂ ಬೇಡದೆಬಿಟ್ಟರೆ ಇದ್ದುದು ಹೋಗುವುದೇನು ? ಹೋಗದು; ಇದುನಿಶ್ಚಯ. ಆದುದರಿಂದ ಇಲ್ಲದವಸ್ತುವನ್ನು ಬೇಡದಂತೆಮಾಡು ಶಿವನೆ, (ಇದ್ದುದು ಹೋಗದು, ಇಲ್ಲದುದು ಬಾರದು. ಆದುದರಿಂದ ಯಾಚನೆಯಕಾಂಕ್ಷೆಯು ನಿರರ್ಥಕವೆಂದು ತಾತ್ಪರ್ಯ) ೯೧

**ಉತ್ಪಲಮಾಲಾವೃತ್ತಂ**

ಬೇಡುವುದೀಗ ಕಾಮಮದು ಬಾರದುದೇ ಕಡುಗೋಪಮಂತವ
ಕ್ಕೀಡಹುದೀಗ ಲೋಭಮದರಿಂ ಮರೆದಿರ್ಪುದೆ ಮೋಹಮಲ್ಲಿ ಪೊ
ಕ್ಕಾಡುವುದೀಗ ದುರ್ಮದ ಮದಂ ಬಲಿದಿರ್ಪುದು ತಾನೆಮತ್ಸರಂ
ಬೇಡುವ ಪಾಪಮಿಪ್ಪು ಪರಮಪ್ರಭುವೇ ಮಹದೈವುರೀಶ್ವರಾ ೯೨

**ಟೀಕೆ :** ಬೇಡುವುದೀಗ - ಯಾಚಿಸುವುದೀಗ, ಕಾಮಂ - ಕಾಮವು, ಅದು - ಆ ವಸ್ತು, ಬಾರದುದೇ - ಬಾರದಿರ್ಪುದೇ, ಕಡುಗೋಪಂ - ವೆಗ್ಗಳವಾದ ಕ್ರೋಧವು, ಅಂತದಕ್ಕೆ - ಆ ವಸ್ತುವಿಗೆ, ಈಡಹುದೀಗ - ಒಳಗಾಗುವುದೀಗ,

ಲೋಭಂ - ಲೋಭವು, ಅದರಿಂ - ಆ ವಸ್ತುವಿನಿಂದೆ, ಮರೆದಿರ್ಪುದೆ - ಅಜ್ಞಾನದಿಂದಿರ್ಪುದೇ, ಮೋಹಂ - ಮೋಹವು, ಅಲ್ಲಿ - ಆ ವಸ್ತುವಿನಲ್ಲಿ, ಪೊಕ್ಕಾಡುವುದೀಗ - ತೇಂಕಾಡುವುದೀಗ, ದುರ್ಮದಂ - ನಿಕೃಷ್ಟವಾದ ಮದವು, ಅದಂ - ಆ ವಸ್ತುವನು, ಬಲಿದಿರ್ಪುದುಮತಾನೆ - ದೃಢೀಕರಿಸಿರ್ಪುದು ತಾನೇ, ಮತ್ಸರಂ - ಮತ್ಸರವು, ಇಷ್ಟು - ಇವೆಲ್ಲವೂ, ಬೇಡುವಪಾಪಂ - ಯಾಚಿಸುವ ಪಾಪವೇ.

**ಭಾವಾರ್ಥಬೋಧಿನಿ :** ಒಂದು ವಸ್ತುವನ್ನು ಕಾಮಿಸಿ ಬೇಡುವುದೇ ಕಾಮವೆನಿಸುವುದು. ಕಾಮಿಸಿದ ವಸ್ತುವು ದೊರೆಯದಿದ್ದರೆ ಕ್ರೋಧವುಂಟಾಗುವುದು. ಒಂದು ಪಕ್ಷದಲ್ಲಿ ಕಾಮಿಸಿದ ವಸ್ತುವು ದೊರೆತರೂ ಅದನ್ನು ಕಾಪಾಡಿಕೊಳ್ಳುವ ಲೋಭವುಂಟಾಗುವುದು. ಕಾಪಾಡುವ ವಸ್ತುವಿಗಂಟಿಕೊಂಡು ವಿವೇಕಗೆಟ್ಟಿರುವುದೇ ಮೋಹವು. ಕಾಪಾಡಿದ ವಸ್ತುವು ತನ್ನದೆಂದು ಸೊಕ್ಕಿರುವುದೇ ಮದವು. ಆ ವಸ್ತುವನ್ನು ದೃಢವಾಗಿ ಹಿಡಿದುಕೊಂಡು ಬೀಗುತ್ತಿರುವುದೇ ಮತ್ಸರವು. ಹೀಗೆ ಕಾಮಾದ್ಯರಿಷಡ್ವರ್ಗವು ಯಾಚಿಸುವ ಪಾಪದಿಂದ ಸಂಭವಿಸುವುದಲ್ಲವೆ ? ೯೨

## ಉತ್ಪಲಮಾಲಾವೃತ್ತಂ

ಬೇಡುವವಂಗೆ ಬೇಡುತಿಹ ದೈನ್ಯ ಮದೊಂದುರೆ ಬೇಡಿಬರ್ಪ ಹೆ
ಗ್ಗೋಡಿನ ವಿತ್ತದಿಂಪಕಟಪೂರ್ಣಮೆನಿಪ್ಪುದೆ ಮತ್ತೆ ಮತ್ತೆ ತಾಂ
ಬೇಡಿಸುತಿರ್ಪುದೈಸೆಸಿನೆ ಬೇಡವಮಂ ಗದು ಪೂರ್ಣವಾಗಿ ಕೈ
ಗೂಡಿಸು ತಿಕ್ಕುತಿದ್ಕು ಪರಮಪ್ರಭುವೇ ಮಹದೈಪುರೀಶ್ವರಾ ೯೩

**ಟೀಕೆ :** ಬೇಡುವವಂಗೆ - ಯಾಚಿಸುವಾತಂಗೆ, ಬೇಡುತಿಹದೈನ್ಯಂ - ಬೇಡುತಿರ್ಪದೈನ್ಯವು, ಉರೆ - ಚೆನ್ನಾಗಿ, ಅದೊಂದು - ಅದುತಾನೊಂದು, ಬೇಡಿಬರ್ಪ - ಯಾಚಿಸಿಬರ್ಪ, ಹೆಗ್ಗೋಡಿನವಿತ್ತದಿಂದೆ - ಹೆಗ್ಗಳವಾಗಿಕೊಟ್ಟದ್ರವ್ಯದಿಂದೆ, ಪೂರ್ಣಮೆನಿಪ್ಪುದೆ - ಸಾಕೆಂದೆನಿಸುವುದೆ? ಅಕಟ - ಅಯ್ಯೋ! ಮತ್ತೆ ಮತ್ತೆ - ಮರಳಿಮರಳಿ, ತಾಂ - ತಾನು, ಬೇಡಿಸುತಿರ್ಪುದೈಸೆ - ಯಾಚಿಸುತಿರ್ಪುದಪ್ಪೇ, ಅದು - ಅದುನಿಮಿತ್ತವಾಗಿ, ಅದು - ಆವಸ್ತುವು, ಸಿನೆಬೇಡವವಂಗೆ - ಏನನ್ನೂ

ಬೇಡದಾತಂಗೆ, ಪೂರ್ಣಮಾಗಿ - ಸಾಕೆಂಬಂತೆ, ಕೈಗೂಡಿಸುತೆ - ಕೈಸೇರಿಸುತೆ. ಇಕ್ಕುತಿರ್ಕು - ಕೊಡುತ್ತಿರುವುದು.

**ಭಾವಾರ್ಥಬೋಧಿನಿ :** ಬೇಡುವವನಲ್ಲಿರುವ ಬೇಡುವ ದರಿದ್ರತೆಯು ಬೇಡುವದರಿಂದ ಬರುವ ಮಿಗಿಲಾದ ಧನದಿಂದಲಾದರೂ ಸಾಕೆನಿಸುವುದೇನು ? ಇಲ್ಲ. ಅಯ್ಯೋ ! ಮತ್ತೆ ಮತ್ತೆ ಬೇಡಿಸುತಿರ್ಪುದಲ್ಲವೆ ? ಅದುಕಾರಣ - ವಸ್ತುವನ್ನು ಕಿಂಚಿತ್ತಾದರೂ ಬೇಡದ ನಿರಪೇಕ್ಷಿತನಿಗೆ ಸಾಕೆಂಬಂತೆ ಎಲ್ಲವೂ ಕೈಗೂಡುವುದು. (ಅಪೇಕ್ಷಾರಹಿತನಿಗೆ ಇದ್ದುದೇ ಸಾಕೆನಿಸಿ, ತೃಪ್ತಿಯನ್ನುಂಟುಮಾಡುವುದೆಂದು ತಾತ್ಪರ್ಯ.) ೯೩

**ಉತ್ಪಲಮಾಲಾವೃತ್ತಂ**

ಬೇಡುವುದೇನು ಪಾಪಮೆ ಸದಾಶಿವ ನಿನ್ನನೆ ಬೇಡುತನ್ಯರಂ
ಬೇಡದಸಿದ್ಧಿಯಂ ಪಡೆಯದಿರ್ಪುದರಿಂದಮೆ ಪಾಪಮಾಮುದಾ
ಬೇಡುವಪಾಪಮಂ ಮರೆದುಮಾಡದೆ ನಿಸ್ಪೃಹನಾಗಿ ನಿನ್ನನಾಂ
ಬೇಡದಹಾಂಗೆಮಾಡು ಪರಮಪ್ರಭುವೇ ಮಹದೈಪುರೀಶ್ವರಾ ೯೪

**ಟೀಕೆ :** ಭೋಸದಾಶಿವ - ಎಲೈ ಪರಮಮಂಗಲ ಸ್ವರೂಪನೆ, ಬೇಡುವುದೇನು - ಬೇಡುವುದು ತಾನೇನು, ಪಾಪಮೆ - ದೋಷವೆ, ? ಅಲ್ಲ ನಿನ್ನನೆ ಬೇಡುತೆ - ನಿನ್ನನೊಬ್ಬನನ್ನೇ ಬೇಡುತ್ತ, ಅನ್ಯರಂ - ಬೇರೊಬ್ಬರನ್ನು, ಬೇಡದ ಸಿದ್ಧಿಯಂ - ಯಾಚಿಸದ ಸಿದ್ಧಿಯನು, ಪಡೆಯದಿರ್ಪುದರಿಂದಮೆ - ಹೊಂದದಿರುವುದರಿಂದಲೇ, ಪಾಪಂ - ಪಾಪವು, ಆಮುದು - ಉಂಟಾಮುದು, ಆ ಬೇಡುವ ಪಾಪಮಂ - ಯಾಚಿಸುವ ಆ ದೋಷವನು, ಮರೆದುಮಾಡದೆ - ಮರೆದು ಯಾಚಿವುದಿಲ್ಲದೆ, ನಿಸ್ಪೃಹನಾಗಿ - ನಿರಾಸಕ್ತನಾಗಿ, ನಿನ್ನಂ - ನಿನ್ನನು, ಆಂ - ನಾನು, ಬೇಡದಹಾಂಗೆಮಾಡು - ಯಾಚಿಸದಂತೆಮಾಡು.

**ಭಾವಾರ್ಥಬೋಧಿನಿ :** ಸದಾಮಂಗಲಸ್ವರೂಪನೆ, ಬೇಡುವುದೇನು ಪಾಪವಲ್ಲ. ಏಕಂದರೆ - ಶಿವನೆ, ನಿನ್ನನ್ನುಮಾತ್ರ ಬೇಡಿ, ಅನ್ಯರನ್ನು ಬೇಡದ ಸಿದ್ಧಿಯನ್ನು ಪಡೆದುಕೊಳ್ಳದಿರುವುದರಿಂದಲೇ ಅನ್ಯರನ್ನು ಬೇಡುವುದು ಪಾಪವೆನಿಸುವುದು. ಈ ವಿಧವ ಬೇಡುವ ಪಾಪವನ್ನು ಮರೆದಾದರೂ ಮಾಡದಂತೆ ನಿಸ್ಪೃಹನಾಗಿದ್ದು ನಿನ್ನನ್ನೂ ಬೇಡದಂತೆ ಅನುಗ್ರಹಿಸು. ೯೪

## ಚಂಪಕಮಾಲಾವೃತ್ತಂ

ಪುರುಷಕೃತ ಪ್ರಯತ್ನಮುಮಯತ್ನಮು ಮಿಂತೆರಡುಂಭವತ್ಕೃಪಾ
ಪರಿಣತಮಾಗೆ ಸಿದ್ಧಿಸುಗುಮಲ್ಲದೆ ತಾಂ ಕೃತಯತ್ನಮಾದೊಡಂ
ನಿರುಪಮಸಿದ್ಧಿದಂ ಕೃಪೆಯದಿಲ್ಲದೊಡಿಲ್ಲದರಿಂದಯತ್ನದಿಂ
ದಿರುತಿಹ ಹಾಂಗೆ ಮಾಡು ಪರಮಪ್ರಭುವೇ ಮಹದೈಪುರೀಶ್ವರಾ ೯೫

**ಟೀಕೆ :** ಪುರುಷಕೃತ ಪ್ರಯತ್ನಮುಂ - ಪುರುಷನಿಂ ಮಾಡಲ್ಪಟ್ಟ ಯತ್ನವೂ ಅಯತ್ನಮುಂ - ಯತ್ನವ ಮಾಡದಿಹಣವೂ, ಇಂತೆರಡುಂ - ಈ ಯತ್ನಾಯತ್ನಂಗಳೆರಡೂ, ಭವತ್ಕೃಪಾಪರಿಣತಮಾಗೆ - ನಿನ್ನ ಕೃಪಾಸ್ವರೂಪವಾಗಲಾಗಿ, ಸಿದ್ಧಿಸುಗುಮಲ್ಲದೆ - ಕೈಸೇರುವುದಲ್ಲದೆ, ತಾಂ - ತಾನು, ಕೃತಯತ್ನಮಾದೊಡಂ - ಮಾಡಲ್ಪಟ್ಟ ಪ್ರಯತ್ನವುಳ್ಳುದಾದರೂ, ನಿರುಪಮ ಸಿದ್ಧಿದಂ - ನಿರುಪಮ - ಪ್ರತಿಯಿಲ್ಲದ, ಸಿದ್ಧಿದಂ - ಮೋಕ್ಷವನ್ನು ಕೊಡುವಂತಹುದು, ಅದುಕೃಪೆ - ಆ ನಿನ್ನ ಕರುಣವು, ಇಲ್ಲದೊಡೆ - ಇಲ್ಲದಿರ್ದೊಡೆ, ಇಲ್ಲ - ಆಗುವುದಿಲ್ಲ, ಅದರಿಂದೆ - ಆ ಕಾರಣದಿಂದ, ಅಯತ್ನದಿಂದೆ, ಇರುತಿಹ ಹಾಂಗೆ ಮಾಡು - ಇರುತ್ತಿರುವಂತೆ ಎಸಗು.

**ಭಾವಾರ್ಥಬೋಧಿನಿ :** ಪರಶಿವನೆ, ಪುರುಷರು ಪ್ರಯತ್ನವನ್ನು ಮಾಡಲಿ. ಮಾಡದೇ ಇರಲಿ ಆ ಪ್ರಯತ್ನಾಪ್ರಯತ್ನಗಳೆರಡೂ ನಿನ್ನ ಕೃಪೆಯ ಸ್ವರೂಪವನ್ನು ಹೊಂದಿದಾಗ (ಕೃಪೆಯಿಂದ ಪಕ್ವವಾದಾಗ) ಸಿದ್ಧಿಸುವವು. ಅಸದೃಶಸಿದ್ಧಿಯನ್ನುಂಟು ಮಾಡುವ ಭವತ್ಕೃಪೆಯಿಲ್ಲದಿದ್ದರೆ ಎಷ್ಟು ಪ್ರಯತ್ನ ಮಾಡಿದರೂ ಆ ಪ್ರಯತ್ನವು ಸಿದ್ಧಿಸಲಾರದು. ಆದುದರಿಂದ ನಿನ್ನ ದಯೆಗೆ ದೂರವಾದ ಪ್ರಯತ್ನವನ್ನು ಎಸಗದಿರುವಂತೆ ನನ್ನನ್ನು ಮಾಡು. ೯೫

## ಚಂಪಕಮಾಲಾವೃತ್ತಂ

ಪರುಷಮದಾಗು ತಾಗುತಕಟಾ ಪೊಸಚಿನ್ನದ ಘಟ್ಟಿಯಾದವೋ
ಲ್ನಿರುತ ವಿಜೈಕ್ಯಭಕ್ತಿ ಪೊರವೇಪಡ ಭಾಷೆಯ ಡಂಭಭಕ್ತಿ ಯಾ
ಗುರುತರಭೋಗಸಿದ್ಧಿ ಕರವಾದುದು ಶಾಂಭವಯೋಗಸಿದ್ಧಿ ಯಂ
ತರಿಸಿದು ದೇವನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೯೬

**ಟೀಕೆ** : ಪರುಸಮದು - ಸಿದ್ಧರಸತಾನು, ಆಗುತಾಗುತೆ - ಆಗುತ್ತ ಆಗುತ್ತೆ, ಪೊಸಚಿನ್ನದ ಘಟ್ಟಿಯಾದವೋಲ್ - ನೂತನವಾದ ಸುವರ್ಣಘಟ್ಟಿಯಾದ ಹಾಂಗೆ, ನಿರುತನಿಜೈಕ್ಯಭಕ್ತಿ - ನಿಶ್ಚಯವಾದ ಸಮರಸಭಕ್ತಿಯು, ಪೊರವೇಷ ಭಾಷೆಯು ಡಂಭಭಕ್ತಿಯಾಗಿ - ಬಾಹ್ಯವೇಷಭಾಷೆಗಳ ಬೂಟಕವಾದ ಭಕ್ತಿಯಾಗಿ, ಉರುತರಭೋಗಸಿದ್ಧಿಕರಂ - ಉರುತರಭೋಗ - ಮಹಾಭೋಗಂಗಳ, ಸಿದ್ಧಿಕರಂ- ಸಿದ್ಧಿಯಂ ಮಾಳ್ಪುದು, ಆದುದು - ಉಂಟಾದುದು, ಶಾಂಭವಯೋಗಸಿದ್ಧಿ - ಶಿವ ಸಂಬಂಧಿಯಾದ ಜ್ಞಾನಸಿದ್ಧಿಯು, ಅಂತರಿಸಿದುದು - ಒಳಸರಿದುದು, ಏವೆನಯ್ಯ- ಏನಮಾಡುವೆನಯ್ಯ ? ಅಕಟ - ಅಯ್ಯೋ !

**ಭಾವಾರ್ಥಬೋಧಿನಿ** : ಸಿದ್ಧರಸವು ಲೋಹವನ್ನು ಶುದ್ಧಮಾಡುತ್ತ ಮಾಡುತ್ತ ತಾನೇ ನೂತನ ಸುವರ್ಣದ ಗಟ್ಟಿಯಾಗಿ ಪರಿಣಮಿಸಿದಂತೆ, ನಿಜವಾದ ಸಮರಸಭಕ್ತಿಯು (ನಿಷ್ಕಾಮರೂಪ ಲಿಂಗಾಂಗ ಸಾಮರಸ್ಯಭಕ್ತಿಯು) ಬಾಹ್ಯವೇಷ ಭಾಷೆಗಳ ಆಡಂಬರದ ಭಕ್ತಿಯಾಗಿ ಪರಿಣಮಿಸಿ (ಸಕಾಮಭಕ್ತಿಯಾಗಿ ಪರಿಣಮಿಸಿ) ಮಹಾಭೋಗ ಸಿದ್ಧಿಯನ್ನು ಕೊಟ್ಟಿತು. ಈ ಕಾರಣದಿಂದ ಶಿವಯೋಗಜ್ಞಾನ ಸಿದ್ಧಿಯು ದೂರವಾದುದು ಅಯ್ಯೋ ! ನಾನೇನು ಮಾಡಲಿ ! (ಶಿವಸ್ವರೂಪ ವನ್ನುಂಟುಮಾಡುವ ಸಮರಸಭಕ್ತಿಯು ಆಡಂಬರದ ( ಸಕಾಮ ) ಭಕ್ತಿಯಾಗಿ ಪರಿಣಮಿಸಿದರೆ ಆ ಭಕ್ತಿಯಿಂದ ಫಲಪದವಿಗಳು ದೊರೆಯುವವಲ್ಲದೆ ಶಿವಸ್ವರೂಪವು ದೊರೆಯುವುದಿಲ್ಲವೆಂದು ತಾತ್ಪರ್ಯ.) ೯೬

**ಅವತಾರಿಕೆ** : ಉಪಾಧಿ ನಿರುಪಾಧಿಕ ಭಕ್ತರ ಸ್ವರೂಪಮಂ ಪೇಳು ತ್ತಿರ್ದಪಂ.

**ಚಂಪಕಮಾಲಾವೃತ್ತಂ**

ಅಳಿಸರಘಪ್ಪಯಕ್ಕೆ ಸಮವೃತ್ತಿ ಮಧುವ್ರತಧರ್ಮ ಮಾದೊಡಂ
ತಿಳಿವೊಡೆ ಬಂಧಮೋಕ್ಷಯುಗ ಮಾಗಿಹು ದಾಸಮವೃತ್ತಿ ತದ್ದ್ವಯ
ಕ್ಕಳೆಯೊಳಹಂಗೆ ಭಕ್ತಿಪಥವರ್ತನಸಾಮ್ಯ ಮಭಕ್ತಭಕ್ತಸಂ
ಕುಳ ಮೆರಡಕ್ಕೆ ಬೇರೆ ಪರಮಪ್ರಭುವೇ ಮಹದೈಪುರೀಶ್ವರಾ ೯೭

**ಟೀಕೆ :** ಅಳಿಸರಘದ್ವಯಕ್ಕೆ - ಅಳಿ - ತುಂಬಿಯು, ಸರಘ - ಜೇನು ಹುಳುವಿನ, ದ್ವಯಕ್ಕೆ - ಈ ಎರಡಕ್ಕೆ, ಮಧುವ್ರತಧರ್ಮಂ - ಮಕರಂದಸ್ವೀಕಾರ ಮಾಡುವ ಧರ್ಮವು, ಸಮವೃತ್ತಿ - ಸರಿಯಾದ ವ್ಯಾಪಾರವು, ಆದೊಡಂ - ಆದರೂ, ತಿಳಿವೊಡೆ - ವಿಚಾರಿಸುವೊಡೆ, ಅಸಮವೃತ್ತಿ - ಅಸಮಾನವಾದಧರ್ಮವು, ತದ್ದ್ವಯಕ್ಕೆ - ಆ ಎರಡಕ್ಕೆ, ಇಳೆಯೋಳ್ - ಭೂಮಿಯಲ್ಲಿ, ಬಂಧಮೋಕ್ಷಯುಗ ಮಾಗಿಹುದು - ಬಂಧಮೋಕ್ಷಸ್ವರೂಪಮಾಗಿಹುದು (ಜೇನಹುಳವು ಬಂಧರೂಪವು, ತುಂಬಿ ವಿಲಕ್ಷಣವಾಗಿರ್ಪುದೆಂಬುದರ್ಥಂ), ಅಹಂಗೆ – ಹಾಂಗೆ, ಅಭಕ್ತಭಕ್ತ ಸಂಕುಳವೆರಡಕ್ಕೆ - ಉಪಾಧಿ ನಿರುಪಾಧಿ ಭಕ್ತಸಮೂಹವೆರಡಕ್ಕೆ, ಭಕ್ತಿಪಥ ವರ್ತನೆಯ ಸಮಾನತ್ವವು, ಆದೊಡೇಂ - ಆದೊಡೇನು ? ಬೇರೆ - ಬಂಧಮೋಕ್ಷಂ ಗಳಿಂದೆ ಬೇರಾಗಿರ್ಪುದು.

**ಭಾವಾರ್ಥಬೋಧಿನಿ :** ತುಂಬಿ ಜೇನುಹುಳವೆಂಬೆರಡಕ್ಕೆ ಪುಷ್ಪದ ಮಕ ರಂದವನ್ನು ಸ್ವೀಕಾರಮಾಡುವ ವೃತ್ತಿಯು ಒಂದೇ ಸಮಾನವಾಗಿದ್ದರೂ, ಜೇನು ಹುಳು ಮಕರಂದ ಸಂಗ್ರಹಕ್ಕೋಸ್ಕರವಾಗಿ ಬಂಧವನ್ನು ಪಡೆಯುವುದು. ತುಂಬಿಯು ಸಂಗ್ರಹಿಸುವ ಲೋಭವಿಲ್ಲದಿರುವುದರಿಂದ ಬಂಧದಿಂದ ಮುಕ್ತವಾಗಿ ವಿಹರಿಸುವುದು. ಇವುಗಳಂತೆಯೇ ಸೋಪಾಧಿಕ ನಿರುಪಾಧಿಕ ಭಕ್ತರಿಗೆ ಭಕ್ತಿಮಾರ್ಗ ವೃತ್ತಿಯು ಒಂದೇ ಸಮವಾಗಿದ್ದರೂ, ಸೋಪಾಧಿಕಭಕ್ತನು ಬಂಧವನ್ನೂ ನಿರುಪಾಧಿಕಭಕ್ತನು ಮುಕ್ತಿಯನ್ನೂ ಪಡೆಯುವರು. ೯೭

**ಅವತಾರಿಕೆ :** ಆತ್ಮಸಮರ್ಪಣ ಕ್ರಿಯಾರಹಿತಮಾಗಿ ಬಾಹ್ಯಕ್ರಿಯೆಯಿಂದೆ ಫಲಪದಂಗಳಕಾಂಕ್ಷಿಪರಂ ಖಂಡಿಸುತ್ತಿರ್ದಪಂ.

**ಚಂಪಕಮಾಲಾವೃತ್ತಂ**

ಜಲಕುಸುಮೋದನೋಪಕರಣ ಕ್ರಮಪೂಜೆಯನೊಲ್ದು ಮಾಡಿತ
ತ್ಫಲಮ ನಮರ್ದ್ದು ಕಾಂಕ್ಷಿಪರು ಲೋಗರಮಕ್ಕಳನಿಕ್ಕಿನೋಳ್ಪವೋಲ್
ನೆಲೆಯನಿದಾವ ಭಕ್ತಿಯೊಳಗಾಜಲಮುಖ್ಯಪದಾರ್ಥ ಮಾರದಾ
ಫಲವವಕ್ಕೈಸೆ ದೇವ ಪರಮಪ್ರಭುವೇ ಮಹದ್ವೈಪುರೀಶರಾ ೯೮

**ಟೀಕೆ :** ದೇವ - ಎಲೆ ಸ್ವಯಂಪ್ರಕಾಶರೂಪನೆ, ಲೋಗರಮಕ್ಕಳಂ ಇಕ್ಕಿ - ಪೆರರ ಮಕ್ಕಳ ಬಲಿಯನ್ನಿಕ್ಕಿ, ನೆಲೆಯಂ - ನಿಧಾನವನು, ನೋಳ್ಪ-ವೋಲ್ - ನೋಡುವ ಹಾಂಗೆ, ಜಲಕುಸುಮೋದನೋಪಕರಣಕ್ರಮಪೂಜೆಯಂ - ಜಲ - ನೀರು, ಕುಸುಮ - ಹೂವು, ಓದನ - ಅನ್ನವು, ಉಪಕರಣಕ್ರಮ-ಪೂಜೆಯಂ - ಇವಾದಿಯಾದ ಉಪಕರಣಗಳಿಂದ ಕ್ರಮತಪ್ಪದ ಪೂಜೆಯನು, ಒಲ್ದುಮಾಡಿ - ಪ್ರೀತಿಯಿಂದೆಮಾಡಿ, ತತ್ಫಲಮಂ - ಆ ಫಲವನು, ಅಮರ್ದ್ದು - ಪೊರ್ದಿ, ಕಾಂಕ್ಷಿಪರು - ಬಯಸುವರು, ಆಜಲಮುಖ್ಯಪದಾರ್ಥಂ - ಆ ಉದಕ ಮೊದಲಾದ ಪದಾರ್ಥಂಗಳು, ಆರದು - ಆರೊಡವೆ? ಆ ಫಲಂ - ಅವುಕೊಟ್ಟ ಫಲವು, ಅವಕ್ಕೆಸೆ - ಅವಕಷ್ಟೆ? ಇದಾವಭಕ್ತಿಯೊಳಗು - ಈ ಫಲಂಗಳ ಬಯಸುವುದಾವಭಕ್ತಿಯೊಳಗೆಸೇರಿದುದು? ಸಲ್ಲದೆಂಬುದರ್ಥ.

**ಭಾವಾರ್ಥಬೋಧಿನಿ :** ಸ್ವಾಮಿಯೆ, ಪರರ ಮಕ್ಕಳನ್ನು ಬಲಿಗೊಟ್ಟು ನೆಲದಮರೆಯಲ್ಲಿರುವ ನಿಧಾನವನ್ನು ಹೊಂದಬೇಕೆಂದು ಬಯಸುವವರಂತೆ, ಜಲ, ಕುಸುಮ, ಅನ್ನ ಮೊದಲಾದ ವಸ್ತುಗಳಿಂದ ದೇವಪೂಜೆಯನ್ನು ಮಾಡಿ, ಆ ವಸ್ತುಗಳಿಂದುಂಟಾಗುವ ಫಲವನ್ನು ತಾವು ಪಡೆಯಬೇಕೆಂದು ಬಯಸುವರು. ಆ ಜಲಾದಿವಸ್ತುಸಮೂಹವು ಯಾರಿಗೆ ಸಂಬಂಧಿಸಿರುವುದು? (ತನ್ನದಲ್ಲ) ಆ ವಸ್ತುಗಳಿಂದೊದಗುವ ಫಲವು ಆ ವಸ್ತುಗಳಿಗಳೇ ಆಗುವುದಷ್ಟೆ. ಹೀಗೆ ಫಲವನ್ನು ಬಯಸುವುದು ಆವಭಕ್ತಿಯೊಳಗೆ ಸೇರಿದುದು? ಹೀಗೆ ಮಾಡುವುದು ಸಲ್ಲ ದೆಂಬುದರ್ಥ. ೯೮

### ಉತ್ಪಲಮಾಲಾವೃತ್ತಂ

ಓದನಮಂ ನಿವೇದಿಸಿದ ತತ್ಫಲ ಮೋಷಧಿಗಳ್ಗೆ ಪತ್ರಪು
ಷ್ಪಾದಿಸಮರ್ಚನಾಫಲ ಮದ್ರೈದೇವನಸ್ಪತಿಗಳ್ಗೆ ನಿರ್ಮಲ
ಸ್ವಾದುಜಲಾಭಿಷೇಚಿತಮನಿತ್ತ ಫಲಂ ನದಿಗಳ್ಗೆ ಮಿಕ್ಕವ
ರ್ಗಾವುದೆಂತದಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೯೯

**ಟೀಕೆ :** ಓದನಮಂ - ಓದನರಸವನು, ನಿವೇದಿಸಿದ - ನೈವೇದ್ಯಮಾಡಿದ, ತತ್ಫಲಂ - ಆ ಫಲವು, ಓಷಧಿಗಳ್ಗೆ - ಧಾನ್ಯಂಗಳಿಗೆ, ಪತ್ರಪುಷ್ಪಾದಿಸಮರ್ಚನಾ ಫಲಂ - ಪತ್ರಪುಷ್ಪಾದಿ - ಪತ್ರಪುಷ್ಪಂಗಳು ಮೊದಲಾದವುಗಳ, ಸಮರ್ಚನಾಫಲಂ -

ಒಳ್ಳಿತ್ತಾದ ಪೂಜೆಯ ಫಲವು' ಅದು - ಅದು ತಾನು, ಐದೆ - ಚೆನ್ನಾಗಿ, ವನಸ್ಪತಿಗಳ್ಗೆ - ವೃಕ್ಷಂಗಳಿಗೆ, ನಿರ್ಮಲಸ್ವಾದುಜಲಾಭಿಷೇಚಿತಮಂ - ನಿರ್ಮಲ - ಸ್ವಚ್ಛವಾದ, ಸ್ವಾದುಜಲ - ಸ್ವಾದೂದಕದಿಂದೆ, ಅಭಿಷೇಚಿತಮಂ - ಅಭಿಷೇಕವನು, ಇತ್ತಫಲಂ - ಕೊಟ್ಟಫಲವು, ನದಿಗಳ್ಗೆ - ತೊರೆಗಳ್ಗೆ, ಮಿಕ್ಕವರ್ಗೆ - ಫಲವ ಬೇಡುವರ್ಗೆ, ಆಪ್ಪುದೆಂತಯ್ಯ - ಆ ಫಲವಾಗುವುದೆಂತಯ್ಯ ? ಫಲವಿಲ್ಲವೆಂಬುದರ್ಥಂ.

**ಭಾವಾರ್ಥಬೋಧಿನಿ :** ಅನ್ನವನ್ನು ನೈವೇದ್ಯಮಾಡಿದ ಫಲವು ಧಾನ್ಯಗಳಿಗೂ, ಪತ್ರಪುಷ್ಪಾದಿಗಳಿಂದ ಪೂಜಿಸಿದ ಫಲವು ವೃಕ್ಷಗಳಿಗೂ, ನಿರ್ಮಲ ಸ್ವಾದೋದಕದಿಂದ ಅಭಿಷೇಕಮಾಡಿದ ಫಲವು ನದಿಗಳಿಗೂ ಉಂಟಾಗುವವಲ್ಲದೆ ಆ ಫಲವನ್ನು ಬೇಡುವ ಇತರರಿಗೆ ಲಭಿಸುವುದೆಂತು ? ಲಭಿಸದೆಂಬುದರ್ಥ. ೯೯

**ಚಂಪಕಮಾಲಾವೃತ್ತಂ**

ಕ್ಷಿತಿಜಲವಹ್ನಿವಾಯುನಭವೆಂಬಿವು ನಿನ್ನವು ನಿನ್ನ ಪೂಜೆಗೀ
ಕ್ಷಿತಿಮುಖ ಪಂಚಭೂತಕೃತಮಪ್ಪ ಪದಾರ್ಥಮನಿತ್ತು ತಮ್ಮವೆಂ
ಬತಿಮಮಕಾರದಿಂ ಫಲಮ ನೀಹಿಪರಾತ್ಮಸಮರ್ಪಣ ಕ್ರಿಯಾ
ಮತಿರತಿಹೀನರಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೧೦೦

**ಟೀಕೆ ;** ಭೋ ಪರಮ ಪ್ರಭುವೇ - ಎಲೈ ಜಗದ್ವಲ್ಲಭನೇ, ಕ್ಷಿತಿಜಲವಹ್ನಿವಾಯು ನಭವೆಂಬಿವು - ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶಗಳೆಂಬಿವು, ನಿನ್ನವು - ನಿನ್ನೊಡವೆ, ನಿನ್ನ ಪೂಜೆಗೆ - ನಿನ್ನರ್ಚನೆಗೆ, ಆತ್ಮ ಸಮರ್ಪಣಕ್ರಿಯಾ ಮತಿರತಿಹೀನರ್ - ಆತ್ಮಸಮರ್ಪಣ - ಆತ್ಮಸಮರ್ಪಣವಂ, ಕ್ರಿಯಾ - ಮಾಡುವಲ್ಲಿ, ಮತಿರತಿಹೀನರ್ - ಬುದ್ಧಿಯಲ್ಲಿ ಪ್ರೀತಿಯಿಲ್ಲದವರುಗಳು, ಈ ಕ್ಷಿತಿಮುಖಪಂಚಭೂತಕೃತಮಪ್ಪ - ಈ ಕ್ಷಿತಿಮುಖ - ಈ ಭೂಮಿ ಮೊದಲಾದ, ಪಂಚಭೂತಕೃತಮಪ್ಪ - ಪಂಚಭೂತಂಗಳಿಂದ ಮಾಡಲ್ಪಟ್ಟ, ಪದಾರ್ಥಮಂ - ವಸ್ತುಗಳನು, ತಮ್ಮವೆಂಬ - ತಮ್ಮದು ಎಂಬ, ಅತಿಮಮಕಾರದಿಂ — ಅತ್ಯಂತಮಮಕಾರದಿಂದೆ, ಇತ್ತು - ಕೊಟ್ಟು, ಫಲಮಂ - ಅದರ ಫಲವನ್ನು, ಈಹಿಪರಯ್ಯ - ಇಚ್ಛೈಸುವರು.

**ಭಾವಾರ್ಥಬೋಧಿನಿ :** ಜಗದೀಶನೇ, ಭೂಮಿ, ನೀರು, ಅಗ್ನಿ, ವಾಯು ಆಕಾಶವೆಂಬಿವುಗಳು ನಿನ್ನವು (ನೀನು ಸೃಷ್ಟಿಸಿದವು) ನಿನಗೆ ಆತ್ಮಾರ್ಪಣಮಾಡಿ ಪೂಜೆಮಾಡಬೇಕೆಂಬ ಬುದ್ಧಿಯಿಲ್ಲದೆ, ಭೂಮಿಮೊದಲಾದ ಪಂಚಭೂತಗಳಿಂದಾದ ಅನ್ನಾದಿವಸ್ತುಗಳನ್ನು ತಮ್ಮವೆಂದು ಭಾವಿಸಿ. ಅವನ್ನು ನಿನಗರ್ಪಿಸಿ, ಅವುಗ-ಳಿಂದೊದಗುವ ಫಲವನ್ನು ತಾವು ಪಡೆದುಕೊಳ್ಳಬೇಕೆಂದು ಬಯಸುವರಲ್ಲಾ ? (ಹೀಗೆ ಬಯಸುವುದು ವ್ಯರ್ಥ. ತನ್ನನ್ನು ತಾನು ಅರ್ಪಿಸುವುದರಿಂದಲೇ ತನಗೆ ಫಲಪ್ರಾಪ್ತಿಯಾಗುವುದೆಂದು ತಾತ್ಪರ್ಯ) ೧೦೦

**ಅವತಾರಿಕೆ :** ಪೂಜಾಸಾಧನದ್ರವ್ಯಂಗಳಂ ಪರರಿಂ ತರಿಸಿ ಲಿಂಗಪೂಜೆಯಂ ಮಾಡಬಾರದೆಂದು ಹೇಳುತ್ತಿರ್ದಪಂ —

**ಚಂಪಕಮಾಲಾವೃತ್ತಂ**

ತಾನೆಜಲ ಪ್ರಸೂನಮುಖಸರ್ವಪದಾರ್ಥಮನನ್ಯರಂ ಪೊಗ
ಳ್ದೇನುಮ ನಾಸೆಗೆಯ್ಯದೆ ನಿಜೇಶ್ವರ ಪೂಜೆಗೆ ಕೊಂಡುಬಂದು ನಿ
ತ್ಯಾನತ ಮರ್ಚಿಪಾತನವನೇ ಸುಖಿಮಿಕ್ಕವನೆಯ್ದೆ ದುಃಖಿಯೆಂ
ಬಾನುಡಿಯೊಳ್ಳಿತಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೧೦೧

**ಟೀಕೆ :** ನಿಜೇಶ್ವರಪೂಜೆಗೆ - ತನ್ನ ಲಿಂಗಪೂಜೆಗೆ, ಅನ್ಯರಂಪೊಗಳ್ದು - ಬೇರೊಬ್ಬರ ಸ್ತುತಿಸಿ, ಏನುಮನಾಸೆಗೆಯ್ಯದೆ - ಏನನ್ನೂ ಬಯಸದೆ, ಜಲಪ್ರಸೂನ ಮುಖಸರ್ವಪದಾರ್ಥಮಂ - ಉದಕಪುಷ್ಪ ಮುಂತಾದ ಸಕಲಪದಾರ್ಥವನ್ನು, ತಾನೆ - ತಾನೆಯೇ, ಕೊಂಡುಬಂದು - ತೆಗೆದುಕೊಂಡು ಬಂದು, ನಿತ್ಯಾನತಂ - ನಿತ್ಯ - ಆವಾಗಲೂ, ಆನತಂ - ನಮ್ರನಾಗಿ, ಅರ್ಚಿಪಾತಂ - ಪೂಜಿಸುವಾತನು, ಅವನೇ - ಆತನೇ, ಸುಖಿ - ಪರಿಣಾಮಿಯು, ಮಿಕ್ಕವಂ - ಉಳಿದಾತನು. ಎಯ್ದೆ - ಚೆನ್ನಾಗಿ, ದುಃಖಿಯೆಂಬ - ದುಃಖಿಯು ತಾನೆಂಬ, ಆ ನುಡಿ - ಆ ವಾಕ್ಯವು, ಒಳ್ಳಿತಯ್ಯ – ಲೇಸುಕಣಯ್ಯ.

**ಭಾವಾರ್ಥಬೋಧಿನಿ :** ತನ್ನ ಲಿಂಗಪೂಜೆಗೆ ಅನ್ಯರನ್ನು ಹೊಗಳಿ, ಅವರಿಂದ ಏನನ್ನೂ ಬಯಸದೆ (ಅನ್ಯರಿಂದ ಪೂಜಾಸಾಧನಗಳನ್ನು ಪಡೆಯದೆ) ಜಲಪುಷ್ಪ ಮೊದಲಾದ ಸಕಲಪೂಜಾದ್ರವ್ಯಗಳನ್ನು ತಾನೇ ತೆಗೆದುಕೊಂಡು ಬಂದು



ಯಾವಾಗಲೂ ನಮ್ರನಾಗಿ, ಲಿಂಗವನ್ನು ಪೂಜಿಸುವಾತನೇ ಸುಖಿಯಾಗುವನು. ಹೀಗೆ ಮಾಡದಾತನು (ಅನ್ಯರನ್ನು ಬೇಡಿತರಿಸುವಾತನು) ದುಃಖಿಯಾಗುವನು ಎಂಬ ವಾಕ್ಯವು ಲೇಸು. ೧೦೧

## ಉತ್ಪಲಮಾಲಾವೃತ್ತಂ

ಆ ನುಡಿಯೊಳ್ಳಿತಾದವೊಲಿದೇಂ ನಡೆಯೊಳ್ಳಿತುಮಾಗದನ್ಯರ
ಲ್ಲಾ ನಿಜದೇಹಮುಖ್ಯ ಕರಣಂಗಳು ತನ್ನವರೇ ವೃಥಾಭಿಮಾ
ನಾನು ಗತತ್ವದಿಂದವರ ಕೈಯೊಳೆ ತಾಂ ತರಿಸಲ್ಕೆ ಯೋಗ್ಯಮೇ
ನೀನೆ ವಿಚಾರಿಸಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೧೦೨

**ಟೀಕೆ** : ಭೋಃ ಪರಮಪ್ರಭುವೇ - ಎಲೆ ಜಗದ್ವಲ್ಲಭನೆ, ಆ ನುಡಿ - ಪರರ ಕೈಯಲ್ಲಿ ತರಿಸಿ ಪೂಜಿಸಬಾರದೆಂಬ ನುಡಿಯು, ಒಳ್ಳಿತಾದವೊಲ್-ಲೇಸಾದ ಹಾಂಗೆ, ಅದು ನಡೆಯುಂ - ಆ ವರ್ತನವೂ, ಒಳ್ಳಿತು ಆಗದು - ಲೇಸಾಗದು, ಅದೇಂ - ಅದೇನು ? ನಿಜದೇಹಮುಖ್ಯಕರಣಂಗಳು - ತನ್ನ ದೇಹದಲ್ಲಿ ಮುಖ್ಯವಾದ ಬುದ್ಧ್ಯಾದಿಕರಣಂಗಳು, ತನ್ನವರೇ - ತನ್ನ ಸಂಬಂಧದವರೇ, ಅನ್ಯರಲ್ಲಾ - ಪರರಲ್ಲಾ, ವೃಥಾಭಿಮಾನಾನುಗತತ್ವದಿಂದೆ - ವ್ಯರ್ಥವಾದ ಅಭಿಮಾನದ ಸಂಗದಲ್ಲಿ ತಿರುಗುವುದರಿಂದೆ, ಅವರ ಕೈಯೊಳೆ - ಆ ಕರಣಂಗಳ ಕೈಯಲ್ಲಿ, ತಾಂ - ತಾನು, ತರಿಸಲ್ಕೆ - ತರಿಸುವುದಕ್ಕೆ, ಯೋಗ್ಯಮೇ - ಉಚಿತವೇ, ಅಲ್ಲ. ನೀನೆ ವಿಚಾರಿಸಯ್ಯ - ನೀನೇ ಪರಾಮರಿಕೆಯ ಮಾಡಯ್ಯ.

**ಭಾವಾರ್ಥಬೋಧಿನಿ** : ಪರಮಪ್ರಭುವೇ, ಪರರ ಕೈಯಲ್ಲಿ ತರಿಸಿ ಪೂಜಿಸಬಾರದೆಂದು ಮೇಲೆ ಹೇಳಿದ ನುಡಿಯು ಲೇಸಾಗಿರುವಂತೆ ನಡೆಯೂ ಲೇಸಾಗಿರಬಾರದೇನು ? ಲೇಸಾಗಿರಬೇಕು. ಹಾಗಾದರೆ ತನ್ನ ದೇಹೇಂದ್ರಿಯಾದಿಗಳು ತನ್ನವೇನು ? ಅವುಗಳೂ ತನಗೆ (ಆತ್ಮಗೆ) ಭಿನ್ನವಾದವುಗಳಲ್ಲವೇನು ? ಹೀಗೆ ಭಿನ್ನವಾದವುಗಳನ್ನು ತನ್ನವೆಂಬಭಿಮಾನದ ಮಮಕಾರದಿಂದ ಆ ದೇಹೇಂದ್ರಿಯಾದಿಗಳಿಂದ ಜಲಪುಷ್ಪಾದಿಗಳನ್ನು ತಾನು ಪೂಜೆಗಾಗಿ ತರಿಸುವುದು ಯೋಗ್ಯವಾಗುವುದೇನು ? ಇಲ್ಲ. ಈ ವಿಷಯವನ್ನು ನೀನೇ ವಿಚಾರಮಾಡಿ ನೋಡು ಸ್ವಾಮಿ. ೧೦೨

## ಉತ್ಪಲಮಾಲಾವೃತ್ತಂ

ತನ್ನವ ರೆಂದೊಡೇಂ ಕೆಲಬರುಂಟೆ ವಿಚಾರಿಸೆ ಲೋಗರೆಂದುತಾ
ನನ್ಯರ ನೋಳ್ಪರುಂಟೆ ಸಕಲರ್ಪರರಲ್ಲ ವಿಭೇದಬುದ್ಧಿಯಿಂ
ತನ್ನವರೆಂಬುದೊಂದುಮಮಕಾರಮೆ ತನ್ನದು ಮಿಕ್ಕ ರೆಲ್ಲರುಂ
ಮುನ್ನಮೆ ಲೋಗರಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೧೦೩

**ಟೀಕೆ :** ವಿಭೇದಬುದ್ಧಿಯಿಂ - ಭೇದವಿಲ್ಲದ ಬುದ್ಧಿಯಿಂದೆ, ವಿಚಾರಿಸೆ - ವಿಚಾರಿಸಲಾಗಿ, ತನ್ನವರೆಂದೊಡೇಂ - ತನ್ನವರೆಂದೊಡೇನು ? ಕೆಲಬರುಂಟೆ - ಕೆಲಬರೊಳರೆ ? ಲೋಗರೆಂದು - ಅನ್ಯರೆಂದು, ತಾಂ - ತಾನು, ಅನ್ಯರ - ಪರರನ್ನು, ನೋಳ್ಪರುಂಟೆ - ನೋಡುವರುಂಟೆ? ಇಲ್ಲ. ಸಕಲರ್ - ಎಲ್ಲರೂ, ಪರರಲ್ಲ - ಅನ್ಯರಲ್ಲ, ವಿಭೇದ ಬುದ್ಧಿಯಿಂ - ಭೇದವಂಮಾಳ್ಪಬುದ್ಧಿಯಿಂದೆ, (ಇಲ್ಲಿ ಪದಭಂಗಶ್ಲೇಷೆ) ತನ್ನವರೆಂಬುದೊಂದು ಮಮಕಾರಮೆ - ತನ್ನವರೆಂಬ ಮಮಕಾರವೊಂದೇ, ತನ್ನದು - ತನ್ನಸಂಬಂಧವು, ಮಿಕ್ಕರೆಲ್ಲರುಂ - ಉಳಿದವರೆಲ್ಲರೂ, ಮುನ್ನಮೆ - ಮೊದಲೇ, ಲೋಗರಯ್ಯ - ಅನ್ಯರಯ್ಯ.

**ಭಾವಾರ್ಥಬೋಧಿನಿ :** ಭೇದರಹಿತ ಬುದ್ಧಿಯಿಂದ ವಿಚಾರಿಸಲಾಗಿ ಲೋಕದಲ್ಲಿ ತನ್ನವರೆಂಬುವರು ಕೆಲವರುಂಟೆ? ತನಗೆ ಅನ್ಯರಾದವರೆಂಬುವರು ಹಲವರಿರುವರೇನು ? ಯಾರೂ ಅನ್ಯರಾದವರಿಲ್ಲ. (ತಾನೂ ಇತರರೂ ಶಿವಾಂಶಜಾತರಾದುದರಿಂದ ಸರ್ವರೂ ಒಂದೇ.) ಇನ್ನು ಭೇದಬುದ್ಧಿಯಿಂದ ಹೇಳುವುದಾದರೆ ತನ್ನವರಿರುವರೆಂಬ ಮಮಕಾರವೊಂದೇ ತನ್ನದಾಗುವುದು. ಉಳಿದುದೆಲ್ಲವೂ ಅನ್ಯವಾಗಿಯೇ ಇರುವುದು. ೧೦೩

## ಉತ್ಪಲಮಾಲಾವೃತ್ತಂ

ತನ್ನವರನ್ಯ ರೆಂಬುಭಯಭಾವ ಮದಿಲ್ಲದೆ ನೋಳ್ಪೊಡೆಲ್ಲರುಂ
ನಿನ್ನವ ರೆಂದವರ್ಗ್ಗಳೊಲಿದಿತ್ತ ಜಲಪ್ರಸವಾದಿವಸ್ತುವಿಂ
ನಿನ್ನನೆ ಪೂಜಿಪಾತನವನೇ ಸುಖಿಮಿಕ್ಕವ ನೆಯ್ದೆ ದುಃಖಿ ಮ
ತ್ತಿನ್ನು ವಿಚಾರವೇನು ಪರಮಪ್ರಭುವೇ ಮಹದೈಪುರೀಶ್ವರಾ ೧೦೪

**ಟೀಕೆ :** ಭೋಃಪರಮಪ್ರಭುವೇ - ಎಲೈಜಗದ್ವಲ್ಲಭನೇ, ನೋೞ್ಪೊಡೆ - ವಿಚಾರಿಸುವೊಡೆ, ತನ್ನವರ್ಅನ್ಯರ್ ಎಂಬ - ತನ್ನವರು ಪರರು ಎಂಬ, ಉಭಯ ಭಾವಂ - ಭಿನ್ನಭಾವವು, ಅದಿಲ್ಲದೆ - ಅದು ತಾನಿಲ್ಲದೆ, ಎಲ್ಲರಂ - ಸರ್ವರೂ, ನಿನ್ನವರೆಂದು - ನಿನ್ನ ಸಂಬಂಧವವರೆಂದು, ಅವರ್ಗಳ್ - ಅವರು, ಒಲಿದಿತ್ತ - ಪ್ರೀತಿಯಿಂದಕೊಟ್ಟ, ಜಲಪ್ರಸವಾದಿವಸ್ತುವಿಂ – ಉದಕಪುಷ್ಪ ಮೊದಲಾದ ದ್ರವ್ಯಂಗಳಿಂ, ನಿನ್ನನೆ - ನಿನ್ನನೊಬ್ಬನನ್ನೇ, ಪೂಜಿಪಾತಂ - ಪೂಜಿಸುವಾತನು, ಅವನೇ - ಆತನೇ, ಸುಖಿ - ಪರಿಣಾಮಿಯು, ಮಿಕ್ಕವಂ - ಉಳಿದಾತನು, ಎಯ್ದೆ - ಚೆನ್ನಾಗಿ, ದುಃಖಿ - ದುಃಖವುಳ್ಳಾತನು, ಮತ್ತೆ - ಮರಳಿ, ಇನ್ನುವಿಚಾರಿಸಲೇನು - ಇನ್ನು ವಿವೇಕವಾವುದು ?

**ಭಾವಾರ್ಥಬೋಧಿನಿ :** ಪರಮಪ್ರಭುವೆ, ವಿಚಾರಮಾಡಿನೋಡಲಾಗಿ - ತನ್ನವರು ಅನ್ಯರು - ಎಂಬ ಭಿನ್ನಭಾವವಿಲ್ಲದೆ, ಸರ್ವರೂ ನಿನ್ನವರೆಂದು (ಶಿವನವರೆಂದು) ತಿಳಿದು, ಅವರು ಪ್ರೀತಿಯಿಂದ ಕೊಟ್ಟ ಜಲಪುಷ್ಪಾದಿ ವಸ್ತುಗಳಿಂದ ನಿನ್ನನ್ನೇ ಪೂಜಿಸುವಾತನು ಸುಖಿಯಾಗಿರುವನು. ಉಳಿದವರು ದುಃಖಿಗಳು. ಇನ್ನು ಮರಳಿ ವಿಚಾರಿಸುವುದೇನಿರುವುದು ? ಇಲ್ಲ. ೧೦೪

**ಉತ್ಪಲಮಾಲಾವೃತ್ತಂ**

ಯಾಕಿವ ಪಾತಕರಾಗನು ಶಿವಾರ್ಚನೆಯಂ ಜಲಪುಷ್ಪಮುಖ್ಯ ಕಾ
ಲೋಚಿತವಸ್ತುವಂ ಪರರಪೆಂದಕಟಾ ಪುಸಿಮಾತನಾಡಿ ತಾ
ವೇ ಚಪಲತ್ವದಿಂ ಮಡುವಿನಗ್ಘಣಿಯಂ ಗಿಡುವಿಂ ಪ್ರಸೂನಮಂ
ಯಾಚಿಸಿ ತರ್ಪರೇಕೆ ಪರಮಪ್ರಭುವೇ ಮಹದೈಪುರೀಶ್ವರಾ ೧೦೫

**ಟೀಕೆ :** ಜಲಪುಷ್ಪ ಮುಖ್ಯ ಕಾಲೋಚಿತವಸ್ತುವಂ-ಜಲಪುಷ್ಪಮುಖ್ಯ-ಉದಕ ಪುಷ್ಪ ಮೊದಲಾದ, ಕಾಲೋಚಿತ ವಸ್ತುವಂ - ಕಾಲೋಚಿತ ದ್ರವ್ಯವನು, ಪರರ ಪೆಂದು - ಅನ್ಯರಪೆಂದು, ಅಕಟಾ - ಅಯ್ಯೊ, ಪುಸಿಮಾತನಾಡಿ – ಸಟಿಯಮಾತ ನುಡಿದು, ತಾವೇ - ತಮ್ಮತಾವೇ, ಚಪಲತ್ವದಿಂ - ಚಪಲತನದಿಂದ, ಮಡುವಿಂ - ಹಳ್ಳದಿಂದೆ, ಅಗ್ಘಣಿಯುಂ – ಉದಕವನ್ನು, ಗಿಡುವಿಂ – ಗಿಡುವಿನಿಂದೆ, ಪ್ರಸೂನ

ಮಂ – ಪುಷ್ಪವನು, ಯಾಚಿಸಿತರ್ಪರೇಕೆ – ಏತಕ್ಕೆ ಬೇಡಿಕೊಂಡು ತರ್ಪರು, ಶಿವಾರ್ಚನೆಯುಂ – ಲಿಂಗಪೂಜೆಯನು, ಯಾಚಿಸಿ ಮಾಡಲಾಗದು – ಬೇಡಿತಂದು ಮಾಡಬಾರದು.

ಭಾವಾರ್ಥಬೋಧಿನಿ : ಸ್ವಾಮಿ, ಕಾಲೋಚಿತವಾದ ಜಲಪುಷ್ಪಾದಿ ವಸ್ತುಗಳು ಅನ್ಯರವೆಂದು ಅಯ್ಯೋ, ಪುಸಿಮಾತಾಡಿಕೊಂಡು ಮತ್ತು ತಾವೇ ಚಾಪಲ್ಯದಿಂದ ಮಡುವಿನಿಂದ ನೀರನ್ನೂ, ಗಿಡುವಿನಿಂದ ಹೂವನ್ನೂ ಯಾಚಿಸಿ ತರುವರೇಕೆ ? ಜಲ ಪುಷ್ಪಾದಿಗಳು ಅನ್ಯರವೆಂದು ತಿಳಿದಮೇಲೆ ಅವನ್ನು ಯಾಚಿಸಿ ತಂದು ಲಿಂಗಪೂಜೆ ಮಾಡಬಾರದು. (ಲಿಂಗಪೂಜೆಯ ವಸ್ತುಗಳು ಶಿವನವೆಂದೇ ತಿಳಿದ ಲಿಂಗಪೂಜೆ ಮಾಡಬೇಕಲ್ಲದೆ, ಅವು ಅನ್ಯರವೆಂದು ತಿಳಿದು ಲಿಂಗಪೂಜೆ ಮಾಡಬಾರದೆಂದು ತಾತ್ಪರ್ಯ. ೧೦೫

## ಉತ್ಪಲಮಾಲಾವೃತ್ತಂ

ತಾನೆ ನಿಜೇಷ್ಟಲಿಂಗಯಜನೋಚಿತವಸ್ತುವ ನೊಲ್ದು ಕೊಂಡುಬಂ
ದೇನುಮ ನನ್ಯರಪ್ಪವರು ತಂದುದನೊಲ್ಲದೆ ಪೂಜೆಗೆಯ್ವವಂ
ಮಾನವನಲ್ಲವಂ ಶರಣನನ್ಯರು ತಂದುದ ನೀಸಿಕೊಂಬವಂ
ಮಾನವನೈಸೆ ದೇವ ಪರಮಪ್ರಭುವೇ ಮಹದೈಶ್ವರೀಶ್ವರಾ ೧೦೬

ಟೀಕೆ : ದೇವ - ಎಲೈ ಸ್ವಯಂಪ್ರಕಾಶನೆ, ನಿಜೇಷ್ಟಲಿಂಗಯಜನೋಚಿತ ವಸ್ತುವಂ - ತನ್ನ ಇಷ್ಟಲಿಂಗಪೂಜೆಗೆ ಯೋಗ್ಯವಾದವಸ್ತುವನು, ತಾನೆ - ತನ್ನಿಂದ ತಾನೇ, ಒಲ್ದು - ಪ್ರೀತಿಯಿಂದೆ, ಕೊಂಡುಬಂದು - ತೆಗೆದುಕೊಂಡುಬಂದು, ಅನ್ಯ ರಪ್ಪವರು - ಪರರಾದವರು, ತಂದುದಂ - ತಂದಂಥ, ಏನುಮಂ - ಏನನ್ನೂ, ಒಲ್ಲದೆ - ಬಿಟ್ಟು, ಪೂಜೆಗೆಯ್ವವಂ - ಪೂಜೆಯ ಮಾಡುವಾತನು, ಮಾನವನಲ್ಲ - ಮನುಷ್ಯನಲ್ಲ, ಅವಂ - ಅವನು, ಶರಣಂ - ಶಿವಶರಣನು, ಅನ್ಯರುತಂದುದಂ - ಪರರುತಂದುದನು, ಈಸಿಕೊಂಬವಂ - ತೆಗೆದುಕೊಂಬಾತನು, ಮಾನವನೈಸೆ - ಮನುಷ್ಯನಷ್ಟೆ? ಅಹುದು.

ಭಾವಾರ್ಥಬೋಧಿನಿ : ಪರಶಿವನೆ, ತನ್ನ ಇಷ್ಟಲಿಂಗಪೂಜೆಗೆ ಯೋಗ್ಯ ವಾದ ವಸ್ತುವನ್ನು ತಾನೇ ಪ್ರೀತಿಯಿಂದ ತೆಗೆದುಕೊಂಡುಬಂದು, ಅನ್ಯರು ತಂದು

ಕೊಡುವ ಯಾವುದೊಂದನ್ನೂ ತೆಗೆದುಕೊಳ್ಳದೆ ಲಿಂಗಪೂಜೆಮಾಡುವಾತನು ಮನುಷ್ಯಮಾತ್ರನೆನಿಸಿಕೊಳ್ಳದೆ ಶರಣನೆನಿಸಿಕೊಳ್ಳುವನು. ಅನ್ಯರು ತಂದವಸ್ತುವನ್ನು ತೆಗೆದುಕೊಂಡು ಪೂಜಿಸತಕ್ಕವನು ಮನುಷ್ಯಮಾತ್ರನೆನಿಸಿಕೊಳ್ಳುವನು ೧೦೬

**ಚಂಪಕಮಾಲಾವೃತ್ತಂ**

ಕರಚರಣಾದಿಗಳ್ಪರಿಕಿಸಲ್ ತನಗನ್ಯರವರ್ಗೆ ಮತ್ತದೇಂ
ಹೊರೆವನೆ ಬಾಳ್ದು ತನ್ನ ಶಿವಪೂಜೆಗೆ ತಾಂ ತರಲೊಲ್ಲವನ್ಯರಿಂ
ತರಿಸಿ ಜಲಪ್ರಸೂನಫಲವಸ್ತುಗಳಿಂ ಶಿವಪೂಜೆಗೆಯ್ವನೇ
ಶರಣನಿದಾವಭಕ್ತಿ ಪರಮಪ್ರಭುವೇ ಮಹದೈಪುರೀಶ್ವರಾ ೧೦೭

**ಟೀಕೆ:** ಪರಿಕಿಸಲ್ - ವಿಚಾರಿಸಲಾಗಿ, ಕರಚರಣಾದಿಗಳ್ - ಹಸ್ತಪಾದ ಮೊದಲಾದುವು, ತನಗೆ ಅನ್ಯರೆ - ತನಗೆ ಬೇರೆಯೆ? ಅವರ್ಗೆ - ಆ ಹಸ್ತ-ಪಾದಂಗಳಿಗೆ, ಮತ್ತೆ - ಮರಳಿ, ಬಾಳ್ದು - ಬದುಕಿ, ಅದೇಂ ಹೊರೆವನೆ - ಅದೇನು ರಕ್ಷಿಸುವನೆ? ಶರಣಂ - ಶಿವಶರಣನು, ತನ್ನ ಶಿವಪೂಜೆಗೆ - ತನ್ನ ಲಿಂಗಪೂಜೆಗೆ, ತಾಂ ತರಲೊಲ್ಲದೆ - ತಾನು ತರಲೊಲ್ಲದೆ, ಅನ್ಯರಿಂ ತರಿಸಿ - ಪರರಿಂದೆ ತರಿಸಿ, ಜಲಪ್ರಸೂನ ಫಲವಸ್ತುಗಳಿಂ - ಉದಕ ಪುಷ್ಪ ಫಲಂಗಳು ಮೊದಲಾದ ದ್ರವ್ಯಂಗ-ಳಿಂದೆ, ಶಿವಪೂಜೆಯಂಮಾಡುವನೇ? ಮಾಡನು, ಇದಾವಭಕ್ತಿ - ಇದೇತರ ಭಕ್ತಿಯು?

**ಭಾವಾರ್ಥಬೋಧಿನಿ :** ಪ್ರಭುವೆ, ವಿಚಾರಮಾಡಿ ನೋಡಲಾಗಿ ಕರಚರ-ಣಾದಿಗಳು ತನಗೆ ಬೇರೆಯಾದವುಗಳೇನು ? ಅಲ್ಲ. ಆ ಕರಚರಣಾದಿಗಳನ್ನು ರಕ್ಷಿಸು ವುದಕ್ಕಾಗಿಯೇ ತಾನು ಬದುಕಿರುವನೇನು? ಅದೇನೂ ಇಲ್ಲ. ಆದುದರಿಂದ ತನ್ನ ಅವಯವಗಳನ್ನು ದಣಿಸಿ, ಜಲಪುಷ್ಪಫಲಂಗಳು ಮೊದಲಾದ ವಸ್ತುಗಳನ್ನು ತಾನೇ ತಂದುಕೊಳ್ಳದೆ, ಪರರಿಂದ ತರಿಸಿ, ಲಿಂಗಪೂಜೆಯಂ ಮಾಡುವನೇ ? ಮಾಡನು. ಅನ್ಯರಿಂದ ವಸ್ತುಗಳನ್ನು ತರಿಸಿ ಪೂಜೆಮಾಡುವದು ಎಂತಹಭಕ್ತಿ ? ಅದು ಭಕ್ತಿ ಯಲ್ಲ. ೧೦೭

**ವಿಚಾರ:** ತಾವು ಅನ್ಯರೆಂದು ತಿಳಿಯದೆ ಸರ್ವರೂ ಶಿವನವರು, ಸರ್ವ ವಸ್ತುವೂ ಶಿವನದೆಂದು ತಿಳಿದು, ದಾಸೋಹಂಭಾವದಿಂದ ತಂದು ಕೊಡುವ ವಸ್ತು

ವನ್ನು ತೆಗೆದುಕೊಂಡು ಪೂಜೆಮಾಡಬಹುದು. ಈ ಅಭಿಪ್ರಾಯವನ್ನು ಗ್ರಂಥಕರ್ತನು ೧೦೪ ನೆಯ ಪದ್ಯದಲ್ಲಿ ವ್ಯಕ್ತಪಡಿಸಿರುವನು. ಮತ್ತು ಸರ್ವವೂ ಶಿವನದೆಂದು ಮುಂದೆ ೧೦೮-೧೦೯ ಪದ್ಯಗಳಲ್ಲಿಯೂ ತಿಳಿಸಿರುವನು. ಆದುದರಿಂದ ತಾವು ಅನ್ಯರೆಂದು ತಿಳಿದು, ತರುವವರ ವಸ್ತುಗಳಿಂದ ಪೂಜೆಮಾಡಬಾರದೆಂಬ ಭಾವವು ೧೦೭ ನೆಯ ಪದ್ಯದಲ್ಲಿರುವುದು.

## ಉತ್ಪಲಮಾಲಾವೃತ್ತಂ

ತನ್ನ ಸತೀಸುತಾನುಚರಬಂಧುಜನಂಗಳುಮಿನ್ನು ಮಿತ್ರೆ ಮಿ
ಕ್ಕನ್ಯರುಮಾತ್ಮದೇಹಕರಣಾದಿಗಳುಂ ಸಲೆತಾನುಮೆಲ್ಲರುಂ
ನಿನ್ನವರೆಂದು ನಿನ್ನೊಡವೆಯೆಂದು ನಿಜೇಶ್ವರಪೂಜೆಗೆಯ್ವವಂ
ಧನ್ಯನದೀಗ ಪೂಜೆ ಪರಮಪ್ರಭುವೇ ಮಹದ್ವೈಪುರೀಶ್ವರಾ ೧೦೮

**ಟೀಕೆ :** ಭೋಃಪರಮಪ್ರಭುವೇ - ಎಲೆ ವಿಶ್ವವಲ್ಲಭನೇ, ತನ್ನ ಸತೀಸುತಾನುಚರಬಂಧುಜನಂಗಳುಂ - ತನ್ನ - ತನ್ನ ಸಂಬಂಧವಾದ, ಸತೀ - ಸ್ತ್ರೀಯು, ಸುತ - ಪುತ್ರರು, ಅನುಚರ - ಸೇವಕರು, ಬಂಧುಜನಂಗಳುಂ - ನಂಟರುಗಳೂ, ಇನ್ನು ಮಿತ್ರೆ - ಮಿತ್ರರ, ಮಿಕ್ಕ - ಉಳಿದಂಥ, ಅನ್ಯರುಂ - ಪರರೂ, ಆತ್ಮದೇಹಕರಣಾದಿಗಳುಂ - ತನ್ನ ದೇಹದಲ್ಲಿರ್ಪ ಕರಣ ಮೊದಲಾದುವು, ಸಲೆ - ಚೆನ್ನಾಗಿ, ತಾನುಂ - ತಾನೂ, ಎಲ್ಲರುಂ - ಸರ್ವರೂ, ನಿನ್ನವರೆಂದು - ನಿನ್ನ ಸಂಬಂಧದವರೆಂದು, ನಿನ್ನೊಡವೆಯೆಂದು - ನಿನ್ನ ದ್ರವ್ಯವೆಂದು, ನಿಜೇಶ್ವರ ಪೂಜೆಗೆಯ್ವವಂ - ತನ್ನ ಶಿವಲಿಂಗಪೂಜೆಯ ಮಾಡುವಾತನು, ಧನ್ಯಂ - ಕೃತಾರ್ಥನು, ಅದೀಗಪೂಜೆ - ಅದೀಗ ಶಿವಲಿಂಗಪೂಜೆಯು

(ಈ ಅರ್ಥದಲ್ಲಿ —

" ದ್ರವ್ಯಾರ್ಥಂ ಚ ಮಹಾದೇವಃ ದ್ರವ್ಯರೂಪೋ ಮಹೇಶ್ವರಃ
ಇತೀಪಥೇಮೋನೋನಾಸ್ತಿ ಸರ್ವರೂಪಸ್ಸದಾಶಿವಃ

ಎಂದುಂಟು.)

**ಭಾವಾರ್ಥಬೋಧಿನಿ :** ಪರಮಪ್ರಭುವೆ, ತನ್ನ ಪತ್ನೀ ಪುತ್ರಬಂಧುಗಳೂ, ಸೇವಕರೂ, ಇನ್ನುಳಿದವರೂ, ತನ್ನ ದೇಹೇಂದ್ರಿಯಾದಿಗಳೂ, ತಾನೂ ನಿನ್ನವರು-(ಶಿವಸ್ವರೂಪರು) ಎಲ್ಲವೂ ನಿನ್ನ ವಸ್ತುಗಳು - ಹೀಗೆಂದು ತಿಳಿದುಕೊಂಡು ಶಿವಲಿಂಗಪೂಜೆ ಮಾಡುವವನೇ ಧನ್ಯನು. ಅವನ ಪೂಜೆಯೇ ನಿಜವಾದ ಪೂಜೆ. ೧೦೮

**ಅವತಾರಿಕೆ :** ಇಂತೀ ಸಮಸ್ತಪದಾರ್ಥಂಗಳಂ ಕೊಡುವಾತನೂ ಶಿವನಲ್ಲದೆ ಬೇರಲ್ಲವೆಂದು ಪೇಳುತ್ತಿರ್ದಪಂ.

**ಚಂಪಕಮಾಲಾವೃತ್ತಂ**

ಕುಡುವವನಾರು ಕೊಂಬುವನವಾರು ವೃಥಾ ಭ್ರಮೆಯೇಕೆ ಬೇಡ ಮಾ
ಣ್ಗುಡುವವನುಂ ಬಲಾತ್ಕರಿಸಿ ಕೊಂಬವನುಂ ಶಿವನೆಂದು ವೇದ ಮು
ಗ್ಗಡಿಸುತೆ ದಾತೃಭೋಕ್ತೃ ಸಕಲಂ ನೆರೆನೀನೆನುತಿರ್ಪ ವಾಕ್ಯಮಂ
ಪಿಡಿವುದೆ ಭಕ್ತಿಯುಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೧೦೯

**ಟೀಕೆ :** ಭೋಪರಮಪ್ರಭುವೇ - ಎಲೈ ಜಗದ್ವಲ್ಲಭನೆ, ಕುಡುವವಂ - ಭಕ್ತಿ ಪದಾರ್ಥಂಗಳ ಕೊಡುವಾತನು, ಆರು - ಯಾರು? ಕೊಂಬವಂ - ತೆಗೆದುಕೊಂಬಾತನು, ಅವಾರು - ಯಾರು? ವೃಥಾ - ವ್ಯರ್ಥವಾಗಿ, ಭ್ರಮೆಯೇಕೆ - ಭ್ರಾಂತಿಯೇಕೆ? ಬೇಡ - ವಿಸರ್ಜಿಸು, ಮಾಣ್ - ಬಿಟ್ಟು, ಕುಡುವವನುಂ - ಕೊಡುವಾತನೂ, ಬಲಾತ್ಕರಿಸಿ - ಬಲ್ಮೆಯಿಂದೆ, ಕೊಂಬವನುಂ - ತೆಗೆದುಕೊಂಬಾತನೂ, ಶಿವನೆಂದು - ಮಹಾಲಿಂಗವೆಂದು, ವೇದಮುಗ್ಗಡಿಸುತೆ - "ನಾಹಂ ಕರ್ತಾನಾಹಂ ಭೋಕ್ತಾನಾಹಂ ಕಾರಯಿತಾ" ಎಂದು ತೈತ್ತಿರಿಯೋಪನಿಷತ್ತು ಬೊಬ್ಬಿಡುತ್ತೆ, ದಾತೃಭೋಕ್ತೃ ಸಕಲಂ - ಕೊಡುವಾತನೂ ಭುಂಜಿಸುವಾತನೂ ಸರ್ವರೂ, ನೆರೆ - ಚೆನ್ನಾಗಿ, ನೀನೆನುತಿರ್ಪವಾಕ್ಯಮಂ - ನೀನೆಯೆಂದು ಹೇಳುವ ವೇದವಾಕ್ಯವನು, ಪಿಡಿವುದೆ - ಗ್ರಹಿಸುವುದೇ, ಭಕ್ತಿಯುಯ್ಯ - ಶಿವಭಕ್ತಿಯುಯ್ಯ

(ಈ ಅರ್ಥದಲ್ಲಿ ಪುರಾಣವಚನವು—

ಶಿವೋದಾತಾ ಶಿವೋಭೋಕ್ತಾ ಶಿವಸ್ಸರ್ವಮಿದಂ ಜಗತ್
ಶಿವೋಯಜತಿ ತತ್ಸರ್ವಂತಚ್ಛಿವಸ್ಸೋಹ ಮೇವಚ"

ಎಂದುಂಟು.

**ಭಾವಾರ್ಥಬೋಧಿನಿ :** ಪರಮಪ್ರಭುವೆ, ಭಕ್ತಿ ಪದಾರ್ಥಂಗಳೆಲ್ಲವನ್ನೂ ಕೊಡುವಾತನು ಯಾರು ? ನಾನು ಅರ್ಪಿಸುವವನು. ಅರ್ಪಿತವಸ್ತುಗಳನ್ನು ಸ್ವೀಕರಿಸುವವನು ನೀನು - ಎಂಬ ಬರಿಯ ಭ್ರಾಂತಿಯು ಪ್ರಯೋಜನವಿಲ್ಲ ಕೊಡುವಾತನೂ, ಕೊಟ್ಟುದನ್ನು ಸ್ವೀಕರಿಸುವಾತನೂ ಶಿವನೆಂದು ವೇದವಾಕ್ಯವು ಘೋಷಿಸುವುದಲ್ಲವೇ ? ಆದುದರಿಂದ ಕೊಡುವಾತನೂ ತೆಗೆದುಕೊಳ್ಳುವಾತನೂ ಸರ್ವವೂ ನೀನೇ ಎಂದು ಸಾರುವ ತದ್ವಾಕ್ಯವನ್ನು ನಂಬಿ ಆಚರಿಸುವುದೇ ನಿಜವಾದ ಭಕ್ತಿಯೆನಿಸುವುದು. ೧೧೯

## ಉತ್ಪಲಮಾಲಾವೃತ್ತಂ

ಬರ್ಪುದು ಬಾರದೆಂಬುಭಯಸಂಶಯಮಿಲ್ಲಹುದಾಗದೆಂಬುದಿ
ಲ್ಲೊಪ್ಪಚಿಭೇದ ಮಿಲ್ಲಶಿವಲಿಂಗದೊಳಂ ಮಿಗೆನೋಡೆತನ್ನೊಳಂ
ತಪ್ಪದೆ ಸರ್ವಮಂ ಶಿವಮುಖಾರ್ಪಿತಮಂ ನೆರೆಮಾಡಿಭೋಗಿಸು
ತ್ತಿರ್ಪವರಾದ್ಯರಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ೧೧೦

**ಟೀಕೆ :** ಬರ್ಪುದುಬಾರದೆಂಬ - ಬರುವುದು ಬಾರದೆಂಬ, ಉಭಯ ಸಂಶಯಮಿಲ್ಲ - ಎರಡು ಸಂಕಲ್ಪವು ಇಲ್ಲ, ಅಹುದಾಗದೆಂಬುದು - ಅಪ್ಪುದಾಗ ದೆಂಬುದು, ಇಲ್ಲ - ಇಲ್ಲವು, ಮಿಗೆನೋಡಿ - ಚೆನ್ನಾಗಿ ವಿಚಾರಿಸಿ ನೋಡಲಾಗಿ, ಶಿವಲಿಂಗದೊಳಂ - ಶಿವಲಿಂಗದಲ್ಲಿಯೂ, ತನ್ನೊಳಂ - ತನ್ನಲ್ಲಿಯೂ, ಒಪ್ಪಚಿಭೇದ ಮಿಲ್ಲ - ಕಿಂಚಿತೂ ಭೇದವಿಲ್ಲ, ತಪ್ಪದೆ - ಏನೂ ತಪ್ಪದೆ, ಸರ್ವಮಂ - ಎಲ್ಲವನ್ನೂ ಶಿವಮುಖಾರ್ಪಿತಮಂ - ಶಿವಲಿಂಗಮುಖಕ್ಕೆ ಅರ್ಪಿಸುವುದನ್ನು, ನೆರೆಮಾಡಿ - ಚೆನ್ನಾಗಿಮಾಡಿ, ಭೋಗಿಸುತ್ತಿರ್ಪವರ್ - ಅನುಭವಿಸುತ್ತಿರ್ಪರು, ಆದ್ಯರಯ್ಯ - ಶಿವಶರಣರಯ್ಯ.

**ಭಾವಾರ್ಥಬೋಧಿನಿ :** ಇದು ಬರುವುದು, ಇದು ಬರುವುದಿಲ್ಲ, ಇದು ಆಗುವುದು, ಇದು ಆಗುವುದಿಲ್ಲವೆಂಬ ಸಂಕಲ್ಪವನ್ನು ತ್ಯಜಿಸಿ, ತನಗೂ ಲಿಂಗಕ್ಕೂ ಕಿಂಚಿತ್ತಾದರೂ ಭೇದವಿಲ್ಲವೆಂದು ವಿಚಾರಮುಖದಿಂದ ತಿಳಿದುಕೊಂಡು, ಸರ್ವ ವನ್ನೂ ಲಿಂಗಮುಖದಲ್ಲಿ ಅರ್ಪಿಸಿ, ತತ್ಪ್ರಸಾದಸುಖವನ್ನು ಅನುಭವಿಸಬೇಕು. ಹೀಗೆ ಅನುಭವಿಸುವವರು ಶಿವಶರಣರಾಗಿರುವರು. ೧೧೦

**ಅವತಾರಿಕೆ :** ಗ್ರಂಥಸಮಾಪ್ತಿಯಲ್ಲಿ ಪುರಾತನರ ಅನುಗ್ರಹಮಂ ಕೊಡು ಎಂದು ಶಿವನಂ ಕುರಿತು ಪ್ರಾರ್ಥಿಸುತ್ತಿರ್ದಪಂ—

## ಚಂಪಕಮಾಲಾವೃತ್ತಂ

ಎಸೆವವೃಷಾಧಿರಾಟ್ಚೆನ್ನ ವೃಷಾಂಕ ಗುಹೇಶ್ವರನಲ್ಲಮ ಪ್ರಪೂ
ರ್ಣ ಸುಲಭಯೋಗಿನಾಥ ಮಹದೇವಿ ಮಹಾಸತಿ ಸಿದ್ಧರಾಮಮು
ಖ್ಯ ಸಕಲ ಲಿಂಗಸಂಗ ನಿಜನಿಷ್ಠ ಪುರಾತನರುನ್ನತಪ್ರಸಾ
ದ ಸುಖವನಿತ್ತು ಕಾಯಿ ಪರಮಪ್ರಭುವೇ ಮಹದೈಪುರೀಶ್ವರಾ ೧೧೧

**ಟೀಕೆ :** ಭೋ ಪರಮಪ್ರಭುವೇ – ಎಲೈ ಜಗದ್ವಲ್ಲಭನೇ, ಎಸೆವ – ಒಪ್ಪುತ್ತಿರ್ಪ, ವೃಷಾಧಿರಾಟ್– ಬಸವರಾಜದೇವರು, ಚೆನ್ನವೃಷಾಂಕ – ಚೆನ್ನಬಸವೇಶ್ವರನೆಂಬ ಹೆಸರುಳ್ಳಾತನು, ಅಲ್ಲಮಪ್ರಪೂರ್ಣ ಸುಲಭಯೋಗಿನಾಥ – ಅಲ್ಲಮ – ಅಲ್ಲಮಪ್ರಭುವೆಂಬ, ಪ್ರಪೂರ್ಣ – ಜಗದ್ಭರಿತನಾದ, ಸುಲಭ – ಭಕ್ತರ್ಗೆ ಸುಲಭನಾದ, ಯೋಗಿ – ಶಿವಯೋಗೀಶ್ವರರುಗಳಿಗೆ, ನಾಥ – ಒಡೆಯನಾದಾತನು, ಮಹದೇವಿ ಮಹಾಸತಿ – ಮಹಾದೇವಿಯೆಂಬ ಮಹಾಶರಣೆಯು, ಸಿದ್ಧರಾಮಮುಖ್ಯ ಸಕಲಲಿಂಗಸಂಗ ನಿಜನಿಷ್ಠ ಪುರಾತನರ – ಸಿದ್ಧರಾಮ– ಸಿದ್ದರಾಮೇಶ್ವರನು ಮುಖ್ಯ - ಮುಂತಾದ, ಸಕಲ – ಸಮಸ್ತರಾದ, ಲಿಂಗಸಂಗನಿಜನಿಷ್ಠ–ಲಿಂಗದಲ್ಲಿ, ಸಂಬಂಧಿಸಲ್ಪಟ್ಟ ಸಹಜನಿಷ್ಠೆಯುಳ್ಳ, ಪುರಾತನರ – ಆದ್ಯರುಗಳ, ಉನ್ನತಪ್ರಸಾದಸುಖಮಂ - ಹೆಚ್ಚುಗೆಯಾದ ಅನುಗ್ರಹಾನಂದವನ್ನು, ಇತ್ತು - ಕೊಟ್ಟು, ಕಾಯಿ – ರಕ್ಷಿಸು.

**ಭಾವಾರ್ಥಬೋಧಿನಿ :** ಜಗದ್ವಲ್ಲಭನೆ, ಬಸವೇಶ್ವರನು, ಚೆನ್ನಬಸವೇಶ್ವರನು, ಸರ್ವ ಭಕ್ತರಹೃದಯದಲ್ಲಿದ್ದು. ಅವರಿಗೆ ಸುಲಭನಾದ ಅಲ್ಲಮಪ್ರಭು-ಶಿವಯೋಗಿಯು, ಮಹಾದೇವಿಯೆಂಬ ಶಿವಶರಣೆಯು, ಸಿದ್ಧರಾಮ ಶಿವಯೋಗಿಯು ಇವರೇ ಮೊದಲಾದವರ ಲಿಂಗಸಂಗದಲ್ಲಿ ನಿಷ್ಠೆಯುಳ್ಳ ಆದ್ಯರ ಮಹಾನುಗ್ರಹದ ಆನಂದವನ್ನು ನನಗೆ ಅನುಗ್ರಹಿಸಿ ರಕ್ಷಿಸು. ೧೧೧

**ಚಂಪಕಮಾಲಾವೃತ್ತಂ**

ಶತಕ ಮಿದೈಪುರ ಪ್ರಭುಪದಾಂಕಿತ ಮಾದ ಪುರಾತನೋಕ್ತಿ ಸಂ
ಮತ ಮೆನ ಲಪ್ರಯಾಸ ಪದಬಂಧ ನಿಜಾನುಭವಾನುಬಂಧ ಸಂ
ಶೃತಿಭವಬಂಧ ಮಾದುದು ಶಿವೈಕ್ಯಪರಾಯಣ ಭಕ್ತಿಯೋಗ ಸಂ
ಸ್ಥಿತ ಶರಣಾಂಘ್ರಿಪೂಜೆ ಪರಮಪ್ರಭುವೇ ಮಹದೈಪುರೀಶ್ವರಾ ೧೧೨

**ಟೀಕೆ :** ಐಪುರಪ್ರಭುಪದಾಂಕಿತಮಾದ - ಐಪುರದ ಸೋಮೇಶ್ವರನ ಪಾದಕ್ಕೆ ಅಂಕಿತವಾಗಿಮಾಡಲ್ಪಟ್ಟ, ಶತಕಮಿದು - ವೈರಾಗ್ಯಪ್ರತಿಪಾದಕವಾದ ಈ ಶತಕವು, ಪುರಾತನೋಕ್ತಿ - ಪುರಾತನರ ವಚನಂಗಳಿಗೆ, ಸಮ್ಮತಮೆನಲ್ - ಸಂಬಂಧವೆನಲಾಗಿ, ಅಪ್ರಯಾಸಪದಬಂಧ ನಿಜಾನುಭಾವಾನುಬಂಧಸಂಶೃತಿಭವಬಂಧಂ - ಅಪ್ರಯಾಸಪದಬಂಧ - ಪ್ರಯಾಸವಿಲ್ಲದ ಶಬ್ದಸಂಬಂಧವುಳ್ಳುದಾಗಿ, ನಿಜಾನುಭವಾನುಬಂಧ – ಸಹಜವಾದ ಶಿವಜ್ಞಾನದೊಡನೆ ಕೂಡಿದುದಾಗಿ, ಸಂಶೃತಿಭವಬಂಧಂ - ಸಮ್ - ಒಳಿತ್ತಾದ, ಶೃತಿ - ವೇದಂಗಳತ್ತಣಿಂ, ಭವ - ಹುಟ್ಟಿದರ್ಥದ, ಬಂಧಂ - ಸಂಬಂಧವುಳ್ಳುದು, ಶಿವೈಕ್ಯ ಪರಾಯಣಭಕ್ತಿಯೋಗಸಂಸ್ಥಿತ ಶರಣಾಂಘ್ರಿಪೂಜೆ - ಶಿವೈಕ್ಯಪರಾಯಣ - ಶಿವಲಿಂಗೈಕ್ಯದಲ್ಲಿ ತಾತ್ಪರ್ಯವನುಳ್ಳ, ಭಕ್ತಿಯೋಗ - ಶಿವಭಕ್ತಿಯೋಗದಲ್ಲಿ, ಸಂಸ್ಥಿತ - ಚೆನ್ನಾಗಿನೆಲೆಗೊಂಡಿರ್ಪಂಥ, ಶರಣ-ಶಿವಶರಣರುಗಳ, ಅಂಘ್ರಿಪೂಜೆ - ಶ್ರೀಪಾದಂಗಳಪೂಜೆಯು, ಆದುದು - ಆಯಿತು.

**ಭಾವಾರ್ಥ ಬೋಧಿನಿ :** ಐಪುರದ ಸೋಮನಾಥನ ಪಾದಕ್ಕೆ ಅಂಕಿತವಾಗಿ ರಚಿಸಿದ ವೈರಾಗ್ಯಪ್ರತಿಪಾದಕವಾದೀಶತಕವು ಪುರಾತನರ ವಚನಗಳಿಗೆ ಸಮ್ಮತ-ವಾಗಿಯೂ, ಆಯಾಸರಹಿತ ಶಬ್ದಬಂಧಸಹಿತವಾಗಿಯೂ, ಸಹಜವಾದ ಶಿವಾನು-ಭವದೊಡನೆ ಕೂಡಿದುದಾಗಿಯೂ, ವೇದಾರ್ಥಗರ್ಭಿತವಾಗಿಯೂ ಇರುವುದು. ಈ ಗ್ರಂಥವು ಲಿಂಗಾಂಗಸಾಮರಸ್ಯವುಳ್ಳವರೂ ಶಿವಭಕ್ತಿಯೋಗಸಂಸ್ಥಿತರೂ ಆದ ಶಿವಶರಣರ ಶ್ರೀಪಾದದ ಪೂಜೆಯಾಗಿರುವುದು. ಎಂದರೆ ಅವರ ಪಾದಸೇವೆಗೆ ಅರ್ಪಿತವಾಗಿರುವುದು. ೧೧೨

## ಉತ್ಪಲಮಾಲಾವೃತ್ತಂ

ಅಪ್ರತಿಮ ಪ್ರತಿಷ್ಠ ಪರಿಪೂರ್ಣ ಪರಾನುಭವಪ್ರಭಾವ ಭ
ವ್ಯಪ್ರಥಿತಾರ್ಥಮಾದ ಪದಬಂಧಪದೋತ್ತರಭಕ್ತಿಯೋಗಸೌ
ಖ್ಯಪ್ರದಸದ್ಗುರೂಕ್ತಿಮತಸಿದ್ಧಮಿದೀಶತಕಕ್ಕೆ ಮಾಯಿದೇ
ವಪ್ರಭುಲಿಂಗಕರ್ತೃ ಪರಮಪ್ರಭುವೇ ಮಹದೈಪುರೀಶ್ವರಾ ೧೧೩

**ಟೀಕೆ :** ಇದು - ಈ ಶತಕವು, ಅಪ್ರತಿಮ.........ಪ್ರಥಿತಾರ್ಥಮಾದ - ಅಪ್ರತಿಮ - ಸಮಾನವಿಲ್ಲದಂಥ, ಪ್ರತಿಷ್ಠ - ಪ್ರತಿಷ್ಠೆಯನುಳ್ಳ, ಪರಿಪೂರ್ಣ - ವ್ಯಾಪಕವಾದ, ಪರಾನುಭವ - ಉತ್ಕೃಷ್ಟವಾದ ಶಿವಜ್ಞಾನದ, ಪ್ರಭಾವ - ಸಾಮರ್ಥ್ಯದಿಂದ, ಭವ್ಯ - ಒಪ್ಪುತ್ತಿರ್ಪ, ಪ್ರಥಿತ - ಪ್ರಖ್ಯಾತವಾದ, ಅರ್ಥಮಾದ - ಅರ್ಥವನುಳ್ಳ, ಪದ.........ಮತಸಿದ್ಧಂ - ಪದಬಂಧ - ಶಬ್ದಸಂಬಂಧವನುಳ್ಳ, ಪದೋತ್ತರ - ಸಾಲೋಕ್ಯಾದಿಪದಂಗಳಿಗೆ ಮೀರಿದ, ಭಕ್ತಿಯೋಗ - ಭಕ್ತಿಕೂಟವೆಂಬ, ಸೌಖ್ಯ - ಆನಂದವನ್ನು, ಪ್ರದ - ಕೊಡುತ್ತಿರ್ಪ, ಸದ್ಗುರೂಕ್ತಿಮತಸಿದ್ಧಂ - ಸದ್ಗುರೂಕ್ತಿಮತ - ಶ್ರೀಗುರುವಚನಕ್ಕೆ ಸಂಬಂಧವಾಗಿ, ಸಿದ್ಧಂ - ಪ್ರಸಿದ್ಧವು, ಈ ಶತಕಕ್ಕೆ-ಈ ನೂರುಪದ್ಯಂಗಳನುಳ್ಳ ಪ್ರಬಂಧಕ್ಕೆ, ಮಾಯಿದೇವಪ್ರಭುಲಿಂಗ - ಮಾಯಿದೇವಪ್ರಭುವೆಂಬಾಚಾರ್ಯನೇ, ಕರ್ತೃ - ಕರ್ತನು.

ಗದ್ಯ: ಇದು ಸಮಸ್ತ ಶಿವಯೋಗಿಜನಮನೋನಿಲಯ ಶ್ರೀಮನ್ನಿರಂಜನ ಲಿಂಗ ಚರಣ ಸರಸೀರುಹ ಸೌರಭಾಸಕ್ತ ಮತ್ತಮಧುಕರಾಯಮಾಣ ಷಟಸ್ಥಲ ಲಿಂಗಾಂಗ ಸಂಯೋಗಸನ್ಮಾರ್ಗಸಿದ್ಧಾಂತ ಸ್ಥಾಪನಾಚಾರ್ಯ ಪರಮಸುಜ್ಞಾನ ಸತ್ಕ್ರಿಯಾಯುಕ್ತ ಭಕ್ತಿಭರಿತಾಂತರಂಗಪ್ರಣವಪೂರ್ವಕ ಪಂಚಾಕ್ಷರೀ ಮಂತ್ರೋದ್ಧಾರಿತ ಮಂಜುಳ ಭಾಷಾವಿಲಾಸನಪ್ಪ ತೋಂಟದ ಸಿದ್ಧಲಿಂಗದೇಶಿಕನಿಂ ವಿರಚಿತಮಪ್ಪ ಶ್ರೀಮದ್ವೀರ-ಶೈವಾಚಾರಸಾರೋದ್ಧಾರ ಭಕ್ತಿಜ್ಞಾನವೈರಾಗ್ಯಪ್ರತಿಪಾದಕ ಶಿವಾಧವ ಶಿವಾವಲ್ಲಭ ಮಹದೈಪುರೀಶ್ವರಾಂಕಿತ ಶತಕತ್ರಯಮಹಾವ್ಯಾಖ್ಯಾನದೊಳ್ ವೈರಾಗ್ಯಪ್ರತಿಪಾದಕ ಮಹದೈಪುರೀಶ್ವರ ಶತಕಂ.

**ಭಾವಾರ್ಥಬೋಧಿನಿ :** ಈ ಶತಕವು ಅಸದೃಶಪ್ರತಿಷ್ಠೆಯುಳ್ಳ ಪರಿಪೂರ್ಣ ಶಿವಾನುಭವದ ಪ್ರಭಾವದಿಂದ ಶೋಭಿಸುವ ಉತ್ಕೃಷ್ಟಾರ್ಥವನುಳ್ಳ ಶಬ್ದಗಳಿಂದ ಸಹಿತವಾದುದಾಗಿ, ಸಾಲೋಕ್ಯಾದಿ ಚತುರ್ವಿಧ ಪದಗಳಿಗೆ ಮಿಗಿಲಾದ ಶಿವಭಕ್ತಿ ಯೋಗದ ಪರಮಾನಂದವನ್ನುಂಟುಮಾಡುವುದಾಗಿಯೂ, ಶ್ರೀಗುರೂಕ್ತಿಸಮ್ಮತ ವಾಗಿಯೂ ಇರುವುದು. ಇದರ ಕರ್ತೃವು ಮಗ್ಗೆಯಮಾಯಿದೇವಾಚಾರ್ಯ- ನಿರುವನು. ೧೧೩

**ಎಂಬಲ್ಲಿಗೆ ಮಹದೈಪುರೀಶ್ವರಶತಕದ**

**ಕನ್ನಡ ಭಾವಾರ್ಥಬೋಧಿನಿಯು**

**ಮುಗಿದುದು**

**ಶತಕತ್ರಯಂ ಸಂಪೂರ್ಣಂ**

**ಇತಿ ಶಿವಂ**

# ಪದಗಳ ಅಕಾರಾದಿ

## ಶಿವಾಧವಶತಕ

## ಶಿವಾವಲ್ಲಭಶತಕ

## ಮಹದೈಪುರೀಶ್ವರಶತಕ

# ಒಪ್ಪೋಲೆ

(ವೃತ್ತಗಳ ಹೆಸರುಗಳಿರುವ ಪಂಕ್ತಿಯನ್ನು ಬಿಟ್ಟು ಉಳಿದ ಪಂಕ್ತಿಗಳನ್ನು ಎಣಿಸಿಕೊಳ್ಳಬೇಕು)

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨ | ೧೧ | ಸೋಗುರುಃ | ಸ್ನೋಗುರುಃ |
| ೨ | ೧೩ | ಚರವಂ | ಚರಣವಂ |
| ೬ | ೧೮ | ತತ್ವವಿದವಾದ | ತತ್ವವಿದನಾದ |
| ೭ | ೩ | ಪುನಸ್ಮರಿಸಿ | ಪುನಸ್ಸ್ಮರಿಸಿ |
| ೭ | ೧೧ | ಪೆಸರುಳ | ಪೆಸರುಳ್ಳ |
| ೧೨ | ೨೫ | ಚರಿಸುವುದು | ಚರಿಸುವುದರ |
| ೧೩ | ೧ | ಸ್ಥಲತ | ಸ್ಥಲಗತ |
| ೧೩ | ೧೭ | ತತ್ವದ್ವೈ | ತತ್ತ್ವದ್ವೈ |
| ೧೩ | ೨೬ | ನ್ಬುಕ್ತ್ರಾವ | ನ್ಬುಕ್ತ್ವಾ |
| ೧೬ | ೨ | ದೋಳಿಗ | ದೋಳನಗ |
| ೧೬ | ೧೫ | ಹರಿಸೆ | ಹರಿಸಿ |
| ೨೮ | ೮ | ಎಂದುದಾ | ಎಂದ ದಾಗಿ |
| ೩೯ | ೧ | ಆಕಳಾದ | ಆಕಳದ |
| ೪೦ | ೧೦ | ಸ್ವಂಕಾತ | ಸ್ವಕಾಂತ |
| ೪೫ | ೮ | ಅನಾಯಸ | ಅನಾಯಾಸ |
| ೫೨ | ೧೨ | ಅಂಗವಿದು | ಲಿಂಗವಿದು |
| ೫೩ | ೨೩ | ಸ್ಥಲಕಾರಣಾದಿ | ಕಾರಣಾದಿ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೬೨ | ೯ | ಅಹಾಂಗ | ಅಪಾಂಗ |
| ೬೩ | ೨೧ | ರವಿ್ಮಪ್ಪೆಡೆ | ರವಿಪ್ಪೆಡೆ |
| ೬೬ | ೩ | ನಗರ | ನಗಂ |
| ೬೬ | ೩ | ವಾಾಲಿಕಾ | ಮೂಲಿಕಾ |
| ೭೧ | ೧೪ | ಗಿಸರೇನು | ಗಿಸಿದರೇನು |
| ೭೩ | ೧೩ | ಡರಿಯುದ | ದರಿಯುುವ |
| ೭೪ | ೨೨ | ಅವೇ | ಅದೇ |
| ೭೬ | ೧೬ | ರುಧೀರ | ರುಧಿರ |
| ೭೭ | ೨೧ | ಸ್ಯಸ್ತ | ನ್ಯಸ್ತ |
| ೮೧ | ೧೬ | ಅರಿದು | ಅರಿದು |
| ೮೮ | ೯ | ವೋಷ | ವೇಷ |
| ೯೧ | ೧೭ | ಬವಕ್ಕ | ಬಳಿಕ್ಕ |
| ೯೩ | ೯ | ವಿಧೆಂದ್ರಿ | ವಿಧೇಂದ್ರಿ |
| ೯೫ | ೭ | ಧರ್ದುವ | ಧನುರ್ದ |
| ೧೦೧ | ೧೩ | ರಜಿತ | ರಹಿತ |
| ೧೦೫ | ೬ | ನೆಲೆದನೆ | ನೆಲೆವನೆ |
| ೧೦೫ | ೧೦ | ಮಾದ ಪೇ | ಮಾದ ಶತಕವಂ ಪೇ |
| ೧೦೭ | ೯ | ವಕ್ತ್ರದ್ಯಂ | ವಕ್ತ್ರವ್ಯಂ |
| ೧೧೧ | ೨೪ | ಅಳ್ಕಟ | ಅಕ್ಕಟ |
| ೧೧೫ | ೯ | ತಿಪತಿಯೆ | ತೀಪತಿಯೆ |
| ೧೧೫ | ೨೦ | ತೀರ್ಥದಿಂ | ತೀರ್ಥವಮಂ |
| ೧೨೨ | ೧೩ | ಯತ್ತ | ಯತ್ರ |
| ೧೨೯ | ೨ | ವಣ್ತ್ರೆಲ್ಲ | ವಣ್ಣೆಲ್ಲ |
| ೧೩೭ | ೪ | ವ್ಯಥಾ | ವೃಥಾ |
| ೧೩೯ | ೧ | ಅರಿಯರ್ಂ | ಅರಿಯುಂ |
| ೧೩೯ | ೧೬ | ತನ | ತನ್ನ |
| ೧೪೨ | ೧೧ | ವಿಕಾಂಗಡಾ | ವಿಕಾರಂಗಡಾ |
| ೧೪೩ | ೧೫ | ಶಿಗನಾ | ಶಿವನಾ |
| ೧೪೩ | ೨೩ | ಶ್ರೇಷ್ಮವಾ | ಶ್ರೇಷ್ಠವಾದ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧೪೪ | ೭ | ಸಿರಿರಂ | ಸಿರೀಹ |
| ೧೪೪ | ೧೮ | ಸಾಕ್ಷಿಂ | ಸಾಕ್ಷೀ |
| ೧೪೫ | ೯ | ಇಡಿರಿಸಿಟ್ಟು | ಇದಿರಿಟ್ಟು |
| ೧೪೭ | ೧೯ | ಪರದು | ಪರವು |
| ೧೪೮ | ೨೨ | ದಸ್ನವು | ದನ್ಯವು |
| ೧೫೦ | ೧೮ | ದೈವಂಗಳಂ | ದೈವಂಗಳಿಂ |
| ೧೫೧ | ೫ | ಸಿಷ್ಠೆ | ನಿಷ್ಠೆ |
| ೧೫೨ | ೯ | ಸಿಲ್ಕಿದವ | ಸಿಲ್ಕದವ |
| ೧೫೩ | ೧೩ | ಳ್ಡಸರ್ಬಿ | ಳ್ಡವರ್ಬಿ |
| ೧೫೩ | ೧೪ | ವೈರಮುುಂ | ವೈರಮಂ |
| ೧೫೫ | ೨೦ | ಅಯೊ | ಅಯ್ಯೋ |
| ೧೫೬ | ೨ | ನಲ್ಲಿದೂ | ನಲ್ಲಿದೂ |
| ೧೫೭ | ೭ | ಗೈವರೆ | ಗೈವಕ್ಕೈ |
| ೧೫೭ | ೮ | ಸಲ್ಲಿದ | ಸಲ್ಲದೆ |
| ೧೬೧ | ೧೫ | ಯಾತಂತೆ | ಯಾತಂಗೆ |
| ೧೬೩ | ೧೭ | ಜ್ಞಾನೈರ್ಯ | ಜ್ಞಾನೈಶ್ವರ್ಯ |
| ೧೬೪ | ೧೭ | ವ್ಯಾಪ್ತ್ಯವೈಲಕ್ಷ್ಯಕಾತ್ಮ | ವ್ಯಾಪ್ತ್ಯದೈಕಾತ್ಮ್ಯ |
| ೧೬೬ | ೬ | ಪೃಥ್ಯ | ಪೃರ್ಥ |
| ೧೬೮ | ೧೨ | ಸರ್ತಿಸುವ | ಸರ್ಧಿಸುವ |
| ೧೬೯ | ೧೨ | ಲತೆ[illegible]ಂ | ಲತೆಯಿಂ |
| ೧೭೦ | ೧೦ | [illegible] | ಲೋಕಂ |
| ೧೭೧ | ೯ | ತಸ್ನದ | ತಸ್ನವ |
| ೧೭೨ | ೧೬ | ಪು[illegible] | ಪುತ್ರ |
| ೧೭೩ | ೬ | ಮುಪ | ಮು |
| ೧೭೩ | ೮ | ಲುಬ್ಬಂ | ಲುಬ್ಧಂ |
| ೧೭೫ | ೧೩ | ಸಾಧ್ಯವಾದ | ಸಾಧನವಾದ |
| ೧೭೬ | ೨೩ | ಪುಣ್ಯತಾನ | ಪುಣ್ಯತಾನೆ |
| ೧೭೭ | ೮ | ಪ್ರಾಪ | ಪ್ರಾಪ್ತ |
| ೧೭೮ | ೧೬ | ಮೆಲ್ಲಿಂತಾಗಿ | ಮೆಲ್ಲಿಂತಾಗಿ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧೭೯ | ೨೧ | ಯತ್ತಣೆದಿಂ | ಯತ್ತಣಿಂ |
| ೧೮೨ | ೩ | ಚರಿತ್ರೆನೆನಿ | ಚರಿತ್ರನೆನಿ |
| ೧೮೨ | ೭ | ಸಾಮಥ್ಯಂ | ಸಾಮರ್ಥ್ಯಂ |
| ೧೮೨ | ೮ | ನಿಸ್ಸೀಮಂ | ಸ್ಸೀಮಂ |
| ೧೮೩ | ೧ | ಸ್ಥಿತಿಯು | ಸ್ಥಿತಿಯ |
| ೧೮೪ | ೭ | ಹಾಕಲಾ | ಹಾಕಲು |
| ೧೮೫ | ೮ | ರಹಿತನೂ | ರಹಿತವೂ |
| ೧೮೮ | ೫ | ವೆಂಟಾತನಿಗೆ | ವೆಂಬಾತನಿಗೆ |
| ೧೯೨ | ೬ | ಮಿಗವ್ಯಕ್ಯ | ಮಿಗೆವ್ಯಕ್ತ |
| ೧೯೬ | ೧ | ತಿಳೀ | ತೀಳಿ |
| ೧೯೬ | ೯ | ಸಮಾಕ್ರಿಯಾ | ಸಮಾಧಿಕ್ರಿಯಾ |
| ೧೯೬ | ೧೭ | ದಿರುವದು | ದಿರುವನು |
| ೨೦೦ | ೧೯ | ಪೀಣೆ | ಪಣೆ |
| ೨೦೭ | ೨೪ | ಪರಸ್ಪ | ಪರಸ್ಪಷ |
| ೨೦೯ | ೧೮ | ಕ್ರಿ[illegible]ಪಾ | ಕ್ರಿಪಾ |
| ೨೧೪ | ೪ | ಜೀ[illegible]ಂದು | ಜೀರೊಂದು |
| ೨೧೫ | ೨೧ | ಕೊ[illegible]ಡಪ್ಪಟ್ಟ | ಕೊಡಹಲ್ಪಟ್ಟ |
| ೨೩೩ | ೪ | ದೆಸಿ | ದಸೆ |
| ೨೩೩ | ೧೮ | [illegible] | ಪೃಥಾ |
| ೨[illegible]೫ | ೧೫ | ಸ[illegible]ಂಕಿ | ಸೂಂಕಿ |
| ೨೩೭ | ೨ | ಹ[illegible]ತೆ | ಹ[illegible]ಚೆ |
| ೨[illegible]೯ | ೧೪ | ಪ[illegible]ಾರ | [illegible]ಾರದ |
| ೨೩೯ | ೨೧ | ಚೆ[illegible]ದ್ಯವೆ | ಚೆ[illegible]ದ್ಯವೇ |
| ೨[illegible]೧ | ೧೪ | ಡೋ | ಡೂ |
| ೨[illegible]೬ | ೪ | ದಿರ್ಪ | ದರ್ಪೆ |
| ೨[illegible]೮ | ೨ | [illegible]ಯೆ | [illegible]ವಿಯೆ |
| ೨೪೮ | ೪ | ಬ[illegible]ದಿಂ | [illegible]ಂಧದಿಂ |
| ೨[illegible]೦ | ೧೬ | [illegible] | [illegible]ಣನ |
| ೨[illegible]೨ | ೨ | [illegible] | [illegible]ರ್ದ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨೫೪ | ೧೫ | ಅರದೊ | ಅರದೊ |
| ೨೫೫ | ೧೭ | ಬಹ್ಮ | ಬ್ರಹ್ಮ |
| ೨೫೫ | ೧೮ | ತೆನ | ತೇನ |
| ೨೬೬ | ೪ | ಗುರುವುಹ | ವುಃಹ |
| ೨೭೦ | ೫ | ನದದ | ನಂದದ |
| ೨೭೨ | ೨೪ | ವ್ಯಾಪ್ತಿ | ವ್ಯಾಪಿ |
| ೨೭೫ | ೧೫ | ಸಂಗವು | ನಂಗವು |
| ೨೭೮ | ೨೦ | ಜ್ಞೆಯಾ | ಜ್ಞೆಯೂ |
| ೨೮೪ | ೬ | ಯುಲ್ಲಭ | ಯೂಲ್ಲಭ |
| ೨೯೮ | ೭ | ತಿಳಿದ | ತಿಳಿದು |
| ೩೦೪ | ೧೪ | ರುಗಳು | ರುಗಳ |

